# "ಮೈಸೂರು ಒಡೆಯರ ಕಾಲದ ಸೈನಿಕ ವ್ಯವಸ್ಥೆ"

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧನೆ

ನಾಗೇಶ ಹೆಚ್.ಎ

ಮಾರ್ಗದರ್ಶನ

ಡಾ.ಎಸ್.ವೈ.ಸೋಮಶೇಖರ್

ಸಹಾಯಕ ಪ್ರಾಧ್ಯಾಪಕರು






ಸಮಾಜ-ವಿಜ್ಞಾನ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೮

# "ಮೈಸೂರು ಒಡೆಯರ ಕಾಲದ ಸೈನಿಕ ವ್ಯವಸ್ಥೆ"

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

**ಸಂಶೋಧನೆ**
**ನಾಗೇಶ ಹೆಚ್.ಎ**



**ಮಾರ್ಗದರ್ಶನ**
**ಡಾ.ಎಸ್.ವೈ.ಸೋಮಶೇಖರ್**
**ಸಹಾಯಕ ಪ್ರಾಧ್ಯಾಪಕರು**



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೮

# ಸಂಶೋಧಕರ ಪ್ರಮಾಣಪತ್ರ

'ಮೈಸೂರು ಒಡೆಯರ ಕಾಲದ ಸೈನಿಕ ವ್ಯವಸ್ಥೆ' ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ **ಡಾ.ಎಸ್.ವೈ.ಸೋಮಶೇಖರ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ : 08/02/18
ಸ್ಥಳ : ವಿದ್ಯಾರಣ್ಯ

(ನಾಗೇಶ ಹೆಚ್.ಎ.)
ಸಂಶೋಧನ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

**ನಾಗೇಶ ಹೆಚ್.ಎ.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **'ಮೈಸೂರು ಒಡೆಯರ ಕಾಲದ ಸೈನಿಕ ವ್ಯವಸ್ಥೆ'** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 04/07/18
ಸ್ಥಳ : ವಿದ್ಯಾರಣ್ಯ

**(ಡಾ.ಎಸ್.ವೈ.ಸೋಮಶೇಖರ್)**
ಸಹಾಯಕ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಪರಿವಿಡಿ

ಅಧ್ಯಾಯ : ಒಂದು

# ಪ್ರಸ್ತಾವನೆ

ಪ್ರಾಚೀನ ಕಾಲದಿಂದಲೂ ಭಾರತವನ್ನು ಹಲವು ರಾಜಮನೆತನಗಳು ಆಳ್ವಿಕೆ ನಡೆಸಿ ಇತಿಹಾಸದ ಪುಟಗಳಲ್ಲಿ ಸೇರಿವೆ. ಯಾವುದೇ ಸಂಸ್ಥಾನ ಮತ್ತು ಸಾಮ್ರಾಜ್ಯವನ್ನು ಸ್ಥಾಪಿಸುವಲ್ಲಿ ಜನ ಸಮುದಾಯ ಅಥವಾ ಗುಂಪುಗಳ ಪಾತ್ರ ಪ್ರಮುಖ ಹಾಗೂ ಅವುಗಳು ತಮ್ಮ ಜನರನ್ನೇ ಸಾಮ್ರಾಜ್ಯದ ರಕ್ಷಣೆಗಾಗಿ ಬಳಸಿಕೊಂಡು ಅನ್ಯರು ತಮ್ಮ ಮೇಲೆ ನಡೆಸಬಹುದಾದ ಆಕ್ರಮಣಗಳನ್ನು ತಡೆಯಲು ಅಗತ್ಯವಾದ ತಂತ್ರೋಪಾಯಗಳನ್ನು ರೂಪಿಸಿಕೊಂಡವು. ಕ್ರಮೇಣ ಅವು ತಮ್ಮಲ್ಲಿಯೇ ಸಮರ್ಥವಾದ ವ್ಯಕ್ತಿಗಳನ್ನು ಮುಖಂಡನನ್ನಾಗಿ ಆಯ್ಕೆ ಮಾಡಿ ಕುಟುಂಬ, ಸಮುದಾಯ, ಗ್ರಾಮಗಳ ರಕ್ಷಣೆಯನ್ನು ಮಾಡಿಕೊಳ್ಳುತ್ತಿದ್ದವು. ಕಾಲಾನಂತರದಲ್ಲಿ ಮುಖ್ಯಸ್ಥನು ಆಡಳಿತ ಅಧಿಕಾರಿಯಾಗಿ ತನ್ನ ವಿಶೇಷ ಸ್ಥಾನಮಾನವನ್ನು ಬಳಸಿಕೊಂಡು ಪ್ರಜೆಗಳ ರಕ್ಷಕನಾಗಿ ಹೊರಗಿನವರ ಆಕ್ರಮಣಗಳನ್ನು ತಡೆಯಲು ಒಂದು ಸೈನಿಕ ಗುಂಪನ್ನು ತರಬೇತಿಗೊಳಿಸಿ ಸಿದ್ಧಗೊಳಿಸುತ್ತಿದ್ದನು. ಈ ಸ್ವಯಂ ಆಡಳಿತವೇ ಪ್ರಾರಂಭದಲ್ಲಿ ಸಣ್ಣಪುಟ್ಟ ರಾಜ್ಯಗಳಾಗಿ ರೂಪುಗೊಂಡು ವಿವಿಧ ಕಾಲಘಟ್ಟಗಳಲ್ಲಿ ಪ್ರತ್ಯೇಕವಾದ ನಿರ್ದಿಷ್ಟ ಎಲ್ಲೆಗಳನ್ನು ಗುರುತಿಸಿಕೊಂಡವು. ಕಾಲಕ್ರಮೇಣವಾಗಿ ಈ ರಾಜ್ಯಗಳಲ್ಲಿ ಕೋಟೆ-ಕೊತ್ತಲ ಹಾಗೂ ಸೈನ್ಯ ರೂಪುಗೊಂಡು ರಾಜ್ಯ ವಿಸ್ತರಣೆಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದವು. ಅಲ್ಲದೆ ಈ ರೀತಿಯ ವಿಸ್ತರಣಾ ಮನೋಭಾವವು ಪ್ರತಿಷ್ಠೆಯ ಸಂಕೇತವಾಗಿ ಬದಲಾಗಿ ಮುಂದೆ ಅದೇ ರಾಜ್ಯಗಳು ಬಲಿಷ್ಠಗೊಂಡು ಶತ್ರುಗಳಿಂದ ರಕ್ಷಣೆಯನ್ನು ಪಡೆಯಲು ರಾಜ್ಯಗಳು ವಿಶೇಷವಾಗಿ ಕೋಟೆಗಳೆಂಬ ತಡೆಗೋಡೆಗಳನ್ನು ನಿರ್ಮಿಸಿಕೊಂಡವು. ಸಾಮಾನ್ಯವಾಗಿ ನಾಯಕ, ಒಡೆಯ, ಅರಸ, ರಾಜ, ಪ್ರಭು, ಪಾಳೆಯಗಾರ, ಸಾಮ್ರಾಟ ಹೀಗೆ ಅನೇಕ ಹೆಸರುಗಳಿಂದ ರಾಜ್ಯದ ಮುಖ್ಯಸ್ಥರನ್ನು ಕರೆಯಲಾಗುತ್ತಿತ್ತು. ರಾಜ್ಯದ ಆಡಳಿತ ಚುಕ್ಕಾಣಿಯನ್ನು ಹಿಡಿದ ಮುಖ್ಯಸ್ಥನು ರಾಜ್ಯರಕ್ಷಣೆ ಮತ್ತು ಅದರ ಅಭಿವೃದ್ಧಿಗೆ ಬೇಕಾದ ಕ್ರಮಗಳನ್ನು ಕೈಗೊಳ್ಳುತ್ತಿದ್ದನು. ಈ ಕಾರಣದಿಂದ ಮೊದಲಿಗೆ ಆದಿಮಾನವನು ಬೇಟೆಯಾಡಲು ಬಳಸುತ್ತಿದ್ದ ಬಿಲ್ಲು, ಬಾಣ, ಈಟಿಗಳೇ ಮುಂದಿನ ದಿನಗಳಲ್ಲಿ ರಣರಂಗದ ಆಯುಧಗಳಾಗಿ ರೂಪುಗೊಂಡವು. ಕಾಲಾನುಕ್ರಮದಲ್ಲಿ ಇವು ವಿಭಿನ್ನವಾಗಿ

ಮಾರ್ಪಾಡುಗೊಂಡು ಆಧುನಿಕ ಆಯುಧಗಳಾದ ಫಿರಂಗಿಗಳು, ಬಂದೂಕು, ಕ್ಷಿಪಣಿಗಳ ಆವಿಷ್ಕಾರವಾಗಿ ಯುದ್ಧಗಳಲ್ಲಿ ಇವುಗಳನ್ನು ಬಳಸಿಕೊಂಡಿದ್ದನ್ನು ಚರಿತ್ರೆಯಲ್ಲಿ ನಾವು ಗಮನಿಸಬಹುದು.

ಸೈನ್ಯ ಎಂಬುದು ದಂಡು, ದಳ, ಸೇನೆ, ಪಡೆ ಎಂಬ ವಿವಿಧ ಹೆಸರುಗಳಿಂದ ಕರೆಯಲ್ಪಟ್ಟಿದೆ. ಸೇನಾ ಎಂಬ ಪದದಿಂದ ಸೇನೆ, ಸೈನ್ಯ ಎಂಬ ಪದಗಳು ಬಳಕೆಗೆ ಬಂದಿವೆ. ಸೇನಾ ಎಂಬುದು ಸಂಸ್ಕೃತ ರೂಪ. ಇದು ಪಾಲಿ ಮತ್ತು ಸಿಂಹಳ ಭಾಷೆಗಳಲ್ಲೂ ಕೂಡ ಇದೇ ಅರ್ಥವನ್ನು ನೀಡುತ್ತದೆ. ಸಾಮಾನ್ಯ ಅರ್ಥದಲ್ಲಿ ಸೈನ್ಯ ಎಂದರೆ ಒಂದು ನಿರ್ದಿಷ್ಟ ಭೂಪ್ರದೇಶದಲ್ಲಿ ಶತ್ರುಗಳ ಆಕ್ರಮಣವನ್ನು ತಡೆಯಲು ನಿಯೋಜಿತವಾದ ಶಸ್ತ್ರಸಜ್ಜಿತ ಮತ್ತು ಶಿಸ್ತುಬದ್ಧವಾದ ಸೈನಿಕರ ಗುಂಪಾಗಿದೆ. ಅಂದರೆ ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆಯನ್ನು ಕಾಪಾಡಲು ಹಾಗೂ ಶತ್ರುಗಳು ಶಾಂತಿಗೆ ಭಂಗತರುವ ಸಂದರ್ಭದಲ್ಲಿ ಹೋರಾಡಲು ಸೈನ್ಯವು ಸನ್ನದ್ಧವಾಗಿರುತ್ತಿತ್ತು. ಸಾಮಾನ್ಯವಾಗಿ ಸೈನಿಕರ ಗುಂಪು ಐದು ಜನರಿಗಿಂತ ಕಡಿಮೆಯಿರಬಾರದು. ಅಲ್ಲದೆ ಇವರೆಲ್ಲರೂ ತಾಂತ್ರಿಕವಾಗಿ ಶಸ್ತ್ರಾಭ್ಯಾಸವನ್ನು ಅಭ್ಯಸಿಸಿರಬೇಕಾಗುತ್ತದೆ.

ಸೈನ್ಯವು ಯಾವುದೇ ರಾಜ್ಯದ ಅವಿಭಾಜ್ಯ ಅಂಗಗಳಲ್ಲಿ ಒಂದು. ಆದ್ದರಿಂದಲೇ ಸೈನ್ಯವಿಲ್ಲದೆ ರಾಜ್ಯವಿಲ್ಲ ಎಂದು ಹೇಳಿರುವುದು. ಪ್ರಾಚೀನ ಭಾರತೀಯ ರಾಜನೀತಿಜ್ಞನಾದ ಕೌಟಿಲ್ಯನ ಪ್ರಕಾರ ಸೈನ್ಯವು ರಾಜ್ಯದ ಸಪ್ತಾಂಗಗಳಲ್ಲಿ ಒಂದಾಗಿದೆ. ಯಾವುದೇ ಸಾಮ್ರಾಜ್ಯವನ್ನು ಸ್ಥಾಪಿಸಲು ಎರಡು ಸಂಪನ್ಮೂಲಗಳು ಅತ್ಯವಶ್ಯಕ. ಒಂದು ಆರ್ಥಿಕ ಸಂಪತ್ತಾದರೆ. ಮತ್ತೊಂದು ಸೈನಿಕ ಸಂಪತ್ತಾಗಿದೆ. ರಾಜ್ಯದ ಆಡಳಿತವನ್ನು ಬಲಪಡಿಸಿ ಶಾಂತಿ, ಸುವ್ಯವಸ್ಥೆಯನ್ನು ಕಾಪಾಡುವಲ್ಲಿ ಪ್ರಾಚೀನಕಾಲದಿಂದಲೂ ಅರಸನಿಗೆ ಸೈನ್ಯಶಕ್ತಿಯು ನೆರವಾಗಿದೆ.

ಸೈನಿಕ ವ್ಯವಸ್ಥೆಯು ಕೆಲವು ನೀತಿ–ನಿಯಮ, ಕಟ್ಟಳೆಗಳಿಂದ ಸಜ್ಜುಗೊಂಡ ಕ್ರಮಬದ್ಧ ವ್ಯವಸ್ಥೆ. ಸೈನ್ಯ ಮತ್ತು ಯುದ್ಧದ ತಾತ್ವಿಕ ಪರಿಕಲ್ಪನೆಗಳು ತನ್ನದೇ ಆದ ಅರ್ಥ ಹಾಗೂ ವ್ಯಾಪ್ತಿಯನ್ನು ಹೊಂದಿವೆ. ಅಂದರೆ ಅದು ಸೈನ್ಯಪಡೆ, ಶಸ್ತ್ರಾಸ್ತ್ರಗಳು, ರಕ್ಷಣಾ ಸಾಧನಗಳು, ರಕ್ಷಣಾ ತಂತ್ರ ಮತ್ತು ವಿಧಿ–ವಿಧಾನಗಳನ್ನು ಒಳಗೊಂಡಿರುತ್ತವೆ. ಪ್ರಾಚೀನ ಕಾಲದಿಂದಲೂ ಮಾನವ ತನ್ನ ಕುಟುಂಬ ಹಾಗೂ ಸಮಾಜದ ರಕ್ಷಣೆಗೆ ವಿಕಾಸೋಪಾದಿಯಲ್ಲಿ ಮಾರ್ಗಗಳನ್ನು ಕಂಡುಕೊಂಡಿದ್ದಾನೆಂಬುದು ಚರಿತ್ರೆಯಿಂದ ನಮಗೆ ತಿಳಿದುಬರುತ್ತದೆ. ಸೈನ್ಯ ಮತ್ತು ಯುದ್ಧ ವ್ಯವಸ್ಥೆಗಳ ಬಗೆಗಿನ ಮಾಹಿತಿಯನ್ನು ಕುರಿತು ಹಲವಾರು ಕೃತಿಗಳು ತಿಳಿಸುತ್ತವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಶುಕ್ರನೀತಿಸಾರ, ಕೌಟಿಲ್ಯನ ಅರ್ಥಶಾಸ್ತ್ರ, ಸೋಮೇಶ್ವರನ ಮಾನಸೋಲ್ಲಾಸ, ಕಮಂದಕನ ನೀತಿಸಾರ, ಅಗ್ನಿಪುರಾಣ, ಯಜ್ಞವಲ್ಕ್ಯ ಪುರಾಣ, ಮನುಸ್ಮೃತಿ, ಕರ್ನಾಟಕ ಭಾರತ ಕಥಾಮಂಜರಿಗಳಂತಹ ಕೃತಿಗಳು ಮುಖ್ಯವಾಗಿವೆ. ಸೈನ್ಯವ್ಯವಸ್ಥೆ, ಸೈನ್ಯದ ಅಂಗಗಳು, ಅವುಗಳ ಆಡಳಿತ ಮತ್ತು ಬಳಕೆಯನ್ನು ಕುರಿತು ಈ ಕೃತಿಗಳು ಮಾಹಿತಿಯನ್ನು ಒದಗಿಸುತ್ತವೆ. ಹಾಗೆಯೇ ಇದರ ಜೊತೆಗೆ ಯುದ್ಧ, ಯುದ್ಧೋಪಕರಣಗಳು, ಯುದ್ಧತಂತ್ರ, ಯುದ್ಧದ ನೀತಿನಿಯಮಗಳು ಮತ್ತು ಅವುಗಳ

ಪರಿಣಾಮಗಳನ್ನು ಕುರಿತಾದ ಅಂಶಗಳನ್ನು ಒಳಗೊಂಡಿವೆ. ರಾಜ್ಯಕ್ಕೆ ರಾಜ ಮತ್ತು ಸೈನ್ಯ ಎರಡೂ ಅಂಶಗಳು ಕೂಡ ರಾಜ್ಯ ನಿರ್ಮಾಣದಲ್ಲಿ ಅತ್ಯಂತ ಅವಶ್ಯಕ ಪಾತ್ರವನ್ನು ವಹಿಸುತ್ತವೆ. ಸೈನ್ಯವು ರಾಜ್ಯವನ್ನು ಸಂಘಟಿಸಿ ರಕ್ಷಿಸುವ ಮತ್ತು ವಿಸ್ತರಿಸುವ ಹೊಣೆಗಾರಿಕೆಯನ್ನು ಹೊಂದಿದೆ. ಅಲ್ಲಿ ಉನ್ನತ ಅಧಿಕಾರಿಯಾದ ದಂಡನಾಯಕನಿಂದ ಹಿಡಿದು ಸಾಮಾನ್ಯ ಸೈನಿಕನವರೆಗಿನ ಹುದ್ದೆಗಳಿಗೆ ಸಂಬಂಧಿಸಿದಂತೆ ಅರ್ಹತೆಯೊಂದೇ ಪ್ರಧಾನವಾಗಿರಬೇಕು. ಸೈನ್ಯವು ಶಕ್ತಿ, ಸಂಪತ್ತು ಮತ್ತು ಪ್ರತಿಷ್ಠೆಗಳ ಸಂಕೇತವೂ ಹೌದು. ಸೈನ್ಯವ್ಯವಸ್ಥೆಯಲ್ಲಿ ರಾಜ ಅಥವಾ ಚಕ್ರವರ್ತಿ ಮೊದಲು ಯೋಧನಾಗಿರುತ್ತಾನೆ. ಅನಂತರ ಅವನು ಅರಸನೆಂದು ಪರಿಗಣಿತನಾಗುತ್ತಾನೆ. ಸೈನ್ಯವು ಸದಾಕಾಲ ಯುದ್ಧಕ್ಕೆ ಸಿದ್ಧವಾಗಿದ್ದು ರಾಜ್ಯವನ್ನು ರಕ್ಷಣೆ ಮಾಡಬೇಕಿತ್ತು. ರಾಜ್ಯಗಳ ನಡುವೆ ಯುದ್ಧ ನಡೆದ ಸಂದರ್ಭದಲ್ಲಿ ಸೈನ್ಯ ಶಕ್ತಿಯಿಂದ ಅರಸನು ರಾಜಕೀಯ, ಆರ್ಥಿಕ ಪ್ರಾಬಲ್ಯವನ್ನು ಪಡೆಯುತ್ತಿದ್ದನು. ಸೈನಿಕ ಇತಿಹಾಸದ ವ್ಯಾಖ್ಯಾನವನ್ನು ದಂಡನಾಯಕರು ಮಾತ್ರ ಬರೆಯಬಲ್ಲರು. ಆದ್ದರಿಂದ ಸೈನ್ಯವು ಪ್ರಾದೇಶಿಕವಾಗಿ ತನ್ನನ್ನು ತಾನು ರಕ್ಷಿಸಿಕೊಳ್ಳಲು ಸದಾಕಾಲ ಸಿದ್ಧವಾಗಿರಬೇಕಾಗುತ್ತದೆ.

ಮನುಸ್ಮೃತಿಯು ಉಲ್ಲೇಖಿಸುವಂತೆ ರಾಜನು ದಂಡಾಧಿಕಾರಿಯಾಗಿದ್ದು, ಅವನು ದೊಡ್ಡಗಾತ್ರದ ಸೇನೆಯನ್ನು ಹೊಂದಿರುವುದರಿಂದ ಆಂತರಿಕ ಶಾಂತಿಪಾಲನೆ, ಸುವ್ಯವಸ್ಥೆ ಹಾಗೂ ಬಾಹ್ಯ ಗಡಿರಕ್ಷಣೆ ಸಾಧ್ಯವಾಗುತ್ತದೆ. ದಂಡನೆಯ ಪ್ರಮಾಣವು ಮೀರಿದರೆ ನಿರಪರಾಧಿಗಳಿಗೆ ಶಿಕ್ಷೆಯಾದಂತಾಗುವುದು; ಅಲ್ಲದೆ ರಾಜ್ಯವ್ಯವಸ್ಥೆಯನ್ನು, ರಾಜನನ್ನೂ ಪ್ರಜೆಗಳನ್ನೂ ಅದು ಹಾನಿಗೊಳಿಸುತ್ತದೆ. ಆದ್ದರಿಂದ ಬಲಿಷ್ಠವಾದ ಸೇನೆಯಿರಬೇಕು. ಅದರಲ್ಲೂ ಪ್ರಮುಖವಾಗಿ ವ್ಯಸನಗಳಿಲ್ಲದ, ವಿನೋದ ಪ್ರಿಯವಾದ, ಸಿಟ್ಟಿನ ಅನರ್ಥಗಳಿಲ್ಲದ ಸ್ವಾರ್ಥವಿರದ ಸೇನೆಯು ಅಗತ್ಯವಾಗಿರುತ್ತದೆ. ಇದರಿಂದ ವೀರರೂ, ಶೂರರೂ ಸೇನೆಯಲ್ಲಿ ಸೇವೆಸಲ್ಲಿಸಲು ಅವಕಾಶ ದೊರೆಯುತ್ತದೆ. ಹೇಡಿಯಾದ ಯೋಧನು ರಣರಂಗದಲ್ಲಿ ಕೊಲ್ಲಲ್ಪಟ್ಟರೆ ಅಥವಾ ವೈರಿಯಿಂದ ಹತನಾದರೆ ಅವನ ಪಾಪವು ರಾಜನಿಗೆ ದೊರೆಯುತ್ತದೆಂದು ಸೈನ್ಯದಲ್ಲಿ ಹೇಡಿಯನ್ನು ತಿರಸ್ಕರಿಸಲು ಹೇಳಿದ್ದಾರೆ. ಪ್ರತಿದಿನವೂ ಸೇನಾಬಲವು ಪರಾಕ್ರಮದಿಂದ ಸಿದ್ಧವಾಗಿರಬೇಕು. ತನ್ನ ಗುಟ್ಟನ್ನು ಎಂದೂ ರಟ್ಟುಮಾಡಬಾರದು. ಶತ್ರುವಿನ ದೌರ್ಬಲ್ಯ ಅಂತಃಕಲಹಗಳು ಮತ್ತು ವ್ಯಸನಗಳನ್ನು ಗುರುತಿಸಬೇಕು. ಇಲ್ಲವಾದರೆ ತನ್ನ ಅಪಾಯದಿಂದ ನಿವಾರಣೆಯಾಗುವುದು ನಿವಾರಣೆ ಕಷ್ಟವಾಗುತ್ತದೆ. ರಾಜನು ಎಂದಿಗೂ ಕಪಟವನ್ನು ಮಾಡಬಾರದು. ಸೇನಾಪತಿಗಳ ವಿಶ್ವಾಸವನ್ನು ಕಾಯ್ದುಕೊಳ್ಳಬೇಕು.

ಕೌಟಲ್ಯನು ತನ್ನ ಅರ್ಥಶಾಸ್ತ್ರ ಕೃತಿಯಲ್ಲಿ ಆದರ್ಶ ಸೇನೆಯ ಲಕ್ಷಣಗಳನ್ನು ತಿಳಿಸುತ್ತಾ ಸೈನ್ಯದಲ್ಲಿ ಅವುಗಳು ಕಡ್ಡಾಯವಾಗಿ ಇರಲೇಬೇಕೆಂದು ಹೇಳುತ್ತಾನೆ. ವಂಶಪಾರಂಪರ್ಯವಾಗಿ ಸೈನ್ಯದಲ್ಲಿರುವವರ ಅಥವಾ ಸೈನಿಕರ ಮನೆಯವರನ್ನೇ ಸೈನ್ಯಕ್ಕೆ ಸೇರಿಸಿಕೊಳ್ಳಬೇಕು. ಇದರಿಂದ ಅವರಲ್ಲಿ ಸ್ವಾಮಿನಿಷ್ಠ ಗುಣಗಳಿರುತ್ತವೆ. ಕ್ಷತ್ರಿಯರೇ ಇದಕ್ಕೆ ಅರ್ಹರಾಗಿದ್ದು ಅವರಲ್ಲಿ ಯುದ್ಧಕಲೆ ಬೇರೂರಿರುತ್ತದೆ ಎಂದು ಹೇಳಿದ್ದಾನೆ. ಅಲ್ಲದೆ ಸೈನ್ಯದಲ್ಲಿ ರಥದಳ, ಕಾಲ್ದಳ, ಅಶ್ವದಳ, ಗಜದಳಗಳಿದ್ದು ಇವು ಸದಾ ಯುದ್ಧದ ಸಿದ್ಧತೆಯನ್ನು ಮಾಡಿಕೊಂಡಿರಬೇಕು ಎನ್ನುವುದು ತಿಳಿದುಬರುತ್ತದೆ.

ಸದಾ ಶಿಸ್ತುಬದ್ಧವಾದ, ಯುದ್ಧಸನ್ನದ್ಧವಾಗಿ ಸಮಯಪ್ರಜ್ಞೆ, ರಾಜ್ಯರಕ್ಷಣೆ, ರಾಜನ ಅನುಕ್ಷಣದ ಆಜ್ಞೆಗಳನ್ನು ಪಾಲಿಸುವ, ಘೋಷಿಸುವ ಮನೋಸ್ಥೈರ್ಯಗಳು ಅವಶ್ಯಕ. ಆದರೆ ಮಧ್ಯಯುಗೀನ ಕಾಲದ ಕರ್ನಾಟಕದಲ್ಲಿ ಸ್ಥಾಪನೆಯಾದ ಅರಸು ಮನೆತನಗಳು ಸಾಮ್ರಾಜ್ಯವನ್ನು ವಿಸ್ತರಿಸಲು ಕಾಲ್ದಳ, ಅಶ್ವದಳ, ಗಜದಳಗಳ ಜೊತೆಗೆ ಫಿರಂಗಿದಳವನ್ನು ಕೂಡ ಹೊಸದಾಗಿ ಸೇರಿಸಿಕೊಂಡರು. ಇದಕ್ಕೆ ವಿಜಯನಗರ ಕಾಲದಲ್ಲಿ ನಡೆದ ಯುದ್ಧಗಳಲ್ಲಿಯೂ ಇದೇ ಮಾದರಿಯ ಫಿರಂಗಿದಳವನ್ನು ಬಳಸಿಕೊಂಡದ್ದನ್ನು ನಾವು ಚರಿತ್ರೆಯ ದಾಖಲೆಗಳಿಂದ ಗಮನಿಸಬಹುದಾಗಿದೆ.

ಮೈಸೂರು ಸಂಸ್ಥಾನವು ಕ್ರಿ.ಶ.೧೪ನೆಯ ಶತಮಾನದ ಅಂತ್ಯಭಾಗದಲ್ಲಿ (ಕ್ರಿ.ಶ. ೧೩೯೯) ಯದುರಾಯ ಮತ್ತು ಕೃಷ್ಣರಾಯ ಎಂಬ ಯದುವಂಶದ ಇಬ್ಬರು ಸಹೋದರರಿಂದ ಸ್ಥಾಪನೆಯಾಯಿತು. ನಂಜನಗೂಡಿನ ಹದಿನಾರು ಪಾಳೆಯಗಾರನಾದ ಚಾಮರಾಯನು ಗತಿಸಿದ ನಂತರ ಅವನ ಪತ್ನಿ ಮತ್ತು ಪುತ್ರಿಯರು ಮೈಸೂರು ಸಮೀಪದ ಕಾರುಗಳ್ಳಿಯ ಪಾಳೆಯಗಾರನಾದ ಮಾರಪ್ಪನಾಯಕನ ಚಿತ್ರಹಿಂಸೆಗೆ ಗುರಿಯಾದರು. ಇದನ್ನು ತಿಳಿದ ಯದುರಾಯ ಮತ್ತು ಕೃಷ್ಣರಾಯರು ಮಾರಪ್ಪನಾಯಕ ಎಂಬುವನೊಂದಿಗೆ ಹೋರಾಡಿ ಅವನನ್ನು ಕೊಂದು ಚಾಮರಾಜನ ಹೆಂಡತಿ ಮತ್ತು ಮಗಳನ್ನು ಕಾಪಾಡಿದರು. ಮೈಸೂರು ಪಾಳೆಯಪಟ್ಟು ಮಾರಪ್ಪನಾಯಕನ ವಶವಾಗದಂತೆ ತಡೆಗಟ್ಟಿದ್ದರಿಂದ ಸಾಮಾನ್ಯ ಜನರು 'ಒಡೆಯ'ನೆಂದು ಕರೆದರು. ಯದುರಾಯನು ಮೈಸೂರು ಎಂಬ ಕಿರುಪಾಳೆಯಪಟ್ಟಿನ ಒಡೆಯನಾದನು. ಸಾಮಾನ್ಯವಾಗಿ ಒಡೆಯ ಎಂದರೆ ಯಜಮಾನ ಎಂದರ್ಥ. ಒಂದು ನಿರ್ದಿಷ್ಟ ಭೂ ಪ್ರದೇಶದಲ್ಲಿ ವಾಸಿಸುತ್ತಿರುವ ಹಾಗೂ ತನ್ನದೇ ಆದ ಜನರಿಗೆ ರಕ್ಷಣೆಯನ್ನು ಒದಗಿಸುವ ವ್ಯಕ್ತಿಯೇ ಒಡೆಯ ಯಜಮಾನ, ಆಪತ್ತಿನಲ್ಲಿ ಸಹಾಯ ಮಾಡಿದವರಿಗೆ ಕೃತಜ್ಞತೆಯನ್ನು ಸಲ್ಲಿಸಲು ಮುಗ್ಧಜನರು ಒಡೆಯನೆಂದೇ ಸಂಬೋಧಿಸುತ್ತಾರೆ. ಒಡೆಯ ಎಂಬ ಪದಕ್ಕೆ ಸಮಾನಾರ್ಥಕವಾಗಿ ಯಜಮಾನ, ಅರಸ, ಪ್ರಭು, ರಾಜ ಮುಂತಾದ ಪದಗಳನ್ನು ಕಾಣಬಹುದಾಗಿದೆ. ಆದ್ದರಿಂದ ಕೃತಜ್ಞತಾಭಾವದಿಂದ ಕೂಡಿದ ಭಾವಸೂಚಿಯಾಗಿದೆ. ಕೇವಲ ಮೂವತ್ತಾರು ಹಳ್ಳಿಗಳಿಂದ ಕೂಡಿದ ಕಿರುಸಂಸ್ಥಾನವಾಗಿದ್ದ ಹದಿನಾಡನ್ನು ರಕ್ಷಿಸಿದ್ದರಿಂದ ಚಾಮರಾಯನ ಅರಮನೆಯ ಪುರೋಹಿತರು ಯದುರಾಯನೇ ನಮ್ಮ ರಾಜ್ಯಕ್ಕೆ ಸಮರ್ಥವಾದ ದಕ್ಷ ಆಡಳಿತಗಾರನೆಂದು ತಿಳಿದು ಮೈಸೂರಿನ ಸಿಂಹಾಸನಕ್ಕೆ ಅಧಿಪತಿಯನ್ನಾಗಿ ಪಟ್ಟ ಕಟ್ಟಿದರು. ಅಲ್ಲಿಂದ ಇವನ ವಂಶಸ್ಥರು ಮುಂದೆ ಜನರ ಬಾಯಲ್ಲಿ ಒಡೆಯರೆಂದೇ ಪ್ರಸಿದ್ಧಿಯಾದರು. ಕಾಲಾನುಕ್ರಮದಲ್ಲಿ ಈ ಮನೆತನದವರು ಮೈಸೂರು ಒಡೆಯರೆಂದೇ ಪ್ರಸಿದ್ಧಿಯಾದರು. ಕ್ರಿ.ಶ. ೧೩೯೯ರಿಂದ ಪ್ರಸ್ತುತ ಸಮಕಾಲೀನದಲ್ಲೂ ಕೂಡ ಮೈಸೂರು ಒಡೆಯರ ರಾಜವಂಶವು ಸಾಂಸ್ಕೃತಿಕ ಅನನ್ಯತೆಯನ್ನು ಹಾಗೆಯೇ ಉಳಿಸಿಕೊಂಡು ಬಂದಿದೆಯೆಂದರೆ ತಪ್ಪಾಗಲಾರದು. ಏಕೆಂದರೆ ಕ್ರಿ.ಶ. ೧೫೬೫ರಲ್ಲಿ ತಾಳಿಕೋಟೆಯ ಬಳಿ ನಡೆದಂತಹ ವಿಜಯನಗರದ ಕೊನೆಯ ಯುದ್ಧವಾದ ರಕ್ಕಸಗಿ-ತಂಗಡಗಿ ಕದನದ ನಂತರ; ಮೈಸೂರಿನ ಒಡೆಯರು ವಿಜಯನಗರ ಸಾಮ್ರಾಜ್ಯದಲ್ಲಿ

ನಡೆಯುತ್ತಿದ್ದ ನವರಾತ್ರಿ ಉತ್ಸವವನ್ನು ಕ್ರಿ.ಶ.೧೬೧೦ರಲ್ಲಿ ಮುಂದುವರೆಸಿದರು. ಇದೊಂದು ಸಾಂಸ್ಕೃತಿಕ ಪರಂಪರೆಯ ಪ್ರತೀಕವಾಗಿದೆ.

**ಅಧ್ಯಯನದ ಉದ್ದೇಶ**

ಮೈಸೂರು ಒಡೆಯರ ಕಾಲದ ಇತಿಹಾಸವನ್ನು ಕುರಿತಂತೆ ಈವರೆಗೆ ಹಲವು ಅಧ್ಯಯನಗಳು ನಡೆದಿವೆ. ಅವುಗಳು ಹೆಚ್ಚಿನದಾಗಿ ಮೈಸೂರು ಒಡೆಯರ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಆರ್ಥಿಕ ಅಭಿವೃದ್ಧಿ ಮತ್ತು ಸುಧಾರಣೆಗಳನ್ನು ಕುರಿತು ತಿಳಿಸುತ್ತವೆ. ಆದರೆ ಮೈಸೂರು ಒಡೆಯರ ಕಾಲದ ಸೈನಿಕ ವ್ಯವಸ್ಥೆಯನ್ನು ಕುರಿತಂತೆ ಈವರೆಗೆ ಯಾವುದೇ ಪ್ರತ್ಯೇಕ ಅಧ್ಯಯನ ಮತ್ತು ಸಂಶೋಧನೆಗಳು ನಡೆದಿರುವುದಿಲ್ಲ. ಆದ್ದರಿಂದ ಪ್ರಸ್ತುತ ಅಧ್ಯಯದಲ್ಲಿ ಮೈಸೂರು ಒಡೆಯರ ಸೈನ್ಯವನ್ನು ಕುರಿತಂತೆ ಅಂದರೆ ಸೈನ್ಯದಲ್ಲಿದ್ದ ವಿವಿಧ ಹಂತಗಳ ವ್ಯವಸ್ಥೆಯನ್ನು ವಿಶ್ಲೇಷಿಸುವುದಾಗಿದೆ. ಸೈನಿಕರ ಆಯ್ಕೆ, ವೇತನ, ಆದಾಯದ ಮೂಲಗಳು ವೇಷಭೂಷಣ ಹಾಗೂ ಯುದ್ಧಗಳು, ಯುದ್ಧದಲ್ಲಿನ ಶಿಸ್ತು, ಮತ್ತು ಯುದ್ಧಗಳಲ್ಲಿ ಸೈನ್ಯದ ಪಾತ್ರ ಮೊದಲಾದವುಗಳನ್ನು ಕುರಿತು ಸಂಶೋಧನೆಯನ್ನು ಕೈಗೊಳ್ಳುವುದು ಅಗತ್ಯವಾಗಿದೆ.

ಮೈಸೂರು ಒಡೆಯರ ಕಾಲಾವಧಿಯಲ್ಲಿ ಬದಲಾಗುತ್ತಿದ್ದ ಯುದ್ಧನೀತಿಗಳಿಗೆ ಅನುಗುಣವಾಗಿ ಆಯುಧಗಳ ಬದಲಾವಣೆಯೂ ಕಂಡುಬಂದಿತು. ಈ ಎಲ್ಲಾ ಅಂಶಗಳನ್ನು ಕುರಿತಂತೆ ಕೂಲಂಕಷವಾಗಿ ಚರ್ಚಿಸುವಂತಹ ಅಧ್ಯಯನವು ಅಗತ್ಯವಾಗಿದೆ. ಮೈಸೂರು ಒಡೆಯರಲ್ಲದೆ ದಳವಾಯಿಗಳ ಸ್ವತಂತ್ರ ಆಳ್ವಿಕೆಯನ್ನು ಪ್ರಾರಂಭಿಸುವ ಆಸೆಯನ್ನು ಹೈದರ್ ಅಲಿಯು ಕೈಗೂಡದಂತೆ ಮಾಡಿದನು. ಅದಕ್ಕೆ ಅಂದಿನ ನಾಮಮಾತ್ರ ಅರಸರಾಗಿದ್ದ ಇಮ್ಮಡಿ ಕೃಷ್ಣರಾಜ ಒಡೆಯರ್ ಅವರ ಪರೋಕ್ಷ ಸಹಕಾರದಿಂದ ಮೈಸೂರು ಸಾಮ್ರಾಜ್ಯವು ಎಲ್ಲಾ ದಿಕ್ಕುಗಳಿಗೂ ವಿಸ್ತರಿಸಲು ಮತ್ತು ಪ್ರಬಲ ಶಕ್ತಿಯಾಗಿ ರೂಪುಗೊಳ್ಳುವಂತೆ ಮಾಡಿತು. ಇದರಿಂದ ಬ್ರಿಟಿಷರ ವಸಾಹತುಶಾಹಿ ನೀತಿಯು ಕರ್ನಾಟಕಕ್ಕೆ ವಿಸ್ತರಿಸದಂತೆ ರಾಜಕೀಯ, ಆರ್ಥಿಕ, ಸೈನಿಕ ನೀತಿಗಳನ್ನು ತಡೆಯುವ ಮಾರ್ಗಗಳಾಗಿ ಅಂದಿನ ಯುದ್ಧಗಳು ರೂಪುಗೊಂಡವು. ಇದರಿಂದ ಬ್ರಿಟಿಷರು ಲಾಭಗಳನ್ನು ಪಡೆಯಲು ಮಾಡಿದ ಸಂಚುಗಳು ಮತ್ತು ದೇಶೀಯ ಸಂಸ್ಥಾನಗಳ ಮೇಲೆ ಅಧಿಕಾರ ಚಲಾಯಿಸುತ್ತಿದ್ದ ಇವರು ಆಡಳಿತಾತ್ಮಕವಾಗಿ ಲಾಭಗಳನ್ನು ಪಡೆಯಲು ಮಾಡಿದ ಬದಲಾವಣೆಗಳನ್ನು ತಿಳಿಯಲು. ಅಲ್ಲದೆ ಮೈಸೂರು ರಾಜ್ಯದ ಸೈನ್ಯದ ಮೇಲೆ ದೇಶೀಯ ಮತ್ತು ಯೂರೋಪ್ ದೇಶಗಳ ಪ್ರಭಾವಗಳು ಮತ್ತು ಬದಲಾವಣೆಗಳು ಆಯುಧಗಳ ತಂತ್ರಗಾರಿಕೆ, ಅವುಗಳ ತಯಾರಿಕೆ ಮತ್ತು ಬಳಕೆಗಳನ್ನು ಅಧ್ಯಯನ ಮಾಡುವುದೇ ಪ್ರಮುಖ ಉದ್ದೇಶವಾಗಿದೆ.

ಪ್ರಾರಂಭದಲ್ಲಿ ಮೈಸೂರಿನ ಅರಸರು ವಿಜಯನಗರ ಸಾಮ್ರಾಜ್ಯದ ಅಧೀನದಲ್ಲಿದ್ದ ಸಾಮಂತ ಪಾಳೆಯಗಾರರಾಗಿದ್ದರು. ವಿಜಯನಗರ ಕೊನೆಯ ಯುದ್ಧವಾದ 'ರಕ್ಕಸಗಿ-ತಂಗಡಗಿ' ಎಂಬಲ್ಲಿ ಬಹಮನಿ ಸುಲ್ತಾನರ ವಿರುದ್ಧ ನಡೆದ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯವು ಅವನತಿಯಾಯಿತು.

ಈ ಯುದ್ಧದ ತರುವಾಯ ಮೈಸೂರು ಅರಸರು ವಿಜಯನಗರದ ಕೊನೆಯ ಅರಸನಾದ ವೆಂಕಟಾದ್ರಿಗೆ ಆಶ್ರಯವನ್ನು ನೀಡಿ, ಅದರ ಕೊನೆಯ ಅರಸನಾದ ಶ್ರೀರಂಗರಾಯನನ್ನು ತಮ್ಮ ಸಾಮ್ರಾಟನೆಂದು ಗುರುತಿಸಿ ಹಿಂದಿನ ಅರಸರಿಗೆ ನೀಡುತ್ತಿದ್ದ ಸ್ಥಾನಮಾನಗಳನ್ನು ಅವನಿಗೂ ನೀಡಿದ ಕೀರ್ತಿಯು ಮೈಸೂರು ಅರಸರಿಗೆ ಸಲ್ಲುತ್ತದೆ. ಏಕೆಂದರೆ ತಮ್ಮ ಆಳರಸರು ಕಷ್ಟದಲ್ಲಿದ್ದಾಗ ಆಶ್ರಯವನ್ನು ನೀಡಿ ಅವರಿಗೆ ಪ್ರತ್ಯೇಕವಾದ ಪ್ರದೇಶಗಳನ್ನು ಬಿಟ್ಟುಕೊಟ್ಟು ಅವರು ತಮ್ಮ ಸ್ವತಂತ್ರ ಆಳ್ವಿಕೆಯನ್ನು ನಿರ್ವಹಿಸಲು ಅವಕಾಶವನ್ನು ನೀಡಲ್ಪಟ್ಟಿದ್ದು ಒಂದು ಕಡೆಯಾದರೆ, ಅದೇ ಆಳರಸರು ದುರ್ಬಲರಾದಾಗ ಅವರನ್ನು ಒಬ್ಬ ಸಾಮ್ರಾಟನೆಂದೂ ನೋಡದೆ ಅವನನ್ನು ಸಿಂಹಾಸನದಿಂದ ಕೆಳಗಿಳಿಸಿದ ಪರಿಸ್ಥಿತಿಯು ಅತ್ಯಂತ ಹೀನಕೃತ್ಯವೆಂದೇ ಹೇಳಬಹುದು. ಈ ಸಂದರ್ಭಗಳೇ ಆಳರಸರಾಗಿ ಇವರು ಪ್ರಬಲವಾಗಲು ಅವಕಾಶವನ್ನು ರೂಪಿಸಿಕೊಡಲು ಪ್ರಯತ್ನಿಸಿತು. ಯದುರಾಯನಿಂದ ರಾಜ್ಯ ಸ್ಥಾಪನೆಯಾದರು ಕೂಡ ರಾಜಒಡೆಯರ ಕಾಲಾವಧಿಯವರೆಗೆ ರಾಜ್ಯವು ಅಷ್ಟೇನೂ ಭದ್ರಬುನಾದಿಯನ್ನು ಹೊಂದಿರಲಿಲ್ಲ. ಆದರೆ ರಾಜಒಡೆಯರು ಅಧಿಕಾರವನ್ನು ಪಡೆದ ಕೂಡಲೇ ರಾಜ್ಯವನ್ನು ಬಲಪಡಿಸುವ ಪ್ರಯತ್ನವನ್ನು ಮಾಡಿ, ರಾಜ್ಯದ ಗಡಿಗಳನ್ನು ವಿಸ್ತರಿಸುವ ಸಲುವಾಗಿ ಅನೇಕ ಯುದ್ಧಗಳನ್ನು ಮಾಡಿದರು. ಆದರೂ ಇವರು ವಿಜಯನಗರದ ಕೊನೆಯ ಅರಸರಿಗೆ ಸಾಮಂತರಾಗಿದ್ದುಕೊಂಡೇ ಅವರನ್ನು ಮೂಲೆಗುಂಪು ಮಾಡಿ ಸ್ವತಂತ್ರವಾಗಿ ಆಲ್ವಿಕೆಯನ್ನು ಪ್ರಾರಂಭಿಸಿದರು. ಈ ಸಾಮ್ರಾಜ್ಯದ ಅವನತಿಯ ನಂತರ ಮೈಸೂರು ಸಂಸ್ಥಾನವು ಪ್ರಬಲ ಮತ್ತು ಸ್ವತಂತ್ರವಾಗಿ ಬೆಳೆದು ವಿಜಯನಗರದ ಸಾಂಸ್ಕೃತಿಕ ರಾಯಭಾರಿಯಾಗಿ ಮುಂದುವರೆಯಿತು. ಒಟ್ಟಿನಲ್ಲಿ ಮೈಸೂರು ಒಡೆಯರು ವಿಜಯನಗರ ಸಾಮ್ರಾಟರ ಅಧೀನದಲ್ಲಿದ್ದುಕೊಂಡೇ ಅವರಿಂದ ಸ್ವತಂತ್ರರಾಗಿ ತಾವೇ ಆಳ್ವಿಕೆಯನ್ನು ಸ್ವತಂತ್ರವಾಗಿ ನಿರ್ವಹಿಸುವಂತಹ ಗಮನಾರ್ಹ ಬದಲಾವಣೆಗಳನ್ನು ಮಾಡಿಕೊಂಡರು. ಅಲ್ಲದೆ ಮುಂದೆ ಈ ಮೈಸೂರು ಅರಸರ ವಂಶಸ್ಥರು ಮೈಸೂರಿನ ಒಡೆಯರೆಂದೇ ಪ್ರಸಿದ್ಧಿಯಾದರು. ಇವರಲ್ಲಿ ಪ್ರಮುಖವಾಗಿ ರಾಜಒಡೆಯರು. ಕಂಠೀರವ ನರಸರಾಜ ಒಡೆಯರು, ಚಿಕ್ಕದೇವರಾಜ ಒಡೆಯರು, ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ ನೇರ ಆಳ್ವಿಕೆಗಳು ಗಮನಸೆಳೆದರೆ ಕ್ರಿ.ಶ.೧೭೩೪ರ ಸಂದರ್ಭದಲ್ಲಿ ದಳವಾಯಿಗಳು ಮತ್ತು ೧೭೯೯ರವರೆಗೆ ಬ್ರಿಟಿಷರು ಟಿಪ್ಪುವನ್ನು ಕೊಲ್ಲುವವರೆಗೆ ಹಲವಾರು ಗಮನಾರ್ಹವಾದ ಬದಲಾವಣೆಗಳಾದವು. ಇವರಿಗೆ ಪೂರಕವೆಂಬಂತೆ ಮೈಸೂರು ಅರಸರ ಜೊತೆಗೆ ಅವರ ಅಧೀನ ಪಾಳೆಯಗಾರರು, ಅಧಿಕಾರಿಗಳು ಸೈನಿಕರು, ಅಪಾರವಾಗಿ ಶ್ರಮಿಸಿದ್ದಾರೆ. ಅಲ್ಲದೆ ಈ ಸಂದರ್ಭದಲ್ಲಿ ಕೆಳದಿ ಮತ್ತು ಮರಾಠರನ್ನು ಬಿಟ್ಟರೆ ಮೈಸೂರಿಗೆ ಅಷ್ಟಾಗಿ ಪೈಪೋಟಿ ನೀಡುವ ಯಾವುದೇ ಪ್ರಬಲವಾದ ಪ್ರತಿಸ್ಪರ್ಧಿಗಳಿರಲಿಲ್ಲ. ಆದರೆ ಬ್ರಿಟಿಷರು ಹೈದರನ ಕಾಲದಲ್ಲಿ ಮೈಸೂರಿನ ಪ್ರಬಲವಾದ ಪ್ರತಿಸ್ಪರ್ಧಿಗಳಾದರು. ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನ ಮರಣದ ನಂತರ ಬ್ರಿಟಿಷ್ ರೆಸಿಡೆಂಟರು ಮತ್ತು ಕಮಿಷನರುಗಳ ಆಳ್ವಿಕೆಯು ಪ್ರಾರಂಭವಾಯಿತು. ಈ

ರೆಸಿಡೆಂಟರುಗಳ ಆಳ್ವಿಕೆಯ ನಂತರ ಕ್ರಿ.ಶ.೧೮೮೧ರಲ್ಲಿ ಮೈಸೂರನ್ನು ವಾಪಸ್ಸು ಮೈಸೂರಿನ ಒಡೆಯರಿಗೆ ಹಿಂದಿರುಗಿಸಲಾಯಿತು. ಈ ಪ್ರಕ್ರಿಯೆಯನ್ನು ಮೈಸೂರಿನ ರಾಜಕೀಯ ಇತಿಹಾಸದಲ್ಲಿ 'ಪುನರ್ದಾನ' ಎಂದು ಕರೆಯಲಾಯಿತು. ಈ ಪುನರ್ದಾನ ಎನ್ನುವುದು ಎಷ್ಟರ ಮಟ್ಟಿಗೆ ಸರಿ? ಎಂಬ ಪ್ರಶ್ನೆ ಸಂಶೋಧಕರಿಗೆ ಉದ್ಭವಿಸುತ್ತದೆ. ಏಕೆಂದರೆ ಬ್ರಿಟಿಷರ ವಸಾಹತುಶಾಹಿ ನೀತಿಯಡಿಯಲ್ಲಿ ಮೈಸೂರು ರಾಜ್ಯವನ್ನು ಟಿಪ್ಪುವಿನ ನಂತರ ಮೂರು ಭಾಗಗಳನ್ನಾಗಿ ಮಾಡಿ ಒಂದು ಭಾಗವನ್ನು ಮರಾಠರಿಗೆ, ಮತ್ತೊಂದು ಭಾಗವನ್ನು ಮೈಸೂರು ಒಡೆಯರ ಆಡಳಿತಕ್ಕೆ ಮತ್ತು ಮೂರನೆಯ ಭಾಗವನ್ನು ತಮ್ಮ ಅಧೀನದಲ್ಲೇ ಇರಿಸಿಕೊಂಡರು. ನಾಮಕಾವಸ್ಥೆಗೆ ಮೈಸೂರು ಒಡೆಯರಿಗೆ ನೀಡಿದ್ದ ರಾಜ್ಯದ ಒಂದು ಭಾಗವನ್ನು ತಾವೇ ನೇಮಿಸಿದ ಅಧಿಕಾರಗಳು ಆಡಳಿತವನ್ನು ನೋಡಿಕೊಳ್ಳುವ ಹಾಗೆ ಮಾಡಿದ ರಾಜಕೀಯ ಉದ್ದೇಶವು ಮೈಸೂರು ರಾಜ್ಯವನ್ನು ಆರ್ಥಿಕವಾಗಿ ಸೂರೆ ಮಾಡುವಂತಹ ಮತ್ತು ಸ್ಥಳೀಯ ಅರಸರನ್ನು ಬಲಹೀನಗೊಳಿಸುವಂತಹ ಪ್ರಯತ್ನ ಎಂದೇ ಹೇಳಬೇಕು. ಆದ್ದರಿಂದ ಕ್ರಿಶ ೧೮೮೧ರಲ್ಲಿ ಮೈಸೂರು ಸಂಸ್ಥಾನದ ಒಂದು ಭಾಗವನ್ನು ಮೈಸೂರಿಗೆ ನೀಡಿದ್ದನ್ನು ಇವರು ತಮ್ಮ ದಾಖಲೆಗಳಲ್ಲಿ ಮೈಸೂರಿನ 'ಪುನರ್ದಾನ' ಎಂಬುದಾಗಿಯೇ ಘೋಷಣೆ ಮಾಡಿದರು.

ಮೈಸೂರು ಸಣ್ಣ ಸಂಸ್ಥಾನವಾದರೂ ವಿಜಯನಗರದ ಸೈನಿಕ ವ್ಯವಸ್ಥೆಯ ಮಾದರಿಯನ್ನೇ ಕೆಲವು ಬದಲಾವಣೆಗಳೊಂದಿಗೆ ಅನುಸರಿಸಿದ್ದರು. ಆದರೆ ಮುಂದೆ ಸಿಡಿಮದ್ದಿನ ಉಪಕರಣಗಳ ಹೊಸಬಗೆಯ ಆವಿಷ್ಕಾರಗಳಿಂದ ಯುದ್ಧೋಪಕರಣಗಳಲ್ಲಿ ಸಾಕಷ್ಟು ಬದಲಾವಣೆಗಳಾದವು. ಕ್ರಿ.ಶ. ೧೭೬೮ರಲ್ಲಿ ಮೈಸೂರಿನ ಸಿಂಹಾಸನವೇರಿದ ಹೈದರ್ ಅಲಿಯು ಮೈಸೂರು ಸೈನ್ಯಕ್ಕೆ ಆಧುನಿಕ ಸ್ಪರ್ಶವನ್ನು ನೀಡಿದನು. ಅದರಲ್ಲೂ ಯೂರೋಪಿಯನ್ ಮಾದರಿಯ ತರಬೇತಿಯನ್ನು ನೀಡಿದ್ದು ಪ್ರಮುಖವಾಗಿದ್ದಿತು. ಮುಂದೆ ಟಿಪ್ಪುಸುಲ್ತಾನನು ತನ್ನ ತಂದೆಯು ಆವಿಷ್ಕರಿಸಿದ್ದ ಕ್ಷಿಪಣಿಗಳನ್ನು ಪರಿಷ್ಕರಿಸಿ ಬಳಕೆ ಮಾಡುವುದನ್ನು ಕಲಿತನು. ಒಟ್ಟಾರೆಯಾಗಿ ಮೈಸೂರು ಅರಸರು ಮೈಸೂರಿನ ಸಮಕಾಲೀನ ರಾಜಕೀಯ ಸ್ಪರ್ಧೆ, ಪ್ರಾಕೃತಿಕ ಪರಿಸರ ಮತ್ತು ಬದಲಾದ ಯುದ್ಧ ತಂತ್ರಗಳಿಗೆ ಹಾಗೂ ಪರಿಸ್ಥಿತಿಗಳಿಗೆ ಅನುಗುಣವಾಗಿ ಸೈನ್ಯವನ್ನು ಮಾರ್ಪಡಿಸಿದನು.

ಮೈಸೂರಿನ ದಳವಾಯಿಗಳ ಆಡಳಿತಾವಧಿಯಲ್ಲಿ ಅವರು ನೇಮಿಸಿದ ಸೈನಿಕರು, ಸೈನಿಕ ಅಧಿಕಾರಿಗಳು ಹಾಗೂ ಸೈನಿಕ ಸುಧಾರಣೆಗಳು ಅತ್ಯಂತ ಮಹತ್ತರವಾದ ಬದಲಾವಣೆಗಳಿಗೆ ಕಾರಣವಾದವು. ಈ ಬದಲಾವಣೆಗಳನ್ನು ತಿಳಿಯಲು ಅನೇಕ ಗೆಜೆಟಿಯರ್‌ಗಳು ಮತ್ತು ಬ್ರಿಟಿಷರ ದಾಖಲಾತಿಗಳನ್ನು ಬಳಸಿಕೊಳ್ಳಲಾಗಿದೆ. ಪುನರ್ದಾನದ ನಂತರ ಮೈಸೂರು ರಾಜ್ಯದಲ್ಲಿ ಸ್ವಾತಂತ್ರ ನಂತರದವರೆಗೂ ಸೈನ್ಯವನ್ನು ಬಳಸಿಕೊಂಡ ಬಗೆಯನ್ನು ತಿಳಿಸಲಾಗಿದೆ.

ಕ್ರಿ.ಶ.೧೪ನೆಯ ಶತಮಾನದ ಅಂತ್ಯದಿಂದ ವಿಜಯನಗರ ಸಾಮ್ರಾಜ್ಯದ ಎಲ್ಲಾ ಸಾಂಸ್ಕೃತಿಕ, ಆಡಳಿತಾತ್ಮಕ ಸೈನಿಕ ಸುಧಾರಣೆಗಳನ್ನು ಒಳಗೊಂಡಂತೆ ವಿವಿಧ ಕಾಲಘಟ್ಟಗಳಲ್ಲಿ ತಯಾರಾದ ಆಯುಧಗಳು, ಸೈನಿಕರ ವೇತನ, ಕಾರ್ಯವೈಖರಿ, ಸೈನಿಕ ಯೋಜನೆಗಳು ಮೊದಲಾದವುಗಳನ್ನು

ಕುರಿತು ತಿಳಿಸಲಾಗಿದೆ. ವಿವಿಧ ಕಾಲಘಟ್ಟಗಳಲ್ಲಿ ಮಾರ್ಪಾಟಾದ ಬದಲಾವಣೆಗಳನ್ನು ಕುರಿತು ಚರ್ಚಿಸಲಾಗಿದೆ.

**ಅಧ್ಯಯನ ವ್ಯಾಪ್ತಿ**

ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಮೈಸೂರು ಅರಸರ ಪ್ರಾರಂಭದಿಂದ ಅಂದರೆ ಸ್ವತಂತ್ರವಾಗಿ ಆಳಲ್ಪಟ್ಟ ಕಾಲದಿಂದ (ಕ್ರಿ.ಶ.೧೫೭೮) ಹಿಡಿದು ಕ್ರಿ.ಶ. ೧೯೫೦ರವರೆಗೆ ಅಂದರೆ ಮೈಸೂರು ರಾಜ್ಯಕ್ಕೆ ಅಧಿಕಾರ ಹಸ್ತಾಂತರವಾಗುವ ಕಾಲದವರೆಗೆ ನಿಗದಿಪಡಿಸಿಕೊಳ್ಳಲಾಗಿದೆ. ಇದರಲ್ಲಿ ಎರಡು ಭಾಗಗಳನ್ನು ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ದೇಶೀಯ ಅರಸರ ನೇರ ಆಳ್ವಿಕೆಯ ಕಾಲದವರೆಗೆ ಒಂದು ಹಂತವಾದರೆ, ಟಿಪ್ಪುಸುಲ್ತಾನ ಮರಣದಿಂದ ೧೯೫೦ರವರೆಗೆ ಅಧ್ಯಯನಕ್ಕೆ ಕರ್ನಾಟಕದ ಬಾದಾಮಿಯಿಂದ ಚಾಮರಾಜನಗರವನ್ನು ಒಳಗೊಂಡಂತೆ ತಮಿಳುನಾಡಿನ ತಂಜಾವೂರಿನ ವರೆಗಿನ ಉತ್ತರ ದಕ್ಷಿಣ ದಿಕ್ಕುಗಳು ಮತ್ತು ಪೂರ್ವ ಮತ್ತು ಪಶ್ಚಿಮ ಕರಾವಳಿಗಳ ವಿವಿಧ ಸ್ಥಳಗಳು ಮೈಸೂರು ಒಡೆಯರ ನೇರ ಮತ್ತು ಪರೋಕ್ಷವಾದ ಆಳ್ವಿಕೆಗೆ ಒಳಪಟ್ಟಿದ್ದರಿಂದ ಆ ಪ್ರದೇಶಗಳನ್ನು ಕೂಡ ಅಧ್ಯಯನದ ಮಿತಿಯೊಳಗೆ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ಸಮೀಕ್ಷೆ**

ಮೈಸೂರು ಒಡೆಯರ ರಾಜಕೀಯ ಇತಿಹಾಸವನ್ನು ತಿಳಿಸುವ ಹಲವಾರು ಕೃತಿಗಳು ರಚನೆಯಾಗಿವೆ. ಅಂತೆಯೇ ಅವರ ಸೈನಿಕ ವ್ಯವಸ್ಥೆಗೆ ಸಂಬಂಧಿಸಿದ ಮಾಹಿತಿಯನ್ನು ಅಲ್ಪ ಪ್ರಮಾಣದಲ್ಲಿ ಒದಗಿಸುವ ಪ್ರಯತ್ನವನ್ನು ಈ ಕೃತಿಗಳು ಮಾಡಿವೆ. ಅದರಲ್ಲೂ ಮೈಸೂರು ಒಡೆಯರ ಸಮಕಾಲೀನ ಅರಸರು, ಪಾಳೆಯಗಾರರು ಮತ್ತು ಸಂಸ್ಥಾನಗಳಲ್ಲಿ ರಚಿತವಾದ ಸಾಹಿತ್ಯಕ ಕೃತಿಗಳೂ ಮೈಸೂರು ಒಡೆಯರ ಸೈನಿಕ ವ್ಯವಸ್ಥೆಯನ್ನು ಕುರಿತ ಮಾಹಿತಿಯನ್ನು ಒದಗಿಸುವ ಆಕರಗಳಾಗಿವೆ. ಅವುಗಳಲ್ಲಿ ಕೆಲವೊಂದು ಪರಿಚಯಾತ್ಮಕ ಕೃತಿಗಳು, ಬಿಡಿಲೇಖನಗಳು, ಕೈಪಿಡಿ ಕೃತಿಗಳು, ಎಂಫಿಲ್ ಮತ್ತು ಪಿಎಚ್.ಡಿ ಮಹಾಪ್ರಬಂಧಗಳು ಮಾಹಿತಿಗಳನ್ನು ಒದಗಿಸುತ್ತವೆ. ಪ್ರಮುಖವಾಗಿ ಬಿ.ರಾಮಕೃಷ್ಣರಾವ್ ಅವರ 'ಶ್ರೀಮನ್ಮಹಾರಾಜರ ವಂಶಾವಳಿ'–ಎಂಬ ಎರಡು ಸಂಪುಟಗಳ ಈ ಕೃತಿಯು ಮೈಸೂರು ಸಾಮ್ರಾಜ್ಯವು ವಿಜಯನಗರ ಸಾಮ್ರಾಜ್ಯದ ಸಾಮಂತರಾಗಿ ಆರಂಭವಾಗಿ ಕ್ರಿ.ಶ.೧೯೨೦ ರವರೆಗೆ, ಅಂದರೆ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದವರೆಗೆ ರಾಜಕೀಯ ಮತ್ತು ಸೈನಿಕ ವ್ಯವಸ್ಥೆಗಳ ಸಂಪೂರ್ಣ ಮಾಹಿತಿಗಳನ್ನು ಒದಗಿಸುವ ಮೂಲ ಆಕರವಾಗಿದೆ. ಪ್ರಮುಖವಾಗಿ ದಳವಾಯಿಗಳ ಆಳ್ವಿಕೆಯನ್ನು ಒಳಗೊಂಡಂತೆ ಸಹಾಯಕ ಸೈನ್ಯ ಪದ್ಧತಿಯ ವರೆಗಿನ ಸಂಪೂರ್ಣ ಮಾಹಿತಿಗಳನ್ನು ಈ ಕೃತಿಯು ತಿಳಿಸುತ್ತದೆ. ಎಸ್.ವೈ. ಸೋಮಶೇಖರ್ ಅವರು 'ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧನೀತಿ' ಎಂಬ ಕೃತಿಯು ವಿಜಯನಗರದ ಪೂರ್ವಕಾಲದಿಂದ ಹಿಡಿದು. ರಕ್ಕಸಗಿ–ತಂಗಡಗಿ ಯುದ್ಧದವರೆಗೆ ಇದ್ದಂತಹ ಸೈನ್ಯ ವ್ಯವಸ್ಥೆ, ಯುದ್ಧವ್ಯವಸ್ಥೆ ಮತ್ತು ಯುದ್ಧನೀತಿಗಳನ್ನು ವಿದೇಶಿ ಪ್ರವಾಸಿಗರ

ಕಥನಗಳಲ್ಲಿನ ಮಾಹಿತಿಗಳನ್ನು ಸಮಗ್ರವಾಗಿ ಒದಗಿಸುತ್ತದೆ. ಆರ್.ಶಾಮಾಶಾಸ್ತ್ರೀ ಅವರು ಸಂಪಾದಿಸಿರುವ 'ಗೋವಿಂದವೈದ್ಯಕೃತ ಕಂಠೀರವ ನರಸರಾಜ ವಿಜಯಂ' ಕೃತಿಯ ಕಂಠೀರವ ನರಸರಾಜ ಒಡೆಯರ್ ಕಾಲಾವಧಿಯಲ್ಲಿ ಶ್ರೀರಂಗ ಪಟ್ಟಣದ ಮೇಲೆ ಬಿಜಾಪುರದ ೨ನೇ ಮಹಮದ್ ಆದಿಲ್ ಷಾನ ಸೈನ್ಯವು ರಣದುಲ್ಲಾಖಾನ್‌ನ ನೇತೃತ್ವದಲ್ಲಿ ದಾಳಿ ಮಾಡಿದಾಗ ಮೈಸೂರಿನ ಸೈನ್ಯವು ಯುದ್ಧದಲ್ಲಿ ಶತ್ರುಗಳೊಂದಿಗೆ ಹೋರಾಡಿದ ವಿಧಾನವನ್ನು ತಿಳಿಸುವಂತಹ ಪ್ರಮುಖ ಆಕೃತಿಯಾಗಿದೆ. ಬಿ.ವಿ.ಸುಧಾ ಮಣಿಯರವರ 'ದಳವಾಯಿ ನಂಜರಾಜಯ್ಯನ ಕಾಲದ ಮೈಸೂರು' ಎಂಬ ಕೃತಿಯಲ್ಲಿ ಮೈಸೂರು ಒಡೆಯರ ಸೋದರ ಸಂಬಂಧಿಗಳಾದ ಕಳಲೆ ಮನೆತನದ ದಳವಾಯಿ ದೇವರಾಜನು ತನ್ನ ಕಾಲಾವಧಿಯಲ್ಲಿ ಮೈಸೂರಿನ ಆಳ್ವಿಕೆಯಲ್ಲಿನ ವಿವರಗಳನ್ನು ಒದಗಿಸುತ್ತದೆ. ಪ್ರೊ. ನಂಜರಾಜ ಅರಸ ಅವರ 'ಮೈಸೂರು ನೂರಿನ್ನೂರು ವರ್ಷಗಳ ಹಿಂದೆ' ಕೃತಿಯು ಮೈಸೂರು ಒಡೆಯರ ಆಳ್ವಿಕೆಯ ಕಾಲಾವಧಿಯು ನಾಲ್ಕು ಆಂಗ್ಲೋ ಮೈಸೂರು ಯುದ್ಧಗಳನ್ನು ಒಳಗೊಂಡಂತೆ; ಜಯಚಾಮರಾಜ ಒಡೆಯರ ಕಾಲಾವಧಿಯವರೆಗಿನ ಸೈನ್ಯ ವ್ಯವಸ್ಥೆಯ ಬಗ್ಗೆ ಕಿರುಮಾಹಿತಿಯನ್ನು ಕುರಿತು ತಿಳಿಸುತ್ತದೆ. ಎ. ಸತ್ಯನಾರಾಯಣ ಅವರ History of Wodeyars of mysore (1610-1748) ಸೈನಿಕ ಆಡಳಿತದ ಬಗ್ಗೆ ಅತ್ಯಲ್ಪವಾದ ಮಾಹಿತಿಯನ್ನು ಒದಗಿಸುವುದು. ಸಿ.ಹಯವದನರಾವ್ ಅವರ ಮೈಸೂರು ಗೆಜೆಟಿಯರ್ ಸಂಪುಟ ೪. ಮೈಸೂರು ಒಡೆಯರ ಅಧಿಕಾರದ ಪುನರ್ಧಾನದ ಅವಧಿಯಲ್ಲಿನ ಸೈನಿಕ ಮತ್ತು ಪೋಲೀಸ್ ವ್ಯವಸ್ಥೆಗಳನ್ನು ಕುರಿತು ತಿಳಿಸುತ್ತದೆ. ಹೆಚ್.ಟಿ. ತಳವಾರ್ ಅವರ 'ಆರ್ಮ್ಸ್ ಅಂಡ್ ಆರ್ಮರಿ ಆಫ್ ಇನ್ ದ ಮೈಸೂರು' ಕೃತಿಯು ಮೈಸೂರು ಅರಮನೆಯಲ್ಲಿರುವ ಆಯುಧಗಾರದಲ್ಲಿನ ಆಯುಧಗಳ ಮಾಹಿತಿಯನ್ನು ನೀಡುವ ಒಂದು ಪ್ರಮುಖವಾದ ಆಕರವಾಗಿದೆ. ಷೇಕ್ ಅಲಿ. ಬಿ ಅವರು ಸಂಪಾದಿಸಿರುವ 'ಕರ್ನಾಟಕ ಚರಿತ್ರೆ ಸಂಪುಟ ೩-೫ ಕೃತಿಗಳು ಮೈಸೂರು ಒಡೆಯರು, ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರ ಕಾಲದ ಸೈನ್ಯ ಯುದ್ಧ ವ್ಯವಸ್ಥೆ ಹಾಗೂ ಯುದ್ಧನೀತಿಗಳನ್ನು ಪರಿಚಯಿಸುವಂತಹ ಕೈಪಿಡಿಯಾಗಿದೆ. ಎಂ.ಎಂ.ಕಲಬುರ್ಗಿ ಅವರ 'ಮಹಾನಾಡ ಪ್ರಭುಗಳು' ಎಂಬ ಸಂಪಾದನಾ ಕೃತಿಯು ಮಧುಗಿರಿ ಮಹಾನಾಡ ಪ್ರಭುಗಳ ರಾಜಕೀಯ ಚರಿತ್ರೆ ಮತ್ತು ಹೋರಾಟಗಳ ಬಗ್ಗೆ ಸಮಗ್ರ ಮಾಹಿತಿಯನ್ನು ಒದಗಿಸುತ್ತದೆ. ಎಂ.ಎಂ. ಕಲಬುರ್ಗಿ ಮತ್ತು ಬಿ.ಎಸ್ ರಾಮಭಟ್ಟ ಅವರು ಸಂಪಾದಿಸಿರುವ 'ಕೆಳದಿ ಸಂಸ್ಥಾನದ ಸಮಗ್ರ ಅಧ್ಯಯನ' ಕೃತಿಯು ಮೈಸೂರು ಒಡೆಯರು ಮತ್ತು ಕೆಳದಿ ಸಂಸ್ಥಾನದ ನಡುವೆ ನಡೆದಂತಹ ಯುದ್ಧ, ಒಪ್ಪಂದಗಳು ಮತ್ತು ಎರಡೂ ರಾಜ್ಯಗಳ ಸೈನಿಕ ವ್ಯವಸ್ಥೆಯನ್ನು ತಿಳಿಸುವ ಪ್ರಯತ್ನವನ್ನು ಮಾಡಿದೆ. ಎಂ.ವಿ. ವಸು ಅವರು ಸಂಪಾದಿಸಿರುವ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು' ಕೃತಿಯು ಮೈಸೂರು ಒಡೆಯರು ವಿವಿಧ ರಾಜಮನೆತನಗಳೊಂದಿಗೆ ಹೊಂದಿದ್ದ ಸೈನಿಕ ಸಂಬಂಧವನ್ನು ವಿವರಿಸುವಂತಹ ಆಕರವಾಗಿದೆ. ಹೆಚ್.ಎಸ್. ಶ್ರೀಮತಿಯವರು ಸಂಪಾದಿಸಿರುವ 'ಸೌಗಂಧಿಕಾ ಪರಿಣಯ' ಕೃತಿಯು ಮುಮ್ಮಡಿ ಕೃಷ್ಣರಾಜ ಒಡೆಯರು ರಚಿಸಿದ

ಕೃತಿಯಾಗಿದ್ದು ಸಮಕಾಲೀನ ಯುದ್ಧದ ಚಿತ್ರಣಗಳು ಹಾಗೂ ಸೈನಿಕರ ಉಡುಪುಗಳು, ಸೈನ್ಯದಲ್ಲಿ ಆಯುಧಗಳ ಬಳಕೆ ಮುಂತಾದ ಪೂರಕ ಮಾಹಿತಿಗಳನ್ನು ಒಳಗೊಂಡ ಸಮಗ್ರ ಆಕರವಾಗಿದೆ. ಡಿ.ಎನ್ ಕೃಷ್ಣಯ್ಯ ಅವರು ಬರೆದಿರುವ 'ಕೊಡಗಿನ ಇತಿಹಾಸವು ಸಮಕಾಲೀನ ಯುದ್ಧ ಚಿತ್ರಣಗಳು ಮತ್ತು ಸೈನಿಕ ಸಂಬಂಧಗಳನ್ನು ಕುರಿತು ತಿಳಿಸುತ್ತದೆ.

ಡಿ.ಎನ್. ಯೋಗಿಶ್ವರಪ್ಪ ಅವರ 'ಹಾಗಲವಾಡಿಯ ಪಾಳೆಯಗಾರರು' ಕೃತಿಯು ತುಮಕೂರು ಪ್ರದೇಶದ ಚಿಕ್ಕನಾಯಕನಹಳ್ಳಿ ಪ್ರದೇಶದಲ್ಲಿನ ಹಾಗಲವಾಡಿಯ ನಾಯಕರು ಬಿಜಾಪುರದ ಸುಲ್ತಾನರು ಮತ್ತು ಮೈಸೂರು ಒಡೆಯರ ನಡುವಿನ ಹೋರಾಟಗಳನ್ನು ತಿಳಿಸುವಂತಹ ಪ್ರಮುಖ ಕೃತಿಯಾಗಿದೆ. ಮುನಿರಾಜಪ್ಪ ಎಂ. ಅವರ 'ಮಾಗಡಿ ಸೀಮೆಯ ಇತಿಹಾಸ ಮತ್ತು ಸಂಸ್ಕೃತಿ' ಎಂಬ ಕೃತಿಯು ಯಲಹಂಕ ನಾಡಪ್ರಭುಗಳಾಗಿದ್ದ ಇಮ್ಮಡಿ ಮತ್ತು ಮುಮ್ಮಡಿ ಕೆಂಪೇಗೌಡರ ಸೈನ್ಯವ್ಯವಸ್ಥೆ ಮತ್ತು ಮೈಸೂರು ಒಡೆಯರು ಮತ್ತು ಮರಾಠರ ನಡುವಿನ ಹೋರಾಟಗಳು ಹಾಗೂ ಮಾಗಡಿ ಸೀಮೆಯ ಪರಿಸರದ ಕೋಟೆಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಆರ್.ಗೋಪಾಲ್ ಅವರ ಸಂಪಾದನೆಯ ಕೃತಿಗಳಾದ 'ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' 'ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', ಈ ಕೃತಿಗಳು ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಕಂಡು ಬರುವ ಸ್ಮಾರಕಗಳಾದ ಅರಮನೆಗಳು, ಕೋಟೆಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ಹಾಗೆಯೇ ಮೈಸೂರು ಒಡೆಯರ ಕಾಲದ ಸಮಗ್ರ ಲೇಖನಗಳ ಪ್ರಮುಖ ಕೃತಿಯಾಗಿದೆ. ಮೈಸೂರು ವಿಶ್ವವಿದ್ಯಾಲಯದ ಶಾಸನ ಸಂಪುಟಗಳಾದ 'ಎಫಿಗ್ರಾಫಿಯಾ ಕರ್ನಾಟಕ' ಮೂರರಿಂದ ಹನ್ನೊಂದರವರೆಗಿನ ಸಂಪುಟಗಳು ಮೈಸೂರು ಒಡೆಯರ ಕಾಲದ ಶಾಸನಗಳಲ್ಲಿ ವೀರಗಲ್ಲುಗಳು, ಹಾಗೂ ಕೊಡುಗೆಗಳನ್ನು ಕುರಿತು ಮಾಹಿತಿ ನೀಡುವ ಆಕರಗಳಾಗಿವೆ.

ಆರ್ ಗೋಪಾಲ್ ಮತ್ತು ನರೇಂದ್ರ ಪ್ರಸಾದ್ ಅವರು ಸಂಪಾದಿಸಿರುವ ಮುಮ್ಮಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ೧೭೯೯-೧೮೬೮' ಕೃತಿಯು ಆ ಕಾಲದ ಸೈನಿಕ ವ್ಯವಸ್ಥೆಯ ವಿವಿಧ ಆಯಾಮಗಳನ್ನು ಕುರಿತು ತಿಳಿಸುವಂತಹ ಪ್ರಮುಖ ಆಕರಗಳಾಗಿವೆ. ಅಂತೆಯೇ ಎನ್ ಚಿನ್ನಸ್ವಾಮಿ ಸೋಸಲೆಯವರ 'ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ' ಹಾಗೂ ಸಂಪಾದನಾ ಕೃತಿಗಳಾದ 'ದಿವಾನ್ ಮಿರ್ಜಾ ಇಸ್ಮಾಯಿಲ್ ಕಾಲದ ಮೈಸೂರು ಸಂಸ್ಥಾನ' ಮತ್ತು 'ಜಯಚಾಮರಾಜೇಂದ್ರ ಒಡೆಯರ್ ಕಾಲದ ಮೈಸೂರು ಸಂಸ್ಥಾನ' ಎಂಬ ಕೃತಿಗಳು ಮೈಸೂರು ಆಧುನಿಕ ಕಾಲದಲ್ಲಿ ಬೆಳವಣಿಗೆ ಹೊಂದಲು ನಡೆದ ಅಭಿವೃದ್ಧಿ ಕಾರ್ಯಗಳು ಮತ್ತು ರೈತ ಹೋರಾಟಗಳನ್ನು ಕುರಿತು ತಿಳಿಸುವಂತಹ ಕೃತಿಗಳಾಗಿವೆ. ಅಲ್ಲದೆ 'ಇತಿಹಾಸ ದರ್ಶನ'ದ ಸಂಪುಟಗಳಲ್ಲಿನ ಹೊಸ ಸಂಶೋಧನಾ ಲೇಖನಗಳು ಪ್ರಮುಖವಾಗಿ ಮೈಸೂರು ಒಡೆಯರ ಕುರಿತು ಮಾಹಿತಿ ನೀಡುತ್ತವೆ. ಆರ್.ಎಲ್. ಅನಂತರಾಮಯ್ಯ ಅವರ ಅನುವಾದಿತ ಕೃತಿಯಾದ 'ಮರಾಠರ ಆಡಳಿತ ವ್ಯವಸ್ಥೆ-ಸಂಪುಟ ೧ ಮತ್ತು ೨' ರಲ್ಲಿ ಮರಾಠರು ಹೊಂದಿದ್ದ ಸೈನಿಕ ಮತ್ತು ಆಡಳಿತ ವಿಭಾಗಗಳನ್ನು ಮಾಹಿತಿಯನ್ನು ಕುರಿತು ತಿಳಿಸುತ್ತದೆ.

ಎಂ.ಫಿಲ್ ಪ್ರೌಢಪ್ರಬಂಧಗಳಾದ ಸ್ವಾಮಿನಾಯಕ ಕೆ.ಎಸ್ ಅವರ 'ಬೆಟ್ಟದಪುರ-ಒಂದು ಸಾಂಸ್ಕೃತಿಕ ಅಧ್ಯಯನ' ಮತ್ತು ಉದಯ ಕುಮಾರ ಕೆ.ಸಿ ಅವರ 'ಬೆಟ್ಟದಪುರ ಪರಿಸರದ ಪುರಾತತ್ವ ಅಧ್ಯಯನ'ಗಳು ಪಿರಿಯಾಪಟ್ಟಣವನ್ನು ಆಳ್ವಿಕೆ ಮಾಡಿದ ಮೈಸೂರು ಅರಸರು ಹಾಗೂ ಅವರ ಸಮಕಾಲೀನ ಪಾಳೆಯಗಾರರ ಆಳ್ವಿಕೆಯನ್ನು ಕುರಿತು ತಿಳಿಸುತ್ತವೆ. ಚಿತ್ರದುರ್ಗ ತಾಲೂಕು ಪರಿಸರದಲ್ಲಿ ವಿಜಯನಗರ, ಮೈಸೂರು ಒಡೆಯರು ಮತ್ತು ಚಿತ್ರದುರ್ಗ ಪಾಳೆಯಗಾರರ ಆಡಳಿತವನ್ನು ತಿಳಿಯಲು ಬಸವರಾಜು ಸಿ. ಅವರ 'ಚಿತ್ರದುರ್ಗ ಕೋಟೆಯ ಐತಿಹ್ಯಗಳು', ನಾಗರಾಜಪ್ಪ ಎನ್. ಅವರ 'ಚಿತ್ರದುರ್ಗ ಪರಿಸರದ ದೇವಾಲಯಗಳು', ವಿಶ್ವನಾಥ ಪಿ. ಅವರ 'ಚಿತ್ರದುರ್ಗ ಪ್ರದೇಶದ ಪ್ರಾಗೈತಿಹಾಸಿಕ ಚಿತ್ರಗಳು' ಮತ್ತು ಶರತ್‌ಬಾಬು ಕೆ.ಎಸ್ ಅವರ 'ತುರುವನೂರು ಹೋಬಳಿಯ ಪುರಾತತ್ವೀಯ ಅಧ್ಯಯನ' ಎಂಬ ಪ್ರೌಢಪ್ರಬಂಧಗಳು ಸಹಾಯಕವಾಗಿವೆ. ಸೀತಾರಾಂಬಾಬು ಅವರ ಮಧುಗಿರಿ ಪರಿಸರದ ದೇವಾಲಯಗಳ ಅಧ್ಯಯನ, ಮಹೇಶ್ ಕುಮಾರ್ ಡಿ. ಹೆಚ್ ಅವರ ಚನ್ನಗಿರಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಎಂಬ ಪ್ರೌಢಪ್ರಬಂಧಗಳು ಕೊರಟಗೆರೆ ಮತ್ತು ಮಧುಗಿರಿ ಪ್ರದೇಶಗಳಲ್ಲಿ ಮಧುಗಿರಿಯ ಮಹಾನಾಡ ಪ್ರಭುಗಳಾದ ಪಾಳೆಯಗಾರರು ಮತ್ತು ಮೈಸೂರು ಒಡೆಯರ ಆಳ್ವಿಕೆಗೆ ಸಂಬಂಧಿಸಿದ ಮಾಹಿತಿಯನ್ನು ಒದಗಿಸುತ್ತವೆ. ಹೇಮಂತಕುಮಾರ ಎಂ. ಅವರ ಮೈಸೂರು ಜಿಲ್ಲೆಯ ಚಿತ್ರಕಲೆಯು ಮೈಸೂರು ಅರಸರ ಚಿತ್ರಗಳಲ್ಲಿ ಸೈನ್ಯವನ್ನು ಕುರಿತು ತಿಳಿಸುತ್ತದೆ. ಕವಿರತ್ನ ಬಾಬುರಾವ್ ಅವರ 'ಬಹಮನಿ ಕಾಳಗಗಳು' ಬಿಜಾಪುರದ ಸುಲ್ತಾನರು ಶ್ರೀರಂಗಪಟ್ಟಣದ ಮೇಲೆ ಮಾಡಿದ ದಾಳಿಗಳನ್ನು ಕುರಿತು ಮಾಹಿತಿಯನ್ನು ಒದಗಿಸುತ್ತದೆ. ಕಳಲೆ ಮನೆತನದ ದಳವಾಯಿಗಳು ಮೈಸೂರು ಒಡೆಯರೊಂದಿಗೆ ಹೊಂದಿದ್ದ ವೈವಾಹಿಕ ಸಂಬಂಧಗಳಿಂದ ಮೈಸೂರು ರಾಜ್ಯವನ್ನು ಉಳಿಸುವ ರಾಜಕೀಯ ಉದ್ದೇಶಗಳನ್ನು ಕುರಿತು ಉಮೇಶ ಸಿ.ಜಿ ಅವರ ಕಳಲೆ ದಳವಾಯಿಗಳು ಒಂದು ಚಾರಿತ್ರಿಕ ಅಧ್ಯಯನವು ತಿಳಿಸುತ್ತದೆ. ಮೈಸೂರಿನ ರಾಜಕೀಯ ಇತಿಹಾಸಕ್ಕೆ ರಾಜಕೀಯ ಹೊಳಪನ್ನು ನೀಡಿದವರು ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರು. ಇವರ ಕಾಲದ ಬೆಂಗಳೂರಿನ ರಾಜಕೀಯ ಮತ್ತು ಸೈನಿಕ ಆಡಳಿತದ ಜೊತೆಗೆ ಅಂದಿನ ಕೈಗಾರಿಕೆಗಳಿಂದ ಸೈನ್ಯಕ್ಕೆ ಅವಶ್ಯಕವಾದ ಫಿರಂಗಿಗಳ ಕಾರ್ಖಾನೆಗಳನ್ನು ಕುರಿತು ಮುನಿರಾಜು ಎಸ್. ಅವರ ಮೈಸೂರು ಸುಲ್ತಾನರ ಆಳ್ವಿಕೆಯಲ್ಲಿ ಬೆಂಗಳೂರು ಎಂಬ ಪ್ರೌಢಪ್ರಬಂದವು ಮಾಹಿತಿಯನ್ನು ಒದಗಿಸುತ್ತದೆ.

ಹಾಗೆಯೇ ಪಿಹೆಚ್.ಡಿ ಮಹಾಪ್ರಬಂಧಗಳು ಕೂಡ ಈ ಅಧ್ಯಯನಕ್ಕೆ ಸಹಾಯಕವಾಗಿವೆ. ಅವುಗಳೆಂದರೆ ಬಸವರಾಜು ಬಿ.ಎಸ್., ಅವರ 'ಕಬ್ಬಾಳು ಸಂಕಥನ'ವು ಮೈಸೂರು ಒಡೆಯರ ಕಾಲದಲ್ಲಿ ದಳವಾಯಿ ದೇವರಾಜಯ್ಯನೂ ಕಬ್ಬಾಳು ದುರ್ಗದಲ್ಲಿ ದೊಡ್ಡ ದೇವರಾಜ ಒಡೆಯರನ್ನು ಬಂಧನದಲ್ಲಿಟ್ಟಿದ್ದ ಮಾಹಿತಿಯನ್ನು ಒದಗಿಸುತ್ತದೆ.

ಉದಯಕುಮಾರ ಕೆ.ಸಿ., ಅವರ 'ಪಿರಿಯಾಪಟ್ಟಣ ತಾಲ್ಲೂಕು ಪರಿಸರದ ಪುರಾತತ್ವ ಅಧ್ಯಯನ'ವು ಪಿರಿಯಾಪಟ್ಟಣದ ಪಾಳೆಯಗಾರರಿಗೂ ಮತ್ತು ಮೈಸೂರು ಅರಸರಾದ ಕಂಠೀರವ ನರಸರಾಜ ಒಡೆಯರಿಗೂ ನಡೆದ ಪಿರಿಯಾಪಟ್ಟಣ ಕಾಳಗವನ್ನು ಕುರಿತು ವಿವರಿಸುತ್ತದೆ.

ವಿಜಯಲಕ್ಷ್ಮಮ್ಮ ಜಿ. ಅವರ 'ಮೈಸೂರು ಒಡೆಯರ ಚರಿತ್ರೆ : ಚರಿತ್ರೆ ಲೇಖನಾಶಾಸ್ತ್ರದ ಹಿನ್ನೆಲೆಯಲ್ಲಿ' ಎಂಬ ಪ್ರಬಂಧವು ಮೈಸೂರು ಒಡೆಯರ ರಾಜಕೀಯ ಆಡಳಿತವನ್ನು ಕುರಿತಂತೆ ಮಾಹಿತಿಯನ್ನು ನೀಡುತ್ತದೆ.

ರಶ್ಮಿ ಆರ್.ಎನ್. ಅವರ 'ಶ್ರೀರಂಗಪಟ್ಟಣದ ರಂಗನಾಥ ದೇವಾಲಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ'ವು ಶ್ರೀರಂಗಪಟ್ಟಣದಲ್ಲಿ ವಿಜಯನಗರದ ಅರಸರು ಮತ್ತು ಮೈಸೂರು ಒಡೆಯರ ಕಾಲದ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಇತಿಹಾಸವನ್ನು ಕುರಿತು ತಿಳಿಸುತ್ತದೆ.

ವಿಶ್ವನಾಥ ಕೆ.ಎಸ್. ಅವರ 'ಟಿಪ್ಪುಸುಲ್ತಾನ್ ಹಾಗೂ ಫ್ರೆಂಚರು : ಮಿಲಿಟರಿ' ಮತ್ತು ಶಿವಕುಮಾರಿ ಎನ್. ಅವರ 'ಟಿಪ್ಪುವಿನ ಕೋಟೆಗಳ ರಚನಾ ವಿನ್ಯಾಸ ಮತ್ತು ಐತಿಹ್ಯಗಳು' ಎಂಬ ಮಹಾಪ್ರಬಂಧದಲ್ಲಿ ಟಿಪ್ಪುವಿನ ಕಾಲದ ಯುದ್ಧನೀತಿ ಮತ್ತು ರಕ್ಷಣಾ ವಾಸ್ತುಶಿಲ್ಪವನ್ನು ಕುರಿತು ಮಾಹಿತಿಯನ್ನು ನೀಡುತ್ತವೆ.

ಜಯಶಂಕರ ಎನ್. ಅವರ 'ಚಾಮರಾಜನಗರ ತಾಲ್ಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ'ವು ಚಾಮರಾಜನಗರ ತಾಲ್ಲೂಕಿನಲ್ಲಿ ಮೈಸೂರು ಒಡೆಯರ ಕಾಲದ ಆಳ್ವಿಕೆಯ ಚಹರೆಗಳನ್ನು ಕುರಿತು ಮಾಹಿತಿಯನ್ನು ಒದಗಿಸುತ್ತದೆ.

ಮಂಜುನಾಥ ಎನ್. ಅವರ 'ಬೆಂಗಳೂರು ನಗರ ಜಿಲ್ಲೆಯ ಸ್ಥಳನಾಮಗಳು : ಒಂದು ಸಾಮಾಜಿಕ, ಭಾಷಿಕ ಅಧ್ಯಯನ'ವು ಬೆಂಗಳೂರು ನಗರ ಜಿಲ್ಲೆಯಲ್ಲಿ ಮೈಸೂರು ಒಡೆಯರ ಯಲಹಂಕ ನಾಡಪ್ರಭುಗಳ ಮತ್ತು ಮೈಸೂರಿನ ನವಾಬರ ಆಳ್ವಿಕೆಯನ್ನು ಕುರಿತು ವಿವರಿಸುತ್ತದೆ.

ಪ್ರಕಾಶ ಕೆ.ಪಿ., ಅವರ 'ಕನಕಪುರ ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿ' ಎಂಬ ಪ್ರಬಂಧವು ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ಕಾನಕಾನಳ್ಳಿಯ ಪ್ರದೇಶದಲ್ಲಿ ಬ್ರಿಟೀಷರು ಮತ್ತು ಮೈಸೂರಿನ ಸೈನಕ್ಕೆ ನಡೆದಂತಹ ಯುದ್ಧಗಳು ಮತ್ತು ಯುದ್ಧನೀತಿಗಳನ್ನು ಕುರಿತು ವಿವರಿಸುತ್ತದೆ.

ವೀರಪ್ಪಗೌಡ ಹೆಚ್.ಸಿ., ಅವರ 'ಚಾರಿತ್ರಿಕ ಹಿನ್ನೆಲೆಯಲ್ಲಿ ಶೃಂಗೇರಿ ಮಹಾಸಂಸ್ಥಾನದ ಆರ್ಥಿಕ ಅಧ್ಯಯನ'ವು ಮರಾಠರು ಮೈಸೂರಿನ ಮೇಲೆ ದಾಳಿ ಮಾಡಿದಾಗ ಶೃಂಗೇರಿಯ ಶಾರದಾಪೀಠವನ್ನು ಲೂಟಿ ಮಾಡಿದ್ದರು. ಆದರೆ ಟಿಪ್ಪುಸುಲ್ತಾನನು ಶೃಂಗೇರಿಗೆ ನೀಡಿದ ದಾನ-ದತ್ತಿಗಳಿಂದ ಶಾರದಾಪೀಠವನ್ನು ಪುರ್ನಸ್ಥಾಪಿಸಲು ಕಾರಣನಾದನು.

ಹೀಗೆ ಈ ಮೇಲಿನ ಕೃತಿ ಹಾಗೂ ಅಧ್ಯಯನಗಳು ಪ್ರಸ್ತುತ ಅಧ್ಯಯನಕ್ಕೆ ವಿವಿಧ ಬಗೆಯ ಪೂರಕ ಮಾಹಿತಿಗಳನ್ನು ಒದಗಿಸಿ ಮಹಾಪ್ರಬಂಧಕ್ಕೆ ಪುಷ್ಠಿದಾಯಕವಾಗಿವೆ ಎಂಬುದರಲ್ಲಿ ಸಂಶಯವಿಲ್ಲ.

**ಅಧ್ಯಯನ ವಿಧಾನ**

ಯಾವುದೇ ಒಂದು ಅಧ್ಯಯನವು ಯಶಸ್ವಿಯಾಗಿ ನಡೆಯಬೇಕೆಂದರೆ ಅದಕ್ಕೆ ಅಧ್ಯಯನ ಶಿಸ್ತು ಅಥವಾ ಕ್ರಮ ಅತ್ಯಂತ ಅಗತ್ಯ. ಇಲ್ಲವಾದರೆ ಸಂಶೋಧನಾ ವಿಷಯವು ದಾರಿತಪ್ಪುವ ಸಾಧ್ಯತೆಯಿರುತ್ತದೆ. ಪ್ರಸ್ತುತ ಮಹಾಪ್ರಬಂಧವು ಕ್ಷೇತ್ರಕಾರ್ಯ ಮತ್ತು ದಾಖಲೆಗಳ ಸಮಗ್ರ ಅಧ್ಯಯನವಾಗಿದೆ. ವಿವಿಧ ಪ್ರಾಂತ್ಯಗಳಲ್ಲಿ ವಿವಿಧ ಆಳರಸರ ಕಾಲಾವಧಿಯಲ್ಲಿ ನಿರ್ಮಾಣವಾದ ಮತ್ತು ಹೋರಾಟ ನಡೆದ ಪ್ರಮುಖ ಸ್ಥಳಗಳಿಗೆ ಭೇಟಿ ನೀಡಿ ಅಲ್ಲಿ ದೊರೆಯುವ ರಕ್ಷಣಾ ವಾಸ್ತುಶಿಲ್ಪ, ಐತಿಹ್ಯಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ. ಮೈಸೂರು ಒಡೆಯರಿಗೆ ಸಂಬಂಧಿಸಿದಂತೆ ಸಾಹಿತ್ಯ ಕೃತಿ, ಲಾವಣಿ, ಪರಿಚಯಾತ್ಮಕ ಕೃತಿ, ಬಿಡಿ ಲೇಖನಗಳು ಮತ್ತು ಬ್ರಿಟಿಷರ ಈ ದಾಖಲೆಗಳನ್ನಲ್ಲದೇ ಎಲ್ಲ ಬಗೆಯ ಪ್ರಾಥಮಿಕ ಹಾಗೂ ಆನುಷಂಗಿಕ ಆಕರಗಳನ್ನು ಬಳಸಿಕೊಂಡು ಅಂತರ್‌ಶಿಸ್ತೀಯ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಪ್ರಾರಂಭದಲ್ಲಿ ಮೈಸೂರು ಒಡೆಯರಿಗೆ ಸಂಬಂಧಿಸಿದ ಹಲವಾರು ಕೃತಿ, ಲೇಖನ, ಗ್ಯಾಸೆಟಿಯರ್, ಸಂಶೋಧನಾ ಪ್ರಬಂಧ. ಮೊದಲಾದವುಗಳಲ್ಲಿನ ಸೈನ್ಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಕಲೆ ಹಾಕಲಾಯಿತು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬೆಂಗಳೂರಿನ ವಿಧಾನಸೌಧದಲ್ಲಿರುವ ರಾಜ್ಯಪತ್ರಾಗಾರ ಇಲಾಖೆ, ಮೈಸೂರು ವಿಭಾಗೀಯ ಪತ್ರಾಗಾರ ಇಲಾಖೆಗಳಿಗೆ ಭೇಟಿ ನೀಡಿ ಬ್ರಿಟಿಷರ ಕಾಗದ ಪತ್ರಗಳಲ್ಲಿನ ಸೈನಿಕ ಮಾಹಿತಿಗಳು ಮತ್ತು ಪತ್ರ ವ್ಯವಹಾರಗಳನ್ನು ಕುರಿತ ದತ್ತಾಂಶವನ್ನು ಕಲೆ ಹಾಕಲಾಯಿತು. ಮೈಸೂರು ಅರಮನೆ, ಶ್ರೀರಂಗಪಟ್ಟಣ ಮತ್ತು ದರಿಯಾದೌಲತ್‌ಗಳಲ್ಲಿ ಇರುವ ಛಾಯಾಚಿತ್ರಗಳನ್ನು ಸೈನ್ಯವನ್ನು ಕುರಿತು ಮಾಹಿತಿಯನ್ನು ಸಂಗ್ರಹಿಸಿದ್ದು, ಅನಂತರ ಕೋಟೆಕೊತ್ತಲಗಳ ಪ್ರಕಾರ ಅಂಬುಗಂಡಿಗಳು, ಫಿರಂಗಿ ಕಿಂಡಿಗಳು, ಕಂದಕ, ಕೋಟೆ ತೆನೆ ಮೊದಲಾದವುಗಳ ಛಾಯಾಚಿತ್ರಗಳನ್ನು ತೆಗೆದುಕೊಂಡು ಮಾಹಿತಿಯನ್ನು ಕಲೆ ಹಾಕಿ ನಂತರ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅಲ್ಲದೆ ಅಂತರ್ಜಾಲದ ಸಹಾಯದಿಂದ ನಕಾಶೆಗಳನ್ನು ಬಿಡಿಸಿ ಅವುಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಹೀಗೆ ಕ್ಷೇತ್ರಕಾರ್ಯ ಮತ್ತು ಸಾಹಿತ್ಯ, ಪುರಾತತ್ವ ಆಕರಗಳಲ್ಲಡಗಿದ ಮಾಹಿತಿಗಳನ್ನು ಸಂಗ್ರಹಿಸಿ ಸಂಯೋಜಿಸಿ ವಿಶ್ಲೇಷಣೆಯ ಮೂಲಕ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**ಸ್ವರೂಪ**

ಪ್ರಸ್ತುತ ಮಹಾಪ್ರಬಂಧವನ್ನು ಆರು ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ. ಪ್ರತಿ ಅಧ್ಯಾಯದಲ್ಲೂ ಉಪಶೀರ್ಷಿಕೆಗಳನ್ನು ಮಾಡಿಕೊಂಡು ಸಂಶೋಧನೆಯನ್ನು ಕೈಗೊಳ್ಳಲಾಗಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ಅಧ್ಯಯನದ ವಿಧಿ-ವಿಧಾನ ಮತ್ತು ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಒಳಗೊಂಡಿದೆ. ಎರಡನೆಯ ಅಧ್ಯಾಯವು ಮೈಸೂರು ಒಡೆಯರ ಕಾಲದ ಸೈನಿಕ ವ್ಯವಸ್ಥೆಯನ್ನು ತಿಳಿಯಪಡಿಸುತ್ತದೆ. ಸೈನಿಕ ವ್ಯವಸ್ಥೆಯೆಂದರೆ ಒಂದು ನಿರ್ದಿಷ್ಟ ಭೂಪ್ರದೇಶದಲ್ಲಿ ಶಾಂತಿ ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ಇರುವ

ಹಾಗೂ ಶಾಂತಿಗೆ ಭಂಗ ತರುವ ಸಂದರ್ಭದಲ್ಲಿ ಹೋರಾಡಲು ನಿಯೋಜಿಸಲಾಗಿರುವ ಶಸ್ತ್ರಸಜ್ಜಿತ ಮತ್ತು ಶಿಸ್ತುಬದ್ಧವಾದ ಕಠಿಣ ನಿಯಮ, ಕಟ್ಟಳೆಗಳಿಂದ ಸಜ್ಜುಗೊಂಡ ಕ್ರಮಬದ್ಧವಾದ ಸೈನಿಕರ ಶ್ರೇಣಿಕೃತವೇ ಸೈನಿಕ ವ್ಯವಸ್ಥೆ. ಇಲ್ಲಿ ಸೈನ್ಯ ಪಡೆ, ಶಸ್ತ್ರಾಸ್ತ್ರಗಳು, ರಕ್ಷಣಾ ಸಾಧನಗಳು, ರಕ್ಷಣಾ ತಂತ್ರಗಳು ಮತ್ತು ಅದರ ವಿಧಿ-ವಿಧಾನಗಳನ್ನು ಒಳಗೊಂಡಿದೆ. ಮೈಸೂರು ಒಡೆಯರು ತಮ್ಮ ಸೈನ್ಯದಲ್ಲಿ ಹೊಂದಿದ್ದ ಸೇನಾಬಲದ ಕುರಿತು ಈ ಅಧ್ಯಯನದಲ್ಲಿ ಮಾಹಿತಿಯನ್ನು ತಿಳಿಸಲಾಗಿದೆ.

ಎರಡನೆಯ ಅಧ್ಯಾಯವಾದ ಸೈನಿಕ ವ್ಯವಸ್ಥೆಯಲ್ಲಿ ಸೈನಿಕ ವ್ಯವಸ್ಥೆಯ ಪರಿಕಲ್ಪನೆ, ಸೇನಾಬಲ ಮತ್ತು ಸೇನಾ ವಿಭಾಗಗಳನ್ನು ಕುರಿತು ತಿಳಿಸಲಾಗಿದೆ. ಮೈಸೂರಿನ ಸೈನ್ಯವು ಸೇನಾ ವಿಭಾಗಗಳಾದ ಕಾಲ್ದಳ, ಗಜದಳ, ಅಶ್ವದಳ, ಫಿರಂಗಿದಳ ಮತ್ತು ಕ್ಷಿಪಣಿಗಳನ್ನು ಹೊಂದಿದ್ದಿತು. ಹೈದರ್ ಅಲಿಯು ಕ್ರಿ.ಶ.೧೭೬೨ರ ಸಂದರ್ಭದಲ್ಲಿ ಮೊದಲ ಬಾರಿಗೆ ಕ್ಷಿಪಣಿಗಳ ಬಳಕೆಯನ್ನು ಪ್ರಾರಂಭಿಸಿದನು. ಮುಂದೆ ಬ್ರಿಟಿಷರು ಮೈಸೂರು ಸಂಸ್ಥಾನದಲ್ಲಿ ಸಹಾಯಕ ಸೈನ್ಯಪದ್ಧತಿಯನ್ನು ಜಾರಿಗೆ ತಂದರು. ಸಹಾಯಕ ಸೈನ್ಯಪದ್ಧತಿಯಲ್ಲಿ ಬ್ರಿಟಿಷರು ಅಳವಡಿಸಿಕೊಂಡ ಹೊಸ ಆಯ್ಕೆಪದ್ಧತಿ, ವೇತನ, ಸೈನಿಕರ ಕಾರ್ಯವೈಖರಿ ಮೊದಲಾದವುಗಳನ್ನು ತಿಳಿಸಬಹುದಾಗಿದೆ. ಸೈನಿಕರು ವಿವಿಧ ವಿಭಾಗಗಳಿಂದ ವರ್ಗಾವಣೆ, ಬಡ್ತಿ, ಸೇವಾವಧಿಯ ನಿಯಮಗಳನ್ನು ತಿಳಿಸುವ ಹಾಗೂ ಅವರ ವೇಷಭೂಷಣಗಳು ಮುಂತಾದವುಗಳನ್ನು ಬ್ರಿಟಿಷರ ದಾಖಲೆಗಳು ಮತ್ತು ಮೈಸೂರು ಅರಮನೆ, ಶ್ರೀರಂಗಪಟ್ಟಣದ ದರಿಯಾದೌಲತ್‌ಗಳಲ್ಲಿನ ಚಿತ್ರಪಟಗಳಲ್ಲಿರುವ ಸೈನಿಕರ ಚಿತ್ರಣಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಮೂರನೆಯ ಅಧ್ಯಾಯವು ಮೈಸೂರು ಒಡೆಯರ ಕಾಲದ ಸೈನಿಕ ಆಡಳಿತವನ್ನು ಕುರಿತು ಸಮಗ್ರ ಮಾಹಿತಿಯನ್ನು ನೀಡುತ್ತದೆ. ಅರಸ, ಅರಸನ ಕರ್ತವ್ಯ ಮತ್ತು ಪಾತ್ರಗಳು, ಅಧಿಕಾರದ ಶ್ರೇಣೀಕರಣ, ಸೈನ್ಯಾಡಳಿತದದಲ್ಲಿನ ಇಲಾಖೆಗಳು ಮತ್ತು ಸೈನ್ಯದಲ್ಲಿದ್ದ ಸಿಪಾಯಿಗಳಿಗೆ ತರಬೇತಿಗಳು, ಹಾಗೂ ಅವರ ಸಾಮಾಜಿಕ ಜೀವನವನ್ನು ಕುರಿತು ವಿವರವಾದ ಮಾಹಿತಿಗಳನ್ನು ಒದಗಿಸುತ್ತದೆ. ಸೈನಿಕ ಶ್ರೇಣಿಯಲ್ಲಿ ರಾಜನೇ ಪರಮೋಚ್ಚ ಅಧಿಕಾರವನ್ನು ಹೊಂದಿದ್ದನು. ಅನಂತರದ ಸ್ಥಾನದಲ್ಲಿ ದಳವಾಯಿಗಳು, ಪೌಜುದಾರರು, ಪಾಳೆಯಗಾರರು, ಠಾಣಾದಾರರು, ಹೋಬಳಿದಾರರು, ಗುರಿಕಾರರಿದ್ದರು. ಸೈನ್ಯದ ಅತಿಕನಿಷ್ಠ ಮಟ್ಟದಲ್ಲಿ ಗಣಿಕಾ ಸ್ತ್ರೀಯರಿದ್ದರು. ಅಲ್ಲದೆ ಸೈನಿಕರ ವೇತನ, ಸೈನಿಕ ವಿಭಾಗಗಳಲ್ಲಿ ಅವರ ಕಾರ್ಯವೈಖರಿಗಳಲ್ಲದೆ ಸೈನ್ಯಕ್ಕಾಗಿ ಇಡಲಾಗಿದ್ದ ವಾರ್ಷಿಕ ಆಯವ್ಯಯಗಳನ್ನು ಕುರಿತು ವಿಮರ್ಶೆಗೊಳಪಡಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಮೈಸೂರು ಒಡೆಯರು ತಮ್ಮ ರಾಜ್ಯರಕ್ಷಣೆಗಾಗಿ ಅನುಸರಿಸಿದ್ದ ಯುದ್ಧವ್ಯವಸ್ಥೆ ಮತ್ತು ಯುದ್ಧೋಪಕರಣಗಳ ಬಗ್ಗೆ ವಿವರಿಸುತ್ತದೆ. ಮೈಸೂರು ಸಂಸ್ಥಾನದ ಮೇಲೆ ಆದಂತಹ ಆಕ್ರಮಣ, ದಾಳಿಗಳು ಮತ್ತು ಸಂಸ್ಥಾನದಲ್ಲಿ ಉದ್ಭವಿಸಿದ ಪ್ರಮುಖ ದಂಗೆಗಳನ್ನು ಅಡಗಿಸಲು ಬಳಸಿದ ರಕ್ಷಣಾ ಮಾರ್ಗಗಳನ್ನು ಕುರಿತು ತಿಳಿಸುತ್ತದೆ. ಹಾಗೆಯೇ ಸೈನ್ಯಕ್ಕೆ ಬೇಕಾದ ಆಯುಧಗಳ ಬಗ್ಗೆ ಚರ್ಚಿಸಲಾಗಿದೆ. ಮೈಸೂರು ಒಡೆಯರು ಕೋಟೆಗಳನ್ನು ಕಟ್ಟಿದ್ದಕ್ಕಿಂತ ವಶಪಡಿಸಿಕೊಂಡಿದ್ದೇ

ಜಾಸ್ತಿ; ಆದರೂ ಅವರ ಕಾಲದಲ್ಲಿ ನಿರ್ಮಾಣವಾದ ಕೋಟೆ–ಕೊತ್ತಲಗಳನ್ನು ರಕ್ಷಣಾ ವಾಸ್ತುಶಿಲ್ಪದಲ್ಲಿ ಸಮಗ್ರ ಮಾಹಿತಿಯನ್ನು ಕುರಿತು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯವು ಮೈಸೂರು ಒಡೆಯರ ಕಾಲದ ಯುದ್ಧನೀತಿ ಮತ್ತು ಅದರ ಪರಿಣಾಮಗಳನ್ನು ಕುರಿತು ತಿಳಿಸುತ್ತದೆ. ಪ್ರಾರಂಭದಲ್ಲಿ ಕೇವಲ ೩೬ ಹಳ್ಳಿಗಳಿಗೆ ಸೀಮಿತವಾಗಿದ್ದ ಮೈಸೂರು ರಾಜ್ಯವು ವಿವಿಧ ಕಾಲಘಟ್ಟದಲ್ಲಿ ವಿಸ್ತರಿಸಿದ ರೀತಿಯನ್ನು ಕುರಿತು ತಿಳಿಸಲಾಗಿದೆ. ಮೈಸೂರು ಅರಸರು ತಮ್ಮ ಅಧೀನದಲ್ಲಿದ್ದ ಪಾಳೆಯಗಾರರು ಹಾಗೂ ನೆರೆಹೊರೆಯ ರಾಜಮನೆತನಗಳೊಂದಿಗೆ ಅನುಸರಿಸಿದ ಸಂಧಾನಗಳು, ತಮ್ಮ ಮೇಲೆ ಪರರಾಜ್ಯದ ಅರಸರು, ಪಾಳೆಯಗಾರರು, ಮತ್ತು ದಾಳಿಕೋರರಿಂದ ಆಕ್ರಮಣವಾದಾಗ ಅವರಿಂದ ರಕ್ಷಣೆ ಪಡೆಯಲು ಬಳಸಿಕೊಂಡ ರಕ್ಷಣಾ ಕ್ರಮಗಳ ಕುರಿತು ವಿವರಿಸಲಾಗಿದೆ. ಯುದ್ಧಗಳಿಗೆ ಕಾರಣ, ಸಾವುನೋವು, ಅಪಾರ ಪ್ರಮಾಣದ ಯುದ್ಧನಷ್ಟ ಹಾಗೂ ಎರಡೂ ಪಕ್ಷಗಳಲ್ಲಿ ಉಂಟಾದ ಸೈನಿಕ ಪರಿಣಾಮಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಕೊನೆಯ ಅಧ್ಯಾಯವು ಸಮಾರೋಪವಾಗಿದ್ದು ಅಧ್ಯಯನದ ಒಟ್ಟು ಫಲಿತಗಳನ್ನು ಒಳಗೊಂಡಿದೆ. ಮೈಸೂರು ಒಡೆಯರ ಕಾಲಮಿತಿಯಲ್ಲಿ ಮತ್ತು ಕ್ಷೇತ್ರ ವ್ಯಾಪ್ತಿಯ ಇತಿಮಿತಿಯಲ್ಲಿ ಕಟ್ಟಿಕೊಟ್ಟ ಫಲಿತಗಳು ಮುಂದಿನ ಸಂಶೋಧನೆಗೆ ಪೂರಕವಾಗುವುದನ್ನು ವಿವರಿಸಲಾಗಿದೆ. ಮಹಾಪ್ರಬಂಧಕ್ಕೆ ಪೂರಕವಾದ ಅನುಬಂಧದಲ್ಲಿ ಅರಸರ ವಂಶಾವಳಿ, ಕೋಟೆಗಳ ತಲನಕ್ಷೆಗಳು, ಛಾಯಾಚಿತ್ರಗಳನ್ನು ನೀಡಲಾಗಿದೆ.

ಅಧ್ಯಾಯ : ಎರಡು

# ಸೈನಿಕ ವ್ಯವಸ್ಥೆ

೨.೧. ಸೈನಿಕ ವ್ಯವಸ್ಥೆಯ ಪರಿಕಲ್ಪನೆಗಳು

೨.೨. ಸೇನಾಬಲ

೨.೩. ಸೇನಾ ವಿಭಾಗಗಳು

೨.೩.೧. ಕಾಲ್ದಳ

೨.೩.೨. ಅಶ್ವದಳ

೨.೩.೩. ಗಜದಳ

೨.೩.೪. ಗೋಲಂದಾಜು ಅಥವಾ ಫಿರಂಗಿದಳ

೨.೩.೫. ಕ್ಷಿಪಣಿಗಳು

೨.೩.೬. ನೌಕಾದಳ

೨.೩.೭. ಇತರೆ: ಒಂಟೆ ಮತ್ತು ಎತ್ತುಗಳು

## ಅಧ್ಯಾಯ : ಎರಡು

# ಸೈನಿಕ ವ್ಯವಸ್ಥೆ

ಭಾರತದ ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು ಸೈನ್ಯದ ಬಗ್ಗೆ ಮಾಹಿತಿಯನ್ನು ನೀಡುತ್ತವೆ. ರಾಮಾಯಣದಲ್ಲಿ ಸೈನ್ಯವು ಶ್ರೀಲಂಕಾಗೆ ಅಪಾರ ಪ್ರಮಾಣದಲ್ಲಿ ಸಾಗಿದರೆ, ಮಹಾಭಾರತದಲ್ಲಿ ಅಕ್ಷೌಹಿಣಿಗಳ ಲೆಕ್ಕದಲ್ಲಿ ಕೌರವರು ಮತ್ತು ಪಾಂಡವರ ನಡುವೆ ಸೈನ್ಯವು ಜಮಾವಣೆಯಾಗುವುದನ್ನು ಕಾಣಬಹುದು. ಈ ಎರಡೂ ಮಹಾಕಾವ್ಯಗಳು ಚತುರಂಗ ಬಲದ ಬಗೆಗಿನ ಮಾಹಿತಿಯನ್ನು ಕುರಿತು ಪ್ರಸ್ತಾಪಿಸುತ್ತವೆ. ಚತುರಂಗ ಬಲದಲ್ಲಿ ರಥದಳ, ಅಶ್ವದಳ, ಕಾಲ್ದಳ, ಗಜದಳಗಳು ಪ್ರಮುಖವಾಗಿವೆ. ಇದೆ ಚತುರಂಗ ಬಲವನ್ನು ಪ್ರಾಚೀನ ಭಾರತದ ಹಲವಾರು ರಾಜಕೀಯ ಚಿಂತಕರು ಕೂಡ ಪ್ರಸ್ತಾಪಿಸಿದ್ದಾರೆ. ಅದರಲ್ಲೂ ಮುಖ್ಯವಾಗಿ ಕೌಟಲ್ಯನ ಅರ್ಥಶಾಸ್ತ್ರ, ಕಮಂದಕನ ನೀತಿಶಾಸ್ತ್ರ ಶುಕ್ರ ನೀತಿಸಾರ, ಸೋಮೇಶ್ವರನ ಮಾನಸೋಲ್ಲಾಸ, ಕುಮಾರವ್ಯಾಸನ ಕರ್ನಾಟಕ ಭಾರತ ಕಥಾಮಂಜರಿ, ಮನುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ ಹಾಗೂ ಅಗ್ನಿಪುರಾಣಗಳಲ್ಲಿ ಕೂಡ ಸೈನ್ಯದ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ.

ಈ ಮೊದಲೇ ತಿಳಿಸಿದಂತೆ ಕೌಟಲ್ಯನು 'ದಂಡದ ಭಯದಿಂದಲೇ ರಾಷ್ಟ್ರದ ಗಡಿಗಳು ಸುರಕ್ಷಿತವಾಗಿರುತ್ತವೆ' ಎಂದು ತನ್ನ ಅರ್ಥಶಾಸ್ತ್ರ ಕೃತಿಯಲ್ಲಿ ತಿಳಿಸಿದ್ದಾನೆ. ಮುಂದುವರೆದು ಆದರ್ಶಸೇನೆಯ ಲಕ್ಷಣಗಳನ್ನು ಕುರಿತು ತಿಳಿಸುತ್ತಾ ಕ್ಷತ್ರಿಯರನ್ನು ಸೈನ್ಯಕ್ಕೆ ಸೇರಿಸಿಕೊಳ್ಳಬೇಕು. ಇದರಿಂದ ವಂಶಪಾರಂಪರ್ಯವಾಗಿ ರಕ್ತದಲ್ಲೇ ಶಿಸ್ತು ಕರಗತವಾಗಿರುತ್ತದೆ. ಅಲ್ಲದೆ ಸ್ವಾಮಿನಿಷ್ಠೆ ಗುಣಗಳಿರುತ್ತವೆ. ಕ್ಷತ್ರಿಯರೇ ಇದಕ್ಕೆ ಅರ್ಹರು. ಅವರಲ್ಲಿ ಯುದ್ಧಕಲೆಯು ಬೇರೂರಿರುತ್ತದೆ.[೧] ಸದಾ ಶಿಸ್ತುಬದ್ಧವಾದ ವ್ಯವಸ್ಥೆ, ಸಮಯಪ್ರಜ್ಞೆ, ರಾಷ್ಟ್ರರಕ್ಷಣೆಯಂತ ಅಂಶಗಳು ಸದಾ ತುಡಿತದಲ್ಲಿರುತ್ತದೆ. ಜೊತೆಯಲ್ಲಿಯೇ ಆತ್ಮಸ್ಥೈರ್ಯ, ಅನುಕ್ಷಣ ಆಜ್ಞೆಯನ್ನು ಪಾಲಿಸುವ ಮನೋಗುಣಗಳು ಅತ್ಯವಶ್ಯಕವಾಗಿದೆ ಎಂದು ಅರ್ಥಶಾಸ್ತ್ರದಲ್ಲಿ ವಿವರಿಸಲಾಗಿದೆ. ರಾಜನು ರಾಜ್ಯಾದಾಯದ ಒಟ್ಟು ಉತ್ಪನ್ನದಲ್ಲಿ ೧/೪ ಭಾಗವನ್ನು ಸೈನ್ಯಕ್ಕೆ ಮೀಸಲಿಡಬೇಕೆಂದು ಶುಕ್ರನು ತನ್ನ ನೀತಿಸಾರದಲ್ಲಿ ತಿಳಿಸುತ್ತಾನೆ.[೨]

ಸೈನಿಕ ವ್ಯವಸ್ಥೆ ಎಂದರೆ ಶಿಸ್ತು, ಸಂಯಮ, ಕಟ್ಟುನಿಟ್ಟಿನ ಕಾನೂನುಗಳಿಂದ ರೂಪಿತವಾದಂತಹ ಒಂದು ಕ್ರಮಬದ್ಧವಾದ ಸ್ಥಿತಿ. ಸೈನ್ಯ ಮತ್ತು ಯುದ್ಧದ ತಾತ್ವಿಕ ಪರಿಕಲ್ಪನೆಗಳು, ಅರ್ಥ, ವ್ಯಾಪ್ತಿ ಸ್ವರೂಪವನ್ನು ಅತ್ಯಂತ ಕ್ರಮಬದ್ಧವಾದ ಶಿಸ್ತಿನ ಕ್ರಮಗಳ ಆಧಾರದ ಮೇಲೆ ರೂಪುಗೊಂಡಿರುವುದೇ ಆಗಿದೆ. ಈ ವ್ಯವಸ್ಥೆಯಲ್ಲಿ ಸೈನ್ಯಪಡೆ, ಶಸ್ತ್ರಾಸ್ತ್ರಗಳು, ರಕ್ಷಣಾ ಸಾಧನಗಳು, ರಕ್ಷಣಾತಂತ್ರ ಮತ್ತು ಅದರ ಮೂಲಭೂತ ವಿಧಿವಿಧಾನಗಳನ್ನು ಒಳಗೊಂಡಿರುತ್ತದೆ.

**೨.೧. ಸೈನಿಕ ವ್ಯವಸ್ಥೆಯ ಪರಿಕಲ್ಪನೆ**

ಮಾನವನು ಒಂದುಕಡೆ ನೆಲೆಸಲು ಪ್ರಾರಂಭಿಸಿದ ಮೇಲೆ ತನ್ನ ಮತ್ತು ಆತನ ಕುಟುಂಬವನ್ನು ಕಾಡುಪ್ರಾಣಿಗಳು ಮತ್ತು ಪರರ ಆಕ್ರಮಣಗಳಿಂದ ರಕ್ಷಿಸಿಕೊಳ್ಳಲು ಉಪಯೋಗಿಸಿಕೊಂಡ ಕೆಲವು ರಕ್ಷಣಾ ವಿಧಾನಗಳೇ ಸೈನಿಕ ವ್ಯವಸ್ಥೆಯ ಮೂಲ ಸ್ವರೂಪಕ್ಕೆ ಕಾರಣವೆಂದು ಹೇಳಬಹುದು. ಆತ ಮೊದಲಿಗೆ ಕಲ್ಲು, ಮರಗಿಡ ಮತ್ತು ಮೂಳೆಗಳಿಂದ ಮಾಡಿದ ಆಯುಧಗಳನ್ನು ತಯಾರು ಮಾಡಿಕೊಂಡನು. ಇವು ಶಿಲಾಯುಗದಲ್ಲಿ ರಕ್ಷಣಾ ಸಾಧನಗಳೇ ಆಗಿದ್ದವು. ಕಾಲಾನುಕ್ರಮದಲ್ಲಿ ಇದೇ ಆಯುಧಗಳು ರೂಪಾಂತರವಾಗಿ ಕಲ್ಲುಗಳಿಂದ ತಯಾರಾದ ಎರೆಚಕ್ಕೆ, ಕೊಡಲಿಗಳು, ಕವಣಿಕಲ್ಲುಗಳು, ಕಲ್ಲಿನಿಂದ ತೆಗೆದ ಅಲಗುಗಳು ಮುಂತಾದವು ಆಯುಧಗಳಾಗಿ ಪರಿವರ್ತನೆಯಾದವು. ಕಾಲವು ಬದಲಾದಂತೆ ಮರದಿಂದ ತಯಾರಿಸಲಾದ ಈಟಿ, ಭರ್ಜಿ, ಬಿಲ್ಲು, ಬಾಣ ಮೊದಲಾದ ಆಯುಧಗಳು ಕೂಡ ತೂಕ ಮತ್ತು ಗಾತ್ರವನ್ನು ಕಡಿಮೆ ಮಾಡಿ ವೇಗವನ್ನು ಹೆಚ್ಚಿಸಿ ನಿರ್ದಿಷ್ಠ ದೂರವನ್ನು ಅತಿ ಕಡಿಮೆ ಕಾಲದಲ್ಲಿ ತಲುಪುವಂತೆ ಮಾಡಿತು. ಮುಂದೆ ಈ ಆಯುಧಗಳನ್ನೇ ಮಾನವನು ತನ್ನ ಮತ್ತು ಆತನ ಸಮುದಾಯದವರನ್ನು ಪರರಿಂದ ಮತ್ತು ಕ್ರೂರ ಪ್ರಾಣಿಗಳಿಂದ ಕಾಪಾಡಲು ಬಳಕೆ ಮಾಡುವುದನ್ನು ಕಲಿತನು. ಮುಂದೆ ಇವು ಮಾನವನ ರಕ್ಷಣೆ ಮತ್ತು ಪ್ರಾಣಿಗಳ ಬೇಟೆಗಾಗಿ ತಯಾರಾದ ಆಯುಧಗಳಾದವು.

ನಾಗರೀಕತೆಯು ಬಲಿಷ್ಠವಾಗಿ ರೂಪುಗೊಂಡಂತೆ ಅವು ತಮ್ಮ ಬಲವನ್ನು ದುರ್ಬಲ ಸಮುದಾಯಗಳ ಮೇಲೆ ಪ್ರಾಯೋಗಿಸಿ ಅವುಗಳನ್ನು ಅವನತಿಯತ್ತ ಕೊಂಡೊಯ್ದುವು. ಮುಂದೆ ಆಹಾರ ಪದಾರ್ಥಗಳು ಖಾಲಿಯಾದಾಗ ಅವುಗಳ ಸಹಾಯದಿಂದ ಪರರ ಮೇಲೆ ಆಕ್ರಮಣ ಮಾಡಿ ಅವರಿಂದ ಆಹಾರ ಪದಾರ್ಥಗಳು, ಪಶುಸಂಪತ್ತು ಮತ್ತು ಆಯುಧಗಳ ಜೊತೆಗೆ ಜನಸಂಪತ್ತನ್ನು ಕೂಡ ವಶಮಾಡಿಕೊಳ್ಳುತ್ತಿದ್ದರು. ಇದರಿಂದ ಅನ್ಯಸಮುದಾಯದವರ ದಾಸ್ಯದಲ್ಲಿ ಸೋತವರು ಬದುಕಬೇಕಾಗಿತ್ತು. ಆದರೂ ಇದು ಆಕ್ರಮಣಗಳಿಗೆ ದಾರಿಮಾಡಿಕೊಟ್ಟಿತ್ತು. ವಿವಿಧ ಕಾರಣಗಳಿಂದಾಗಿ ಒಬ್ಬರ ಮೇಲೆ ಮತ್ತೊಬ್ಬರು ದಾಳಿಮಾಡುವಂತಹ ಅವಕಾಶವನ್ನು ಒದಗಿಸಿತ್ತು.[೩] ರಾಜತ್ವವು ಸಂಬಂಧಿಗಳಿಗೆ ನೇರವಾಗಿ ಸಂಬಂಧಿಸಿದ್ದು ಪ್ರತಿಯೊಬ್ಬರೂ ಒಪ್ಪಿಕೊಳ್ಳಬೇಕಾದಂತಹ ಅನಿವಾರ್ಯತೆಯಿತ್ತು. ಇದು ಶ್ರಮಿಕವರ್ಗದಲ್ಲಿ ವಯಸ್ಸು ಮತ್ತು ಲಿಂಗದ ಆಧಾರದ ಮೇಲೆ ನಿರ್ಧರಿತವಾಗುತ್ತಿದ್ದವು. ಇದರಿಂದ ಕೇವಲ ನಿರ್ಧಿಷ್ಠ ವಯಸ್ಸನ್ನು ತಲುಪಿದ ವ್ಯಕ್ತಿಗಳು ಮಾತ್ರ ರಾಜ್ಯದ ಆಡಳಿತಾಧಿಕಾರದಲ್ಲಿ ಭಾಗವಹಿಸಲು ಅವಕಾಶವಿದ್ದಿತು. ಈ ಬಗೆಯ ಅಂಶಗಳು

ಮುಂದೆ ರಾಜ ಮತ್ತು ಅವನ ರಕ್ಷಣೆಯಲ್ಲಿದ್ದ ಭೂಪ್ರದೇಶದ ಅಥವಾ ಸಂಪತ್ತಿನ ರಕ್ಷಣೆಯ ಜವಾಬ್ದಾರಿಯುತವಾದ ಹೊಣೆಗಾರಿಕೆಯೂ ಕೂಡ ಸೈನ್ಯಕ್ಕೆ ಸೇರಿತ್ತು. ತನ್ನ ಸಂಪತ್ತನ್ನು ಅಥವಾ ಭೂಮಿಯನ್ನು ರಕ್ಷಿಸುವಂತಹ ಗುರುತರವಾದ ಜವಾಬ್ದಾರಿಗಳು ಕೂಡ ರಾಜನ ಪ್ರಮುಖ ಕರ್ತವ್ಯಗಳಾಗಿದ್ದವು.

ಒಂದು ಸಮುದಾಯದ ಜನರಿಂದ ನೇರವಾಗಿ ಆಯ್ಕೆಯಾದ ಮುಖ್ಯಸ್ಥನು ರಾಜನಾಗಿ ಅಧಿಕಾರವನ್ನು ವಹಿಸಿಕೊಂಡು ಸರ್ಕಾರವನ್ನು ಅಸ್ತಿತ್ವಕ್ಕೆ ತರಲು ರಾಜಕೀಯ ಪ್ರಕ್ಷುಬ್ಧತೆಗಳೇ ಪ್ರಮುಖ ಕಾರಣವಾಗಿದ್ದವು ಎಂದು ಹೇಳಬಹುದಾಗಿದೆ. ಅಂತೆಯೇ, ಈ ಯುದ್ಧ, ಆಕ್ರಮಣ ಅಥವಾ ದಾಳಿಗಳಿಗೆ ಮುಖ್ಯಸ್ಥ ಅಥವಾ ಅರಸನೇ ಪ್ರಮುಖವಾದ ಕಾರಣವಾಗಿರುತ್ತಾನೆ. ಕಲಹ ಅಥವಾ ಘರ್ಷಣೆಗಳ ಸಮಯದಲ್ಲಿ ಜನರು ತಮ್ಮಲ್ಲಿ ಅತ್ಯಂತ ಬಲಶಾಲಿಯಾದವನನ್ನು ಮಾತ್ರ ನಾಯಕನನ್ನಾಗಿ ಆಯ್ಕೆಮಾಡಿಕೊಳ್ಳುತ್ತಿದ್ದರು. ಅಲ್ಲದೆ ಉಳಿದವರು ಅವನ ಆಜ್ಞೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಲೇಬೇಕಿತ್ತು. ಇಲ್ಲದಿದ್ದರೆ ಮರಣದಂಡನೆಯಂತಹ ಉಗ್ರಶಿಕ್ಷೆಗೆ ಗುರಿಯಾಗುತ್ತಿದ್ದರು. ಹೆಚ್ಚಿನ ಬುಡಕಟ್ಟುಗಳಲ್ಲಿ ರಾಜನೇ ಶಾಶ್ವತವಾದ ಸರ್ಕಾರವಾಗಿದ್ದು ಸೈನಿಕ, ತಂದೆ, ಪುರೋಹಿತ ಮತ್ತು ರಾಜ ಎಲ್ಲರೂ ಸೇರಿ ಅಧಿಕಾರ ಎಂದಾಯಿತು. ಸಮಾಜಗಳನ್ನು ಎರಡು ಶಕ್ತಿಗಳು ಆಳುತ್ತವೆ. ಅವುಗಳೆಂದರೆ ಒಂದು ಸರ್ಕಾರ, ಮತ್ತೊಂದು ಬಲಿಷ್ಠತೆ. ಶಾಂತಿಸಮಯದಲ್ಲಿ ಮಾತು, ಸಂತೋಷದ ಸಮಯದಲ್ಲಿ ಖಡ್ಗ. ಅರಸನ ಯಾವುದಾದರು ಅಭಿಪ್ರಾಯಗಳನ್ನು ಜನರು ಕೇಳದೆ ಹೋದಾಗ ಮಾತ್ರ ಸರ್ಕಾರ ಅಥವಾ ಪ್ರಭುತ್ವದಿಂದ ಬಲಪ್ರಯೋಗದ ಅನಿವಾರ್ಯತೆಯಾಗುತ್ತಿತ್ತು.

**೨.೨. ಸೇನಾಬಲ**

ಬಲವೆಂಬುದು ಪ್ರಾಚೀನ ಕಾಲದಿಂದಲೂ ರಾಜ್ಯರಕ್ಷಣೆಯ ಸಪ್ತಾಂಗಗಳಲ್ಲಿ ಒಂದಾಗಿತ್ತು. ರಾಜನಾದವನು ತನ್ನ ಸ್ವಾರ್ಥದಿಂದ ಕೂಡಿದ ಮತ್ತು ಕ್ರೂರವಾದ ಇಚ್ಛೆಯನ್ನು ಪೂರ್ಣಗೊಳಿಸುವ ನಿಟ್ಟಿನಲ್ಲಿ ಮತ್ತೊಂದು ರಾಜ್ಯದ ಮೇಲೆ ಆಕ್ರಮಣ ಮಾಡುವುದು ಸಹಜವಾದ ಅಂಶವಾಗಿದೆ. ಇಂತಹ ಆಪತ್ತಿನಿಂದ ದೂರವಿರಲು ಪ್ರತಿಯೊಂದು ರಾಜ್ಯವೂ ತನ್ನದೇ ಆದಂತಹ ಸೇನಾಬಲವನ್ನು ವ್ಯವಸ್ಥಿತವಾಗಿ ಶಕ್ತಿವಂತ ಹಾಗೂ ದಕ್ಷವಾಗಿರುವುದು ಅನಿವಾರ್ಯವಾಗಿರುತ್ತಿತ್ತು. ಅಲ್ಲದೆ ಯುದ್ಧಗಳಲ್ಲಿ ಜಯಪಡೆಯುವುದು ಕೂಡ ಅಗತ್ಯವಾಗಿತ್ತು. ರಾಜ್ಯದ ಅಸ್ತಿತ್ವದ ಮೇಲೆ ಇದರ ಪರಿಣಾಮವು ಸಾಮ, ದಾನ, ಬೇಧಗಳಿಗಿಂತ ದಂಡವೇ ಪ್ರಧಾನವಾಗಿರುತ್ತಿತ್ತು.[೩] ಪ್ರಾಚೀನ ಮಹಾಕಾವ್ಯಗಳು, ಸೈನ್ಯವನ್ನು ಎಂಟು ಭಾಗಗಳಾಗಿ ವಿಭಾಗಿಸುತ್ತವೆ. ಅದರಲ್ಲಿ ಪ್ರಮುಖವಾಗಿ ರಾಮಾಯಣವು ರಥಾರೋಹಿ, ಗಜಾರೋಹಿ, ಅಶ್ವಾರೋಹಿ, ನೌಕಾರೋಹಿ, ಪಾದಚಾರಿ, ವಿಷ್ಠಿ(ಭಾರವಾಹಕ), ಗುಪ್ತಚರ ಮತ್ತು ಉಪದೇಶಕವೆಂದು ತಿಳಿಸುತ್ತದೆ.

ಮೈಸೂರು ಒಡೆಯರ ಆರಂಭಿಕ ಕಾಲಾವಧಿಯಲ್ಲಿ ಸೈನಿಕ ಬಲದ ಮಾಹಿತಿಗಳು ಅಷ್ಟಾಗಿ ತಿಳಿದುಬರುವುದಿಲ್ಲ. ಕಾರಣವೆಂದರೆ ಹದಿನಾಡನ್ನು ಆಳುತ್ತಿದ್ದ ಚಾಮರಾಜನೆಂಬ ಸಣ್ಣ

ಪಾಳೆಯಗಾರನಿಗೆ ಸೇರಿದ ಚಿಕ್ಕಪಾಳೆಯಪಟ್ಟಾಗಿತ್ತು. ಅಲ್ಲದೆ ವಿಜಯನಗರದ ಅಧೀನದಲ್ಲೇ ಇದ್ದಂತಹ ಈ ಪಾಳೆಯಪಟ್ಟುವಿನಲ್ಲಿ ಕ್ರಿ.ಶ.೧೫೭೮ರಲ್ಲಿ ರಾಜಒಡೆಯರು ಅಧಿಕಾರಕ್ಕೆ ಬಂದ ಕಾಲದವರೆಗೆ ಮೈಸೂರು ಒಡೆಯರ ಕಾಲಕ್ಕೆ ಸಂಬಂಧಿಸಿದಂತಹ ಸೇನಾಬಲವನ್ನು ಕುರಿತು ಯಾವುದೇ ಕುರುಹುಗಳು ನಮಗೆ ಕಂಡುಬರುವುದಿಲ್ಲ. ವಿಜಯನಗರದ ಕೊನೆಯ ರಾಜಪ್ರತಿನಿಧಿಯಾಗಿದ್ದ ಶ್ರೀರಂಗರಾಯನನ್ನು ಅಧಿಕಾರದಿಂದ ಪದಚ್ಯುತಗೊಳಿಸುವ ಮುಂಚೆ ರಾಜಒಡೆಯರು ಕೇವಲ ೩೦೦ ಜನ ಸೈನಿಕರನ್ನು ಮಾತ್ರ ಹೊಂದಿದ್ದರು.[೪] ಅಲ್ಲದೆ ಶ್ರೀರಂಗರಾಯ (ತಿರುಮಲರಾಯ)ನನ್ನು ಶ್ರೀರಂಗಪಟ್ಟಣದಿಂದ ಹೊರಹಾಕಿದ ನಂತರ ತಾವೇ ನೇರ ಮತ್ತು ಸ್ವತಂತ್ರವಾಗಿ ಆಳ್ವಿಕೆಯನ್ನು ಪ್ರಾರಂಭಿಸಿ ಮೈಸೂರು ರಾಜಕೀಯ ಇತಿಹಾಸದಲ್ಲಿ ಪ್ರಥಮ ಅರಸರಾದರು.

ಕ್ರಿ.ಶ.೧೬೧೦ರಲ್ಲಿ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಲ್ಲಿ ಆಚರಿಸುತ್ತಿದ್ದ ನವರಾತ್ರಿ ಉತ್ಸವವನ್ನು ರಾಜಒಡೆಯರು ಮೈಸೂರಿನಲ್ಲಿ ಪ್ರಾರಂಭಿಸಿ ತಮ್ಮ ಸೇನಾಬಲವನ್ನು ಈ ಉತ್ಸವದಲ್ಲಿ ಪ್ರದರ್ಶಿಸಿದರು.[೫] ಅದಕ್ಕೆ ಕಾರಣವೆಂದರೆ ಅರಸನು ಪ್ರಮುಖ ಹುದ್ದೆಯನ್ನು ಹೊಂದಿದ್ದರೆ ಅನಂತರದ ಸ್ಥಾನವನ್ನು ದಳವಾಯಿಯು ಹೊಂದಿರುತ್ತಿದ್ದನು. ರಾಜ್ಯದ ವಿವಿಧ ಭಾಗಗಳಿಂದ ಬಂದಿದ್ದ ಪ್ರಜೆಗಳು ಪಾಳೆಯಗಾರರು ಮತ್ತು ಅಧಿಕಾರಿಗಳಿಗೆ ತಮ್ಮ ಸೇನಾಬಲದ ಮನವರಿಕೆ ಮಾಡಿಕೊಡುವ ಪ್ರಯತ್ನವಾಗಿತ್ತು. ಸೈನ್ಯದಲ್ಲಿದ್ದ ಅಶ್ವದಳ, ಗಜದಳ, ಒಂಟೆಗಳು, ಕಾಲಾಳು ಪಡೆಗಳು ಪ್ರದರ್ಶನದಲ್ಲಿ ಭಾಗವಹಿಸಿದ್ದವು. ಅರಸರು ತಾವು ಬಳಸುತ್ತಿದ್ದ ಎಲ್ಲಾ ಆಯುಧಗಳನ್ನು ಪೂಜಿಸಿ, ತಮ್ಮ ಸೇನಾಬಲವನ್ನು ಉತ್ಸವದಲ್ಲಿ ಪ್ರದರ್ಶಿಸಿ ಆ ಮೂಲಕ ಪ್ರಜೆಗಳಲ್ಲಿ ಭಯದ ಕಲ್ಪನೆಯನ್ನು ಉಂಟುಮಾಡುವುದೇ ಅವರ ಉದ್ದೇಶವಾಗಿತ್ತು. ಅರಸರು ತಮ್ಮ ಪ್ರಜೆಗಳ ಸಮ್ಮುಖದಲ್ಲಿಯೇ ಜಟ್ಟಿಕಾಳಗವನ್ನು ಮಾಡಿಸಿದರು. ಇದು ತಾವು ಸಂಪಾದಿಸಿರುವ ಸೇನಾಬಲ ಮತ್ತು ಆಯುಧಗಳನ್ನು ಪ್ರದರ್ಶಿಸಿ ಅವುಗಳನ್ನು ಸೈನ್ಯದಲ್ಲಿ ಬಳಸಿಕೊಳ್ಳುವ ವಿಧಾನವಾಗಿತ್ತು.

ಮೈಸೂರು ಒಡೆಯರ ಕಾಲದಲ್ಲಿ ರಚನೆಯಾದ ಹಲವಾರು ಸಾಹಿತ್ಯಕೃತಿಗಳು ಸೇನಾಬಲವನ್ನು ಮಾಹಿತಿಯನ್ನು ಒದಗಿಸುತ್ತವೆ. ಅವುಗಳಲ್ಲಿ ಪ್ರಮುಖವಾಗಿ ಗೋವಿಂದ ವೈದ್ಯನ 'ಕಂಠೀರವ ನರಸರಾಜ ವಿಜಯಂ', ನಂಜಪ್ಪ ಕವಿಯ 'ಕೃಷ್ಣರಾಜ ವಿಲಾಸ', ತಮ್ಮಯ್ಯ ಶಾಸ್ತ್ರಿ ರಚಿಸಿದ 'ರಾಜವಂಶ ರತ್ನಪ್ರಭ', ಲಿಂಗಣ್ಣಕವಿಯ 'ಕೆಳದಿ ನೃಪವಿಜಯ', ಮುಂತಾದ ಕೃತಿಗಳು ಅಂದಿನ ಸೇನಾಬಲ, ಯುದ್ಧಗಳು, ಯುದ್ಧದ ಪ್ರಕಾರಗಳು, ಸೈನಿಕರ ಹೋರಾಟ, ಸೈನಿಕರ ವೇಷಭೂಷಣ, ಆಯುಧಗಳ ಬಳಕೆ, ಆಹಾರ ಪದಾರ್ಥಗಳು ಮುಂತಾದ ವಿಚಾರಗಳನ್ನು ಕುರಿತು ಮಾಹಿತಿಯನ್ನು ಒದಗಿಸುತ್ತವೆ.

ಅರಸನು ತನ್ನ ರಾಜ್ಯಾಡಳಿತದಲ್ಲಿನ ಒತ್ತಡವನ್ನು ಕಡಿಮೆ ಮಾಡಿಕೊಳ್ಳಲು, ಯುದ್ಧ ಮತ್ತು ಶಾಂತಿಯ ಸಮಯದಲ್ಲಿ ಸೈನ್ಯದ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಒಬ್ಬ ಸೈನ್ಯಾಧಿಕಾರಿಯ ಅಗತ್ಯವನ್ನು ಮನಗಂಡು ದಂಡನಾಯಕನನ್ನು "ದಳವಾಯಿ" ಎಂಬ ಹೆಸರಿನಿಂದ ನೇಮಕ

ಮಾಡಿದರು. ಈ ಹಿಂದೆ ಅರಸನು ದಂಡಾಧಿಕಾರಿ ಮತ್ತು ಸೈನ್ಯದ ಮುಂದಾಳುವಾಗಿ ನಿರ್ವಹಿಸುತ್ತಿದ್ದ ಕಾರ್ಯವನ್ನು ಸುಲಭಗೊಳಿಸುವಂತೆ ಮಾಡಲು ದಳವಾಯಿಗೆ ಅಧಿಕಾರವನ್ನು ವಹಿಸಿಕೊಡಲಾಯಿತು. ಈ ಅಧಿಕಾರದಿಂದ ದಳವಾಯಿಯ ಸ್ಥಾನಮಾನದ ಜೊತೆಗೆ ಜವಾಬ್ದಾರಿಯನ್ನು ಹೆಚ್ಚುಮಾಡಿತು. ಯುದ್ಧ ಮತ್ತು ಶಾಂತಿ ಕಾಲದಲ್ಲಿ ಅರಸನಿಗೆ ನೆರವಾಗುವುದು ಅಗತ್ಯವಾಗಿತ್ತು. ಆದ್ದರಿಂದ ರಾಜಒಡೆಯರು ಕರಿಕಾಲ ಮಲ್ಲರಾಜಯ್ಯನನ್ನು[೬] ದಳವಾಯಿಯನ್ನಾಗಿ ನೇಮಿಸಿದರು. ಆದರೆ ಈತನ ಅನುಪಸ್ಥಿತಿಯಲ್ಲಿ ಬೆಟ್ಟದರಸಿನವರು ದಳವಾಯಿಯಾಗಿ ನೇಮಕವಾಗಿ ಅಧಿಕಾರವನ್ನು ನಿರ್ವಹಿಸಿದರು. ಆದರೆ ೪ನೆಯ ಚಾಮರಾಜ ಒಡೆಯರು ಮೊದಲನೆಯ ಬಾರಿಗೆ ದಳವಾಯಿಗಳನ್ನು ಬದಲಾಯಿಸುವ ಕಾರ್ಯಕ್ಕೆ ಕೈಹಾಕಿದರು. ಅಲ್ಲದೆ ರಾಜಒಡೆಯರು ಅರಮನೆಯ ಆಡಳಿತದಲ್ಲಿ ದಳವಾಯಿಯ ಅಧೀನವಾಗಿರುವಂತೆ ೨೩ ಊಳಿಗ ಅಥವಾ ಸೇವಾವಿಭಾಗಗಳನ್ನು ಪ್ರಾರಂಭಿಸುವ ಮುಖಾಂತರ ಸೈನ್ಯಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ದಿನನಿತ್ಯದ ಸೇವಾ ಜನರನ್ನು ನೇಮಕಮಾಡಿಕೊಂಡರು. ಈ ಸೇವಾ ವಿಭಾಗಗಳಲ್ಲಿ ಸಂಚಿಯ ಊಳಿಗ, ಚಂಬಿನ ಊಳಿಗ, ಕತ್ತಿಯ ಊಳಿಗ, ಕಾರಂಜಿಯ ಊಳಿಗ, ಪಡಿಗದ ಊಳಿಗ, ಕನ್ನಡಿಯ ಊಳಿಗ, ಕುಂಚದ ಊಳಿಗ, ಕೈಯಾಲವಟ್ಟದ ಊಳಿಗ, ಪಟ್ಟೆಪಾದುಕೆಯ ಊಳಿಗ, ಹಾಸಿಗೆಯ ಊಳಿಗ, ಹಾವುಗೆಯ ಊಳಿಗ, ಬಿಡಾರದ ಊಳಿಗ, ಉಭಯ ಚಾಮರದ ಊಳಿಗ, ಕರಗದ ಊಳಿಗ, ತೂಗುನೀರಿನ ಊಳಿಗ, ಬೀಸಣಿಗೆಯ ಊಳಿಗ, ತೆರಿಗೆಯ ಊಳಿಗ, ತೆರೆಯ ಊಳಿಗ, ನೀರಿನಮನೆ ಊಳಿಗ, ಹಿತ್ತಲು ಮನೆಯ ಊಳಿಗ, ಅವಸರದ ಊಳಿಗ, ರಜದ ಊಳಿಗ, ಕಾವಲು ಊಳಿಗಗಳು[೭] ಪ್ರಮುಖವಾಗಿದ್ದವು.

ರಾಜಒಡೆಯರ ನಂತರ ಅಧಿಕಾರಕ್ಕೆ ಬಂದ ೪ನೆಯ ಚಾಮರಾಜ ಒಡೆಯರು (ಕ್ರಿ.ಶ.೧೬೧೭–೧೬೩೭) ಶ್ರೀರಂಗಪಟ್ಟಣದ ಉತ್ಸವದಲ್ಲಿ ಇವರು ಪಡೆದ ಬಿರುದುಗಳೇ ಅವರ ಶಕ್ತಿ ಸಾಮರ್ಥ್ಯಗಳನ್ನು ಎತ್ತಿಹಿಡಿಯುತ್ತವೆ. ವೀರಶೂರ, ಮಲೆಪರಗಂಡ, ಅಭಯ ಪತ್ರಪಾದೀಶ್ವರ, ಶರಣಾಗತ ಪರಿಪಾಲಕ[೮] ಎಂಬ ಬಿರುದುಗಳಿಂದ ಅವರ ಪರಾಕ್ರಮ ತಿಳಿಯುತ್ತದೆ. ಅಲ್ಲದೆ ದಳವಾಯಿಗಳು ತಮ್ಮ ಅಧಿಕಾರವನ್ನು ದುರುಪಯೋಗ ಮಾಡಿಕೊಳ್ಳದಂತೆ ತಮ್ಮ ಆಡಳಿತದ ಕಾಲದಲ್ಲಿ ಅವರನ್ನು ಬದಲಾಯಿಸಿದರು

**೨.೩. ಸೇನಾ ವಿಭಾಗಗಳು**

ಮೈಸೂರು ಒಡೆಯರು ಪ್ರಾರಂಭದಲ್ಲಿ ಸಾಂಪ್ರದಾಯಿಕ ಸೈನ್ಯಪದ್ಧತಿಯನ್ನೇ ಹೊಂದಿದ್ದರು. ಆದರೆ ಸಾಮ್ರಾಜ್ಯದ ಗಡಿಯು ವಿಸ್ತರಿಸಿದಂತೆ ಸೇನಾಬಲದಲ್ಲಿ ವಿವಿಧ ರೀತಿಯ ಬದಲಾವಣೆಗಳನ್ನು ಮಾಡಿಕೊಳ್ಳುವ ಅವಕಾಶವು ಕೂಡ ದೊರೆಯಿತು. ಇದಕ್ಕೆ ಪ್ರಮುಖವಾದ ಕಾರಣವೇನೆಂದರೆ ಬದಲಾದ ಕಾಲಘಟ್ಟದಲ್ಲಿ ಆಧುನಿಕ ತಂತ್ರಜ್ಞಾನದ ಬಳಕೆ ಮತ್ತು ಯುದ್ಧತಂತ್ರಗಳೇ ಕಾರಣವಾಗಿದ್ದವು. ಆದರೂ ಸಹ ಮೈಸೂರಿನ ಒಡೆಯರು ತಮ್ಮ ಸೇನಾಬಲದಲ್ಲಿ ಸಾಂಪ್ರದಾಯಿಕ ಸೇನಾವಿಭಾಗಗಳನ್ನೇ ಪ್ರಾರಂಭದಲ್ಲಿ ಬಳಸಿದ್ದರು. ಮುಂದುವರೆದು ಅವುಗಳಿಗೆ ಫ್ರೆಂಚರ

ಸಹಾಯದಿಂದ ಯೂರೋಪಿನ ತಂತ್ರಜ್ಞಾನವನ್ನು ಸೇನಾವಿಭಾಗದಲ್ಲಿ ಅಳವಡಿಸಿಕೊಂಡು ತಂತ್ರಜ್ಞಾನದ ಅಡಿಯಲ್ಲಿ ಸೈನ್ಯವನ್ನು ಬದಲಾವಣೆ ಮಾಡಿಕೊಂಡರು. ಮುಂದೆ ಈ ತಂತ್ರಜ್ಞಾನವು ಹೈದರ್ ಅಲಿಯ ಕಾಲದಲ್ಲಿ ಆಧುನಿಕ ಕ್ಷಿಪಣಿಗಳ ಉದಯ ಮತ್ತು ಕ್ರಾಂತಿಗೆ ಕಾರಣವಾಯಿತು. ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ಮೈಸೂರು ಸೈನ್ಯದಲ್ಲಿದ್ದ ಕಾಲ್ದಳ, ಅಶ್ವದಳ, ಗಜದಳ, ಫಿರಂಗಿದಳ ಎಂದು ಸೇನಾವಿಭಾಗಗಳನ್ನು ವಿಂಗಡಿಸಿಕೊಂಡು ಪ್ರಮುಖವಾಗಿ ಅಧ್ಯಯನ ಮಾಡಲಾಗಿದೆ.

**೨.೩.೧. ಕಾಲ್ದಳ**

ಹೆಸರೇ ಸೂಚಿಸುವಂತೆ ಯುದ್ಧ ಭೂಮಿಯಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಚಲಿಸಲು ಯಾವುದೇ ವಾಹನ ಅಥವಾ ಪ್ರಾಣಿಗಳ ಸಹಾಯವಿಲ್ಲದೆ ಬಿಲ್ಲು-ಬಾಣ, ಖಡ್ಗ, ಗುರಾಣಿ, ಈಟಿ, ಭರ್ಜಿಗಳನ್ನು ಹಿಡಿದು ಹೋರಾಡುತ್ತಿದ್ದ ಸೈನಿಕರ ಗುಂಪಿಗೆ ಕಾಲ್ದಳ ಎಂದು ಹೆಸರು. ವಿಜಯನಗರ ಕಾಲದಲ್ಲಿ ಕಾಲ್ದಳದ ಬಗ್ಗೆ ವಿದೇಶಿ ಪ್ರವಾಸಿಗನಾದ ಡೊಮಿಂಗೋ ಪೆಯಾಸನು, 'ಕಾಲ್ದಳದ ಬಗ್ಗೆ ಹೇಳಬೇಕೆಂದರೆ ವಿಜಯನಗರದಲ್ಲಿ ಅದು ಎಲ್ಲಾ ಗುಡ್ಡಗಳಲ್ಲಿ ಕಣಿವೆಗಳಲ್ಲಿ ಕಿಕ್ಕಿರಿದು ನೆರೆದ ರೀತಿಗೆ ಆ ನೋಟಕ್ಕೆ ಪ್ರಪಂಚದಲ್ಲೇ ಎಣೆಯಿರಲಿಲ್ಲ. ಅವರು ಹಿಡಿದಿದ್ದ ಕತ್ತಿ, ಗುರಾಣಿಗಳ ಅಲಂಕಾರ ಅದ್ಭುತವಾಗಿತ್ತು' ಎಂದಿದ್ದಾನೆ. ವಿಜಯನಗರ ಸಾಮ್ರಾಜ್ಯದಲ್ಲಿ ಬೃಹತ್ ಪ್ರಮಾಣದ ಕಾಲ್ದಳವಿದ್ದಿತು. ಪ್ರಾರಂಭದಿಂದ ರಾಮರಾಯನ ಕಾಲದವರೆಗೂ ಆಗಾಧ ಪ್ರಮಾಣದಲ್ಲಿದ್ದಿತು. ಇದನ್ನು ಕಣ್ಣಾರೆ ಕಂಡು ಹೊಗಳಿದ ಹಲವಾರು ಜನ ವಿದೇಶಿ ಪ್ರವಾಸಿಗರೂ ಇದ್ದಾರೆ. ಆದರೆ ಮೈಸೂರು ಒಡೆಯರಿಗೆ ಸಂಬಂಧಿಸಿದಂತೆ ಈ ರೀತಿಯಾದ ಯಾವುದೇ ದೇಶೀಯ ಅಥವಾ ದೇಶೀಯ ಬರವಣಿಗೆಗಳು ಕಂಠೀರವ ನರಸರಾಜ ಒಡೆಯರ ಕಾಲದವರೆಗೆ ಸ್ಪಷ್ಟಪಡುವುದಿಲ್ಲ. ಆದರೆ ವಿಜಯನಗರ ಕಾಲದಲ್ಲಿ ಪೆರಿಷ್ತಾ ಹೇಳುವಂತೆ ಒಂದು ಲಕ್ಷ ಕಾಲ್ದಳವಿದ್ದಿತು. ನಿಕೋಲೊ ಕೊಂಟಿಯ ಪ್ರಕಾರ ೯೦ ಸಾವಿರ ಅಬ್ದುಲ್ ರಜಾಕ್‌ನು ಹನ್ನೊಂದು ಸಾವಿರ ಎಂದು ಸ್ಪಷ್ಟಪಡಿಸುತ್ತಾನೆ. ರಾಮರಾಜನ ಕಾಲದಲ್ಲಿ ಕಾಲ್ದಳವಂತೂ ಅಪರಿಮಿತವಾಗಿತ್ತು. ಪರಿಷ್ತಾನು ಕಾಲ್ದಳವನ್ನು ಉಲ್ಲೇಖಿಸುತ್ತಾ ವಿಜಯನಗರ ಕಾಲದಲ್ಲಿ ೬೨,೦೦೦ ಬಿಲ್ಗಾರರಿದ್ದು ೨,೦೦೦ ಮುಸ್ಲಿಂರಿದ್ದರೆಂದು ಒಟ್ಟು ಕಾಲ್ದಳ ಎರಡು ಲಕ್ಷ[೧೧] ಎಂದು ಹೇಳಿದ್ದಾನೆ. ಆದರೆ ಮೈಸೂರು ಒಡೆಯರು ಮಾತ್ರ ಕೇವಲ ಬೆರಳೆಣಿಕೆಯಷ್ಟು ಜನ ಕಾಲ್ದಳವನ್ನು ಪ್ರಾರಂಭದಲ್ಲಿ ಹೊಂದಿದ್ದಿತು. ಗೋವಿಂದ ವೈದ್ಯನು ಕಂಠೀರವ ನರಸರಾಜ ವಿಜಯಂ ಎಂಬ ಕೃತಿಯಲ್ಲಿ ಕೋಟೆ ಕಾಳಗಗಳಲ್ಲಿ ಈ ಕಾಲ್ದಳದ ಬಗ್ಗೆ ಸ್ಪಷ್ಟಪಡಿಸಿದ್ದಾನೆ.

ಮದ್ರಾಸಿನ ಪತ್ರಗಾರದಲ್ಲಿರುವ ಕಾಗದ ಪತ್ರಗಳಲ್ಲಿ ಹೆಚ್ಚಾಗಿ ನಮಗೆ ಚಿತ್ರದುರ್ಗದ ಪಾಳೆಯಗಾರರ ಸೈನ್ಯಕ್ಕೆ ಸಂಬಂಧಿಸಿದವೇ ಆಗಿವೆ. ಆದರೆ ಮೈಸೂರಿನ ಸೈನ್ಯಕ್ಕೆ ಸಂಬಂಧಿಸಿದಂತೆ ಬೆಂಗಳೂರಿನ ವಿಧಾನಸೌಧ ಮತ್ತು ಮೈಸೂರಿನ ವಿಭಾಗೀಯ ಪತ್ರಗಾರ ಇಲಾಖೆಗಳಲ್ಲೇ ಹೆಚ್ಚಿನ ಮಾಹಿತಿಯು ದೊರಕುತ್ತದೆ. ಈ ಮಾಹಿತಿಗಳ ಪ್ರಕಾರವಾಗಿ ಮೈಸೂರಿನ ಕಾಲ್ದಳದಲ್ಲಿ ಸೈನಿಕರು

ಖಡ್ಗ, ಗುರಾಣಿ, ಭಲ್ಲೆ, ಬಿಲ್ಲು, ಬಾಣ, ಬಂದೂಕು ಮೊದಲಾದ ಆಯುಧಗಳನ್ನು ಹೊಂದಿದ್ದರು ಎಂದು ತಿಳಿದುಬರುತ್ತದೆ. ಕಂಠೀರವ ನರಸರಾಜ ಒಡೆಯರು ಇವರನ್ನು ಸದಾ ಸಿದ್ಧವಾಗಿರುವಂತೆ ನಿಯಮಗಳನ್ನು ರೂಪಿಸಿದರು. ಸೈನ್ಯದ ದಂಡನಾಯಕನಾದ ದಳವಾಯಿಯು ಮುಖ್ಯಸ್ಥನಾಗಿ ಕಾರ್ಯನಿರ್ವಹಿಸುತ್ತಿದ್ದನು.[೧೧] ದಳವಾಯಿಯು ಕಾಲ್ದಳದಲ್ಲಿ ಸುಬೇದಾರರು, ಜಮಾದಾರರು ಗುರಿಕಾರರು, ಓಲೆಕಾರರು, ಕೊಂಬಿನವರು, ಕಹಳೆಯವರು, ಗೂಢಾಚಾರರು ಮೊದಲಾದ ಶ್ರೇಣೀಕೃತವಾದ ಅಧಿಕಾರಿಗಳನ್ನು ನೇಮಿಸಿಕೊಂಡು ತಮ್ಮ ಕಾರ್ಯಕ್ಷೇತ್ರದ ಮಿತಿಯೊಳಗೆ ಮಾತ್ರ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಆದರೆ ಮೈಸೂರು ಒಡೆಯರ ಕೆಲವು ಸಮಕಾಲೀನವಾಗಿದ್ದ ಪಾಳೆಯಗಾರರಲ್ಲಿ ಈ ಕಾಲ್ದಳದಲ್ಲಿ ಬೇಡಪಡೆಗಳೇ ಅಧಿಕವಾಗಿದ್ದವು. ಚಿತ್ರದುರ್ಗ, ಬಿಜಾಪುರದ ರಣದುಲ್ಲಾಖಾನನು ಶ್ರೀರಂಗಪಟ್ಟಣದ ಮೇಲೆ ಆಕ್ರಮಣ ಮಾಡಿದಾಗ ೯೦ಸಾವಿರ ಅಶ್ವದಳಕ್ಕೆ ತಕ್ಕಂತೆ ಕಾಲ್ದಳವನ್ನು[೧೨] ಹೊಂದಿದ್ದನು. ಈ ಕಾಲ್ಬಲವು ಶ್ರೀರಂಗಪಟ್ಟಣದ ಕೋಟೆಕಾಳಗದಲ್ಲಿ ಮದ್ದುಗುಂಡುಗಳನ್ನು ತುಂಬಿ ಫಿರಂಗಿಗಳನ್ನು ಹಾರಿಸಿತು. ಅಲ್ಲದೆ ಕೋಟೆಕಾಳಗದಲ್ಲಿ ಕೋಟೆಯ ಲಗ್ಗೆಯೇರಲು ಪ್ರಯತ್ನಿಸಿದಾಗ ಕೋಟೆಗೋಡೆಯ ಮೇಲಿನಿಂದ ಶತ್ರುಗಳ ಮೇಲೆ ಕಲ್ಲುಗುಂಡುಗಳು, ಕಾದಎಣ್ಣೆ, ಬಿಸಿಯಾದ ಮರಳು, ಅಂಬಲಿ ಮತ್ತು ಹೊಲಸನ್ನು ಬೀಳಿಸುವ ಮುಖಾಂತರ ಅವರನ್ನು ಹಿಮ್ಮೆಟ್ಟಿಸುವ ಕೆಲಸವನ್ನು ಮಾಡುತ್ತಿತ್ತು. ಇದರಿಂದ ಶತ್ರುಸೈನಿಕರು ಯಾವುದೇ ರೀತಿ ಪ್ರಯತ್ನಿಸಿದರೂ ಲಗ್ಗೆಯೇರಲು ಅವಕಾಶವಾಗಲಿಲ್ಲ. ಆದ್ದರಿಂದ ಸೈನ್ಯದ ಅವಶ್ಯಕತೆಯನ್ನು ಅರಿತು ಚಿಕ್ಕದೇವರಾಜ ಒಡೆಯರು ತಮ್ಮ ಕಾಲದಲ್ಲಿ ಕಾಲ್ದಳವನ್ನು ಒಂದು ಲಕ್ಷಕ್ಕೆ ಏರಿಸಿದರು.[೧೩] ಏಕೆಂದರೆ ಆ ವೇಳೆಯಲ್ಲಿ ಸುತ್ತಮುತ್ತಲಿನ ಪಾಳೆಯಗಾರರು ಸ್ವತಂತ್ರರಾಗಲು ಹವಣಿಸುತ್ತಿದ್ದರು. ಅಲ್ಲದೆ ಈ ಕಾಲದಲ್ಲಿ ಮರಾಠರ ಆಕ್ರಮಣವೂ ಕೂಡ ಹೆಚ್ಚಾಯಿತು. ಇದರಿಂದ ಸಹಜವಾಗಿಯೇ ಕಾಲ್ದಳದ ಏರಿಕೆಯು ಅಗತ್ಯವಾಗಿತ್ತು.

ಶ್ರೀರಂಗಪಟ್ಟಣದ ಮೇಲೆ ಮರಾಠರ ಜಯಾಜಿ ಘಾಟ್ ಮತ್ತು ನಿಂಬಾಜಿ ಘಾಟ್ ಎಂಬ ಸಾಹುವಿನ ಮುಖ್ಯ ಸೇನಾನಾಯಕರು ೬೦ ಸಾವಿರ ಅಶ್ವದಳ ಮತ್ತು ಅದಕ್ಕೆ ತಕ್ಕ ಕಾಲ್ದಳದೊಂದಿಗೆ ದಾಳಿಮಾಡಿದರು. ಆದರೆ ಮೈಸೂರಿನವರು ಅತಿ ಕಡಿಮೆ ಸೈನ್ಯವನ್ನು ಹೊಂದಿದ್ದು ಮರಾಠರನ್ನು ಹಿಮ್ಮೆಟ್ಟಿಸಿದರು. ಇದರಿಂದ ಮೈಸೂರಿನ ಸೈನಿಕರು ಯುದ್ಧಗಳಲ್ಲಿ ಹೋರಾಟಗಳಲ್ಲಿ ಪಾಲ್ಗೊಳ್ಳುತ್ತಿದ್ದ ಮಾಹಿತಿಯು ನಮಗೆ ತಿಳಿದುಬರುತ್ತದೆ. ಮೈಸೂರಿನ ಇತಿಹಾಸದಲ್ಲಿ ಒಬ್ಬ ಸಾಮಾನ್ಯ ಸೇವಕನಾಗಿದ್ದ ಹೈದರ್‌ಅಲಿಯು ಸೈನ್ಯಕ್ಕೆ ಸೇರಿಕೊಂಡು ಪರಿಶ್ರಮದ ಮೂಲಕ ಮೈಸೂರಿನ ಆಡಳಿತದ ಚುಕ್ಕಾಣಿಯನ್ನು ಹಿಡಿಯುವ ಮೂಲಕ ಪ್ರಮುಖ ಸ್ಥಾನವನ್ನು ಪಡೆದಿದ್ದಾನೆ. ಹೈದರಾಲಿಯು ಮೊದಲಿಗೆ ಕಾಲಾಳು ಪಡೆಯಲ್ಲಿ ಸೇವೆಸಲ್ಲಿಸುತ್ತಿದ್ದನು. ೫೦ ಜನ ಭಲ್ಲೆಧಾರಿಗಳಲ್ಲಿ ಈತನೂ ಕೂಡ ಒಬ್ಬನಾಗಿದ್ದನೆಂದು ದಾಖಲೆಗಳಿಂದ ತಿಳಿದುಬರುತ್ತದೆ. ಅಲ್ಲದೆ ಹೈದರ್ ಅಲಿಯು ಪ್ರವರ್ಧಮಾನಕ್ಕೆ ಬಂದ ಸಂದರ್ಭದಲ್ಲಿ ಮೈಸೂರಿನ ಕಾಲಾಳು ಪಡೆಯ ಸೈನಿಕರು ಗೆರಿಲ್ಲಾ ಯುದ್ಧತಂತ್ರದಲ್ಲಿ ಪಳಗಿದರು. ಆದರೂ ಈ ಗೆರಿಲ್ಲಾ ಯುದ್ಧತಂತ್ರವು ಮೈಸೂರಿನ ಸೈನಿಕರಿಗೆ

ಇದೇನೂ ಮೊದಲಲ್ಲ. ಏಕೆಂದರೆ ಅದು ಕಂಠೀರವ ನರಸರಾಜ ಒಡೆಯರ ಕಾಲದಲ್ಲೇ ಸೈನಿಕರಿಗೆ ಕರಗತವಾಗಿತ್ತು. ಹೈದರ್ ಅಲಿಯ ಕಾಲದಲ್ಲಿ ಕಾಲಾಳು ಪಡೆಯ ಇಲಾಖೆಯನ್ನು ಬಾರ್‌ಇಲಾಖೆ ಎಂದುಕರೆಯುತ್ತಿದ್ದರು. ಈ ಪದ್ಧತಿಯು ದಳವಾಯಿ ನಂಜರಾಜಯ್ಯನವರ ಆಡಳಿತದ ಅವಧಿಯಲ್ಲೇ ಅಸ್ತಿತ್ವದಲ್ಲಿತ್ತು. ಪ್ರಾರಂಭದ ಅವಧಿಯಲ್ಲಿ ಈ ಇಲಾಖೆಯಲ್ಲಿ ಕೇವಲ ಒಂದುಸಾವಿರ ಖಾಯಂ ಸೇವಕರಿದ್ದರು. ಹೈದರನ ಕಾಲಾವಧಿಯಲ್ಲಿ ಈ ಸಂಖ್ಯೆಯು ೭೬,೦೦೦ಕ್ಕೆ ಏರಿಸಲ್ಪಟ್ಟಿತು. ಇದರಲ್ಲಿ ೨೨,೦೦೦ ಮಂದಿಯನ್ನು ಆಯಾಯ ಕಿಲ್ಲೆಗಳಿಗೆ ನೇಮಿಸಲಾಗುತ್ತಿದ್ದರೆ. ಉಳಿದ ೫೪,೦೦೦ ಮಂದಿಯು ಯಾವಾಗಲೂ ಯುದ್ಧ ಸನ್ನದ್ಧವಾಗಿರುತ್ತಿದ್ದರು. ಈ ಕಾಲಾಳು ಪಡೆಯಲ್ಲಿ ಫಿರಂಗಿದಳದ ಎತ್ತುಗಳೂ, ೯೬ ಫಿರಂಗಿಗಳೂ ಇದ್ದವು. ಹೈದರ್ ಅಲಿಯು ತಿರುಚನಾಪಳ್ಳಿಯ ಯುದ್ಧಕ್ಕೆ ಹೊರಟಾಗ ಸೈನ್ಯದಲ್ಲಿ ೬೪,೦೦೦ ಕಾಲಾಳು ಅಥವಾ ಬಾರಿನವರು ಅದರಲ್ಲಿ ೬೦,೦೦೦ ಬಾರ್‌ಕಛೇರಿಯಲ್ಲಿನ ಸೈನಿಕರು ಮತ್ತು ೪,೦೦೦ ಕಡಪಾದ ಮೀರಲಿ ರಜಾಖಾನನ ಕಡೆಯ ಸೈನಿಕರಿದ್ದರು.

ಹೈದರನು ಅಧಿಕಾರವನ್ನು ಪಡೆಯುವ ಮುಂಚೆ ೧,೦೦೦ ಬಾರ್‌ಇಲಾಖೆಯ ಖಾಯಂ ಸೇವಕನಾಗಿದ್ದನು. ಹೈದರ್ ಅಲಿಯು ಪ್ರವರ್ಧಮಾನಕ್ಕೆ ಬಂದ ನಂತರ ಬಾರ್ ಇಲಾಖೆಯ ಸೈನಿಕರನ್ನು ೭೬,೦೦೦ಕ್ಕೆ ಏರಿಸಿದನು. ೨೨,೦೦೦ ಮಂದಿಯನ್ನು ಆಯಾಯ ಕಿಲ್ಲೆಗಳು ಮತ್ತು ಇತರ ಸ್ಥಳಗಳಿಗೂ ನೇಮಿಸಲಾಗಿತ್ತು. ಇವರಲ್ಲಿ ಯಾವಾಗಲೂ ೫೪,೦೦೦ ಮಂದಿ ಯುದ್ಧ ಸನ್ನದ್ದವಾಗಿರುತ್ತಿದ್ದರು. ಹೈದರ್ ಅಲಿಯು ಎರಡನೆಯ ಆಂಗ್ಲೋ–ಮೈಸೂರು ಯುದ್ಧದಲ್ಲಿ ಮರಣ ಹೊಂದಿದಾಗ ಆತನ ಕಳೇಬರವಿದ್ದ ಶವಪೆಟ್ಟಿಗೆಯನ್ನು ಪೂರ್ಣಯ್ಯನವರು ಒಂದುಸಾವಿರ ಬಾರ್ ಇಲಾಖೆಯ ಸೇವಕರು ಮತ್ತು ೫೦೦ ಅಶ್ವದಳದ ಸವಾರರ ಬಂದೋಬಸ್ತಿನಲ್ಲಿಟ್ಟು ಶ್ರೀರಂಗಪಟ್ಟಣಕ್ಕೆ ಕಳುಹಿಸಿದರು. ಟಿಪ್ಪು ಸುಲ್ತಾನನು ಕ್ರಿ.ಶ.೧೭೮೨ರಲ್ಲಿ ಕೇವಲ ೪,೦೦೦ ಮಂದಿಯನ್ನು ಮಾತ್ರ ಉಳಿಸಿಕೊಂಡು ಕ್ರಿ.ಶ. ೧೭೯೯ರ ವೇಳೆಗೆ ಈ ಸಂಖ್ಯೆಯನ್ನು ೬೯,೦೦೦ಕ್ಕೆ ಏರಿಸಿದನು. ಟಿಪ್ಪುವಿನ ಮರಣಾನಂತರ ಈ ಸಂಖ್ಯೆಯನ್ನು ಬ್ರಿಟಿಷರು ಕೇವಲ ೨,೨೭೦ಕ್ಕೆ ಇಳಿಸಿದರು. ಕ್ರಿ.ಶ ೧೮೦೨ರಲ್ಲಿ ಈ ಸಂಖ್ಯೆಯನ್ನು ಪುನಃ ೩,೦೦೦ಕ್ಕೆ ಏರಿಸಲಾಯಿತು.[೧೪]

**೨.೩.೨. ಅಶ್ವದಳ**

ಸೈನ್ಯದಲ್ಲಿ ಕುದುರೆಗಳು ಸಹ ಒಂದು ಭಾಗವಾಗಿದ್ದು ಇವುಗಳ ಪ್ರತ್ಯೇಕವಾದ ಒಂದು ಪಡೆಯಿತ್ತು. ಇದು ಪ್ರಾಚೀನ ಭಾರತದ ರಾಜಮನೆತನವಾದ್ದ ಮೌರ್ಯರಿಂದಲೂ ಪ್ರಚಲಿತವಿದ್ದಂತಹ ಒಂದು ಸೈನ್ಯಪಡೆ ಭಾರತದ ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳಲ್ಲೂ ಸಹ ಅಶ್ವದಳದ ಉಲ್ಲೇಖಗಳಿವೆ. ಇದು ಮುಂದುವರೆದು ಕರ್ನಾಟಕದಲ್ಲಿ ಕ್ರಿ.ಶ.೭ನೆಯ ಶತಮಾನದಲ್ಲಿಯೇ ಅಶ್ವಸೇನೆಯು ಅಸ್ತಿತ್ವದಲ್ಲಿತ್ತು. ವಿಜಯನಗರ ಕಾಲದಲ್ಲಿ ಅಶ್ವದಳಕ್ಕೆ ಹಿಂದೆಂದಿಗಿಂತಲೂ ಹೆಚ್ಚಿನಸ್ಥಾನ ಮತ್ತು ಪ್ರಾಶಸ್ತ್ಯವನ್ನು ನೀಡಲಾಗಿತ್ತು.

ಸೈನ್ಯದಲ್ಲಿ ಅಶ್ವದಳದ ಪಾತ್ರವು ಮಹತ್ವವಾಗಿದ್ದು ಚಟುವಟಿಕೆಯುಳ್ಳದ್ದಾಗಿತ್ತು. ಈ ಪಡೆಯ ಕರ್ತವ್ಯಗಳನ್ನು ಕೌಟಲ್ಯನು ಸುದೀರ್ಘವಾಗಿ ವಿವರಿಸಿದ್ದಾನೆ. ಕುದುರೆಯ ಸೈನ್ಯವು ಶಿಬಿರವನ್ನು ಏರ್ಪಡಿಸುವ ಭೂಮಿಯಲ್ಲಿ ಶತ್ರುಸೈನ್ಯವನ್ನು ಓಡಿಸುವ, ಸೈನ್ಯವು ಬೀಡುಬಿಟ್ಟಲ್ಲಿ ಉಪದ್ರವ ಇಲ್ಲದಂತೆ ಮಾಡುವ, ದಾರಿಯಲ್ಲಿ ಸಿಕ್ಕುವ ಕಳ್ಳರನ್ನು ಓಡಿಸುವ ಕಾರ್ಯಗಳನ್ನು ಮಾಡಬೇಕು. ಶಿಬಿರಕ್ಕೆ ಯೋಗ್ಯವಾದ ಪ್ರದೇಶವನ್ನು ಮೊದಲು ಆಯ್ಕೆಮಾಡಿಕೊಳ್ಳಬೇಕು ಜಲಾಶಯಗಳನ್ನು ತಮಗೆ ಅನುಕೂಲವಾದ ಗಾಳಿಯುಳ್ಳ ಮತ್ತು ಎದುರಿಗೆ ಸೂರ್ಯರಶ್ಮಿ ಬೀಳದ ಪ್ರದೇಶವನ್ನು ಆಕ್ರಮಿಸುವುದು. ತಮ್ಮ ಶಿಬಿರಗಳಿಗೆ ಶತ್ರುಸೈನಿಕರು ಪ್ರವೇಶಿಸದಂತೆ ನೋಡಿಕೊಳ್ಳುವುದು. ಶತ್ರುಸೈನ್ಯದೊಳಗೆ ಹೊಕ್ಕಿ ಅವರಲ್ಲಿ ಭಯವನ್ನು ಉಂಟುಮಾಡುವುದು. ಆಯಾಸದಿಂದ ಬಳಲಿದ ತನ್ನ ಸೈನ್ಯಕ್ಕೆ ಸಹಾಯ ಮಾಡುವುದು. ಶತ್ರು ಸೈನಿಕರನ್ನು ಹಿಂಬಾಲಿಸಿ ಬಂಧಿಸುವುದು. ಬಂಧಿಸಲ್ಪಟ್ಟ ತನ್ನವರನ್ನು ಬಿಡಿಸುವುದು. ಹಿಂದೆ, ಮುಂದೆ ಮತ್ತು ಪಾರ್ಶ್ವಗಳಿಂದ ಶತ್ರುಸೈನ್ಯಕ್ಕೆ ಹೊಡೆತವನ್ನು ನೀಡುವುದು ಸೋತ ಶತ್ರುಸೈನ್ಯವನ್ನು ಬೆನ್ನಟ್ಟುವುದು ಚದುರಿರುವ ತನ್ನ ಸೈನ್ಯವನ್ನು ಒಂದುಗೂಡಿಸುವುದು. ಇವುಗಳೆಲ್ಲಾ ಅಶ್ವದಳವು ನಿರ್ವಹಿಸುತ್ತಿದ್ದ ಕಾರ್ಯಗಳಾಗಿವೆ. ಕೌಟಲ್ಯನು ಹೇಳಿರುವ ಎಲ್ಲಾ ಕರ್ತವ್ಯಗಳು ಮೈಸೂರು ಒಡೆಯರ ಕಾಲಕ್ಕೂ ಪ್ರಸ್ತುತವಾಗಿದ್ದವು.[೧೫]

ಮೈಸೂರಿನ ಚರಿತ್ರೆಯ ಪುಟಗಳಲ್ಲಿ ರಾಜಒಡೆಯರು ಅಧಿಕಾರಕ್ಕೆ ಬರುವ ಮುಂಚೆ ಅಶ್ವದಳದ ಉಲ್ಲೇಖವೇ ನಮಗೆ ಸಿಗುವುದಿಲ್ಲ. ಕ್ರಿ.ಶ.೧೫೮೪ರಲ್ಲಿ ರಾಜ್ಯದ ಗಡಿಯನ್ನು ವಿಸ್ತರಿಸುವ ಕಾರ್ಯಕ್ಕೆ ಕೈಹಾಕಿದ ಮೇಲೆ; ಅಕ್ಕಿ ಹೆಬ್ಬಾಳು, ರಂಗಸಮುದ್ರ, ನರನಳ್ಳಿ, ಅರಕೆರೆ, ಸೋಸಲೆ, ಬನ್ನೂರು,[೧೬] ಕನ್ನಂಬಾಡಿ, ಯಳಂದೂರು ಸತ್ಯಗಾಲ, ಬೇಲೂರು, ಗ್ರಾಮ, ಮಾವತ್ತೂರು, ಸರಗೂರು, ಉಮ್ಮತ್ತೂರು, ಹರದನಹಳ್ಳಿ,[೧೭] ತಲಕಾಡು, ಕಳಲೆ, ಮಳಲವಾಡಿ, ಬಿಳಿಕೆರೆ, ಮೂಗೂರು, ಕಿಕ್ಕೇರಿ, ಹೊಸಹೊಳಲು, ಶ್ರೀರಂಗಪಟ್ಟಣ, ಕಾರಗಳ್ಳಿಗಳನ್ನು ಕ್ರಮವಾಗಿ ಜಯಿಸಿ ಅವರಲ್ಲಿ ಅಳಿದುಳಿದ ಕುದುರೆಗಳನ್ನು ತಮ್ಮ ವಶಮಾಡಿಕೊಂಡು ಸೈನ್ಯಕ್ಕೆ ಸೇರಿಸಿಕೊಂಡರು. ರಾಜಒಡೆಯರ ನಂತರ ಅಧಿಕಾರಕ್ಕೆ ಬಂದ ನಾಲ್ಕನೆಯ ಚಾಮರಾಜ ಒಡೆಯರು (ಕ್ರಿ.ಶ.೧೬೦೬–೧೬೧೭) ನಾಗಮಂಗಲದ ಅಲ್ಲಿನ ಪಾಳೆಯಗಾರನ ಮೇಲೆ ದಾಳಿಮಾಡಿ ಅವನಿಂದ ಕುದುರೆಗಳನ್ನು ಕಿತ್ತುಕೊಂಡು ತಮ್ಮ ಅಶ್ವದಳಕ್ಕೆ ಸೇರಿಸಿಕೊಂಡರು. ರಣಧೀರ ಕಂಠೀರವ ಎಂದೇ ಬಿರುದನ್ನು ಪಡೆದಿದ್ದ ಕಂಠೀರವ ನರಸರಾಜ ಒಡೆಯರು ಕ್ರಿ.ಶ.೧೬೪೧ರಿಂದ ೧೬೪೮ರವರೆಗೆ ವಿವಿಧ ಪಾಳೆಯಗಾರರ ಮೇಲೆ ಅವರಿಂದ ದಾಳಿಗಳನ್ನು ಮಾಡಿ ಸೀಮೆಗಳನ್ನು ತಮ್ಮ ಕುದುರೆಗಳನ್ನು ಕಿತ್ತುಕೊಂಡು ತಮ್ಮ ಸೈನ್ಯಕ್ಕೆ ಸೇರಿಸಿಕೊಂಡರು. ಬಿಜಾಪುರದ ರಣದುಲ್ಲಾಖಾನನು ಶ್ರೀರಂಗಪಟ್ಟಣದ ಮೇಲೆ ದಾಳಿಮಾಡಿದಾಗ ಅವರಲ್ಲಿ ೪೦,೦೦೦ ಕುದುರೆಗಳನ್ನು ಹೊಂದಿದ್ದ ಬೃಹತ್ ಅಶ್ವದಳವಿದ್ದಿತು.[೧೮] ಇಷ್ಟು ಬೃಹತ್ ಮೊತ್ತದ ಸೈನ್ಯವು ಖಡ್ಗ ಮತ್ತು ಭಲ್ಲೆಗಳನ್ನು ಹೊಂದಿದ ಪರಿಣಿತರಿಂದ ಕೂಡಿದ್ದು ಪರಾಕ್ರಮದಿಂದ ಯುದ್ಧಮಾಡಿತು. ಯುದ್ಧದಲ್ಲಿ ಸೋತು ಓಡಿಹೋಗುತ್ತಿದ್ದ ಬಿಜಾಪುರ ಸೈನ್ಯವನ್ನು ಹಿಂಬಾಲಿಸಿ ದಾಳಿಮಾಡಿ ಮತ್ತೆ ಸೋಲಿಸಿದರು. ಯುದ್ಧದಲ್ಲಿ ಬಳಕೆಯಾಗುವ ಕುದುರೆಗಳಿಗೆ

ಅಷ್ಟೇ ಅಲ್ಲದೆ ಆನೆ, ಒಂಟೆ, ಎತ್ತು, ಕತ್ತೆಗಳಿಗೆ ಹುಲ್ಲುಮೆದೆಗಳನ್ನು ಹಾಕಿಸಿದರು. ಇದು ಪ್ರಾಣಿಗಳಿಗೆ ಆಹಾರದ ಕೊರತೆ ಬಾರದಂತೆ ಮಾಡಿತು. ದೊಡ್ಡದೇವರಾಜ ಒಡೆಯರು (ಕ್ರಿ.ಶ.೧೬೫೯–೧೬೭೩) ಘಟ್ಟದ ಮೊದಲಿಯಾರನಿಂದ ವಾಮಲೂರು ಮೊದಲಾದ ಪ್ರದೇಶಗಳನ್ನು ಅಲ್ಲದೆ ಸಖರಾಯಪಟ್ಟಣ, ವಸ್ತಾರೆ, ಮಧುರೆ, ತಿರುಚನಾಪಳ್ಳಿ ಮೊದಲಾದ ದೂರದ ಪ್ರದೇಶಗಳನ್ನು ಗೆಲ್ಲಲು ಅಶ್ವದಳವು ಕಾರಣವಾಯಿತು. ನರಸೀಪುರದ ಲಕ್ಷಣಪ್ಪನಾಯಕನನ್ನು ಸೋಲಿಸಿ ಅವನಿಂದಲೂ ಕುದುರೆಗಳನ್ನು ವಶಪಡಿಸಿಕೊಂಡು ಪೊಗಧಿಯನ್ನು ನಿಗದಿಗೊಳಿಸಿದರು.

ಚಿಕ್ಕದೇವರಾಜ ಒಡೆಯರ ಕಾಲದಲ್ಲಿ (ಕ್ರಿ.ಶ.೧೬೭೩–೧೭೦೪) ಬೆಂಗಳೂರಿನ ಮೇಲೆ ಮೊಘಲರು ದಾಳಿಮಾಡಿದರು. ಆದ್ದರಿಂದ ರಾಜ್ಯರಕ್ಷಣೆಯಲ್ಲಿ ಹೆಚ್ಚುವರಿ ಸೈನ್ಯದ ಅಗತ್ಯವನ್ನು ಮನಗಂಡ ಚಿಕ್ಕದೇವರಾಜ ಒಡೆಯರು ಹೊಸದಾಗಿ ೧೨,೦೦೦ ಅಶ್ವದಳವನ್ನು ನೇಮಿಸಿಕೊಂಡರು. ಮರಾಠರು ಶ್ರೀರಂಗಪಟ್ಟಣದ ಮೇಲೆ ಆಕ್ರಮಣ ಮಾಡಿದಾಗ ರಾತ್ರಿವೇಳೆ ತಮ್ಮ ಸೈನ್ಯದಲ್ಲಿದ ಆವಿನದನಗಳ ಕೊಂಬಿಗೆ ಪಂಜುಗಳನ್ನು ಕಟ್ಟಿಸಿ ಅವುಗಳಿಂದ ಮರಾಠರ ಮೇಲೆ ದಾಳಿಮಾಡಿಸಿದರು. ಮರಾಠರು ಈ ಅನಿರೀಕ್ಷಿತ ದಾಳಿಯಿಂದ ಕಂಗಾಲಾಗಿ ಯುದ್ಧ ಮಾಡಲಾರದೆ ಸೋತುಹೋದರು. ಈ ಅನಿರೀಕ್ಷಿತ ಯುದ್ಧದಲ್ಲಿ ಸೋತ ಮರಾಠರಿಂದ ಅಪಾರವಾದ ಅಶ್ವಗಳನ್ನು ಕಿತ್ತುಕೊಂಡು ಅವುಗಳನ್ನು ತಮ್ಮ ಸೈನ್ಯದಲ್ಲಿ ಸೇರಿಸಿಕೊಂಡರು. ಹೈದರನ ಚಿಕ್ಕಪ್ಪನಾದ ಗುಲಾಂಹೈದರಲಿ ಸಾಹೇಬನು ಶ್ರೀರಂಗಪಟ್ಟಣಕ್ಕೆ ಸೇರಿದ್ದ ಮಧುಗಿರಿಯಲ್ಲಿ ಮತ್ತು ೫೦ ಕುದುರೆಗಳಿಗೆ ಗೊತ್ತುದಾರನಾಗಿದ್ದನು.[೧೯] ದೇವನಹಳ್ಳಿ ಪಾಳೆಯಗಾರ ಮತ್ತು ಮೈಸೂರಿನ ನಡುವೆ ನಡೆದ ದೇವನಹಳ್ಳಿ ಯುದ್ಧದಲ್ಲಿ ಹೈದರನ ಶೌರ್ಯ ಸಾಹಸಗಳಿಂದ ಹೋರಾಡಿ ಮೈಸೂರು ಸೈನ್ಯ ಜಯಶಾಲಿಯಾಗಲು ಕಾರಣನಾದನು. ಈ ವಿಜಯದಲ್ಲಿ ಪ್ರಮುಖಪಾತ್ರ ವಹಿಸಿದ ಹೈದರನು ಮೈಸೂರಿನ ರಾಜಪ್ರತಿನಿಧಿಯಾದ ಕತ್ತಿಗೋಪಾಲರಾಜೆ ಅರಸರ ಕೃಪೆಗೆ ಪಾತ್ರನಾಗಿ ೫೦೦ ಕಾಲಾಳುಗಳು ಮತ್ತು ೨೦೦ ಕುದುರೆಗಳ ಮುಖಂಡನಾಗಿ ಕಾಲಕ್ರಮೇಣ ತನ್ನ ಶಕ್ತಿ ಸಾಮರ್ಥಗಳಿಂದ ಸೈನ್ಯದಲ್ಲಿ ಉನ್ನತ ಸ್ಥಾನವನ್ನು ಪಡೆದನು. ಹೈದರನು ಮರಾಠರ ಪ್ರಭಾವದಿಂದ ಅಶ್ವದಳದ ಮಹತ್ವವನ್ನು ಅರಿತುಕೊಂಡು ಪ್ರಾಮುಖ್ಯತೆ ಮತ್ತು ಹೆಚ್ಚಿನ ಪ್ರೋತ್ಸಾಹಗಳನ್ನು ನೀಡಿದನು. ಇದು ಅಶ್ವದಳದ ಬಳಕೆ ಮತ್ತು ಯುದ್ಧ ಸಮಯದಲ್ಲಿ ಸೈನ್ಯವನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ವೇಗದ ಸಾರಿಗೆಗೆ ದಾರಿಮಾಡಿಕೊಟ್ಟಿತು.

ಹೈದರ್ ಅಲಿಯು ಕ್ರಿ.ಶ. ೧೭೫೮ರಲ್ಲಿ ಮೈಸೂರಿನ ದಳವಾಯಿಯಾಗಿ ನೇಮಕವಾದಾಗ ಮೂರುಸಾವಿರ ಅಶ್ವಗಳನ್ನು ಸೈನ್ಯದಲ್ಲಿ ಖಾಯಂ ಆಗಿ ಉಳಿಸಿಕೊಂಡು ನಾಲ್ಕುಸಾವಿರ ಕುದುರೆಗಳನ್ನು ಸೇವೆಯಿಂದ ಬಿಡುಗಡೆಗೊಳಿಸಿದನು. ಹೀಗೆ ಸೇವೆಯಿಂದ ಬಿಡುಗಡೆ ಹೊಂದಿದ ಅಶ್ವದಳದ ಸೈನಿಕರನ್ನು ತನ್ನ ಸೈನ್ಯದಲ್ಲಿದ್ದ ಖಾಯಂಅಶ್ವದಳದಿಂದ ದಾಳಿಮಾಡಿಸಿದನು.[೧೯] ಇದರಿಂದ ಮೈಸೂರು ಸೈನ್ಯವು ಶತ್ರುಗಳನ್ನಲ್ಲದೆ ತಮ್ಮವರನ್ನೇ ಕೊಳ್ಳೆಹೊಡೆಯುತ್ತಿತ್ತು. ಹೈದರನಿಗಿಂತ ಮುಂಚೆ ದಳವಾಯಿಯಾಗಿದ್ದ ನಂಜರಾಜಯ್ಯನು ಅಧಿಕಾರದಿಂದ ತೆರೆಮರೆಗೆ ಸರಿಯುತ್ತಿದ್ದಾಗ

ವಿಜಯನಗರ ಸಾಮ್ರಾಜ್ಯಕ್ಕೆ ಹಲವಾರು ಅಮರನಾಯಕರಿದ್ದು, ಇವರು ಸಂಪತ್ತು ಹಾಗೂ ರಾಜ್ಯ ರಕ್ಷಣೆಯ ಗುರಿಯೇ ಪ್ರಮುಖ ಉದ್ದೇಶವೆಂದು ತಿಳಿದಿದ್ದರು. ಏಕೆಂದರೆ ಮೈಸೂರು ಒಡೆಯರು ಹಾಗೂ ದಳವಾಯಿಗಳು ತಾವು ಯುದ್ಧಗಳಲ್ಲಿ ಗೆದ್ದ ಸಂಪತ್ತನ್ನು ಪ್ರಜೆಗಳಿಗಾಗಿಯೇ ವಿನಿಯೋಗಿಸಲು ಹಲವಾರು ಪ್ರಮುಖವಾದ ಕಾರಣಗಳಿದ್ದವು. ಅವುಗಳಲ್ಲಿ ಕ್ಷಾಮಗಳು, ಬರಗಾಲ, ಶತ್ರುಗಳ ಆಕ್ರಮಣದಂತಹ ಘಟನೆಗಳಿಂದ ರಾಜ್ಯದ ಆದಾಯವನ್ನು ಹೆಚ್ಚಿಸುವುದು ಇವರ ಪ್ರಮುಖ ಉದ್ದೇಶವಾಗಿತ್ತು. ಬಿಜಾಪುರದ ಷಾಹಿ ಸುಲ್ತಾನರು, ಕೆಳದಿಯ ಅರಸರು ಹಾಗೂ ಮರಾಠರು ಮೈಸೂರಿನ ಮೇಲೆ ಪದೇ ಪದೆ ಆಕ್ರಮಣ ಮಾಡುತ್ತಿದ್ದುದೇ ಇದಕ್ಕೆ ಪ್ರಮುಖ ಕಾರಣವಾಗಿತ್ತು.

ಮೈಸೂರು ಒಡೆಯರು, ಸರ್ವಾಧಿಕಾರಿಗಳಂತೆ ಆಳಿದ ದಳವಾಯಿಗಳು ಮತ್ತು ಬ್ರಿಟಿಷರು ಮೈಸೂರಿನ ಒಡೆಯರು ಸೈನ್ಯದ ಬಲವರ್ಧನೆಗಾಗಿ ಶ್ರಮಿಸಿದ್ದು ಅದರ ಮೂಲಕ ಸೈನ್ಯದ ಅಧಿಕಾರವರ್ಗ, ಶಸ್ತ್ರಾಸ್ತ್ರಗಳ ಉತ್ಪಾದನೆ ಮತ್ತು ಕೋಟೆ–ಕೊತ್ತಲಗಳನ್ನು ನಿರ್ಮಾಣಕ್ಕೆ ಶ್ರಮಿಸಿ ಅದರ ಮೂಲಕ ರಾಜ್ಯವಾಳಿದರು. ಇವೇ ಅಲ್ಲದೆ ಅರಸರು ತಮ್ಮ ಆಳ್ವಿಕೆಯ ಕಾಲದಲ್ಲಿ ಅಳವಡಿಸಿಕೊಂಡ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಕಾರ್ಯಕ್ರಮಗಳಿಂದ ಅಭಿವೃದ್ಧಿಯನ್ನು ಸಾಧಿಸಿತು. ಒಟ್ಟಾರೆಯಾಗಿ ಮೈಸೂರು ಸಾಮ್ರಾಜ್ಯವು ಸೈನಿಕ ಹಾಗೂ ಪ್ರಜಾಪ್ರಭುತ್ವವನ್ನು ಹೊಂದಿದ ಮಿಶ್ರ ಆಡಳಿತವನ್ನು ಹೊಂದಿತ್ತು. ಇದರಿಂದ ರಾಜ್ಯ ಹಾಗೂ ಪ್ರಜೆಗಳ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತುಕೊಂಡಿದ್ದು ಸದಾ ಜಾಗರೂಕವಾಗಿ ಸೈನ್ಯವನ್ನು ಇಡಬೇಕಾದುದು ಅತ್ಯವಶ್ಯಕವಾಗಿತ್ತು.[3] ಆದರೆ ಟಿಪ್ಪುವಿನ ಮರಣದ ನಂತರ ಮೈಸೂರಿನ ಅಧಿಕಾರವನ್ನು ಬ್ರಿಟಿಷರು ಪಡೆದುಕೊಂಡು ಭಾರತದ ಸ್ವಾತಂತ್ರ್ಯಗೊಳ್ಳುವವರೆಗೆ ವಿಭಿನ್ನವಾದ ರೀತಿಯಲ್ಲಿ ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ಸೈನ್ಯಾಡಳಿತವು ಪರಿವರ್ತನೆಯಾಗುತ್ತಾ ಸಾಗಿತು. ಮೈಸೂರು ರಾಜ್ಯದ ರಕ್ಷಣೆಗೆ ಅಗತ್ಯವಾಗಿದ್ದ ಸೈನ್ಯವು ಒಡೆಯರು, ದಳವಾಯಿಗಳು ಹಾಗೂ ಬ್ರಿಟಿಷ್ ರೆಸಿಡೆಂಟರುಗಳ ಆಳ್ವಿಕೆಯ ಅವಧಿಯಲ್ಲಿ ವಿವಿಧ ವಿಭಾಗಗಳಲ್ಲಿ ಯುದ್ಧ ಮತ್ತು ಶಾಂತಿಯ ಪರಿಪಾಲನೆ ಮಾಡುತ್ತಿತ್ತು.

ಸೈನ್ಯಾಡಳಿತವು ಸೈನ್ಯಕ್ಕೆ ಮಾತ್ರ ಅನ್ವಯಿಸುವುದು. ಸೈನ್ಯಾಡಳಿತದಲ್ಲಿ ಸೈನಿಕ ಶ್ರೇಣಿ, ಸೈನಿಕ ಅಧಿಕಾರ, ಸೈನ್ಯದ ಖರ್ಚುವೆಚ್ಚಗಳು ಮುಂತಾದವುಗಳು ಒಳಗೊಂಡಿವೆ. ಮೈಸೂರು ಅರಸರ ಕಾಲದಲ್ಲಿ ರಾಜನೇ ರಾಜ್ಯವ್ಯವಸ್ಥೆಯ ಬಹು ಉನ್ನತ ಸ್ಥಾನದಲ್ಲಿದ್ದ. ಆತನ ನಂತರದ ಸ್ಥಾನವನ್ನು ದಳವಾಯಿಗಳು ಹೊಂದಿದ್ದರು. ಹೈದರ್ ಅಲಿಯು ದಳವಾಯಿಗಳನ್ನು ದಿವಾನರುಗಳೆಂದು ಕರೆದನು. ಸೈನಿಕ ಆಡಳಿತವು ಈ ಮೊದಲು ಅಸ್ತಿತ್ವದಲ್ಲಿದ್ದ ದಳವಾಯಿಗಳಂತೆ ದಿವಾನರ ಕೈಯಲ್ಲಿಯೇ ಅಡಕವಾದ್ದು ದಿವಾನರೇ ಪ್ರಧಾನಮಂತ್ರಿಗಳಾಗಿದ್ದರು. ಮೈಸೂರು ಬ್ರಿಟಿಷರ ಸಹಾಯಕ ಸೈನ್ಯ ಪದ್ಧತಿಗೆ ಒಳಪಟ್ಟ ನಂತರವು ಕೂಡ ಮುಂದುವರೆಯಿತಾದರೂ ನಂತರದ ದಿನಗಳಲ್ಲಿ ಕೇವಲ ಆರ್ಥಿಕ ಸಲಹೆಗಾರನಾಗಿ ನಿಯೋಜನೆಯಾದನು. ವಿಜಯನಗರ ಕಾಲದಲ್ಲಿ ಸೈನ್ಯಾಡಳಿತ ವಿಭಾಗವನ್ನು ಕಂದಾಚಾರವೆಂದು ಕರೆಯಲಾಗುತ್ತಿತ್ತು. ಮುಂದೆ ಮೈಸೂರು ಒಡೆಯರ ಕಾಲದಲ್ಲಿ ಇದು ಒಂದು ಪ್ರತ್ಯೇಕವಾದ ವಿಭಾಗವಾಗಿ ಪೊಲೀಸ್ ಇಲಾಖೆಯ ಮಾದರಿಯಲ್ಲಿ ಸೇವೆಯನ್ನು

ಸಲ್ಲಿಸುತ್ತಿತ್ತು. ಮೈಸೂರು ಅರಸರು ಸೈನ್ಯಾಡಳಿತದಲ್ಲಿ ವಿಭಾಗಗಳನ್ನು ಮಾಡಿಕೊಂಡು ಅಧಿಕಾರದಲ್ಲಿ ಶ್ರೇಣಿಪದ್ಧತಿಯನ್ನು ಅಳವಡಿಸಿಕೊಂಡಿದ್ದರು. ಇಲ್ಲಿ ರಾಜನು ಉನ್ನತ ಸ್ಥಾನದಲ್ಲಿದ್ದರೆ ಅನಂತರದ ಸ್ಥಾನದಲ್ಲಿ ದಳವಾಯಿಗಳು, ಪೌಜುದಾರರು, ಠಾಣಾದಾರರು, ಹೋಬಳಿದಾರರು ಮುಂತಾದವರು ಕ್ರಮವಾಗಿ ಕೆಳಶ್ರೇಣಿಯ ಅಧಿಕಾರವನ್ನು ಹೊಂದಿದ್ದರು. ಸೀಮೆಯ 'ಕಂದಾಚಾರ ವ್ಯವಸ್ಥೆ' ಎಂಬ ಪರಿಕಲ್ಪನೆಯನ್ನು ಅಳವಡಿಸಿಕೊಂಡಿದ್ದರಿಂದ ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಇವರು ಸ್ವತಂತ್ರವಾಗಿ ಸೈನ್ಯವನ್ನು ಒಗ್ಗೂಡಿಸುವ ಕಾರ್ಯವನ್ನು ನಿರ್ವಹಿಸಬೇಕಾಗಿತ್ತು. ಆದರೂ ಸಹ ಈ ವ್ಯವಸ್ಥೆಯು ವಿಜಯನಗರ ಅರಸರ ಕಾಲದ ಅಮರನಾಯಂಕರ ವ್ಯವಸ್ಥೆಯನ್ನು ನೆನಪಿಸುವ ಪ್ರಾಂತೀಯ ಆಡಳಿತವನ್ನು ನೋಡಿಕೊಳ್ಳುವ ಸ್ವತಂತ್ರ ಘಟಕಗಳಿಂದ ಕೂಡಿತ್ತು.

ವಿಜಯನಗರ ಅರಸರ ಕಾಲದಲ್ಲಿದ್ದಂತೆಯೇ ಸೈನ್ಯವನ್ನು ಕೇಂದ್ರ ಮತ್ತು ಪ್ರಾಂತೀಯ ಎಂಬುದಾಗಿ ವಿಂಗಡಿಸಿದ್ದನ್ನು ಮೈಸೂರು ಅರಸರ ಕಾಲದಲ್ಲಿಯೂ ಕೂಡ ಕಾಣಬಹುದು. ಕೇಂದ್ರದಲ್ಲಿ ಅರಸನೇ ಉನ್ನತ ಶ್ರೇಣಿಯಲ್ಲಿದ್ದರಿಂದ ಸೈನಿಕ ಅಧಿಕಾರವು ಕೇಂದ್ರದ ಅಥವಾ ರಾಜನ ನೇರ ಹಿಡಿತದಲ್ಲಿತ್ತಾದ್ದರಿಂದ ವೇತನವನ್ನು ಅರಸನೇ ಭರಿಸುತ್ತಿದ್ದನು. ಆದರೆ ಪ್ರಾಂತೀಯ ಸೈನ್ಯವು ಪ್ರಾಂತ್ಯಾಧಿಕಾರಿಗಳಾದ ಪೌಜುದಾರರ ಅಧೀನದಲ್ಲಿದ್ದಿತು. ಆದರೆ ಈ ವ್ಯವಸ್ಥೆಯು ವಿಜಯನಗರ ಅರಸರ ಕಾಲದಲ್ಲಿ ಅಮರನಾಯಕರ ಹಿಡಿತದಲ್ಲಿದ್ದಂತೆ ಭಾಸವಾದರೂ ಸಹ, ಮೈಸೂರು ಅರಸರು ಈ ಅಮರನಾಯಕರ ಪದ್ಧತಿಯನ್ನು ಮುಂದುವರೆಸುವ ಪ್ರಯತ್ನವನ್ನು ಮಾಡಲಿಲ್ಲ. ಏಕೆಂದರೆ ವಿಜಯನಗರ ಸಾಮ್ರಾಜ್ಯದ ಅವನತಿಯ ವೇಳೆಗಾಗಲೇ ಈ ಅಮರನಾಯಕರರು ಸ್ವತಂತ್ರ ಪಾಳೆಯಗಾರರಾಗಿ ತಮ್ಮ ಆಳ್ವಿಕೆಯನ್ನು ಪ್ರಾರಂಭಿಸಿದ್ದರು. ಈ ಅಧಿಕಾರಿಗಳು ಅರಸನಿಂದ ಉಂಬಳಿ ಪಡೆದಂತಹ ಭೂಮಿಯಿಂದ ಬಂದ ಆದಾಯದ ಉತ್ಪತ್ತಿಯಲ್ಲಿ ಒಂದು ನಿಗಧಿಪಡಿಸಿದಂತಹ ಪ್ರಮಾಣದ ವಂತಿಗೆಯನ್ನು ಸಲ್ಲಿಸುವುದರ ಜೊತೆಗೆ ಆದಾಯಕ್ಕೆ ಅನುಗುಣವಾಗಿ ಸೈನ್ಯವನ್ನು ಕಾಯ್ದಿಟ್ಟುಕೊಂಡಿದ್ದರು.[೪] ಇದರಿಂದ ಅರಸರು ತಮ್ಮ ಆಡಳಿತವನ್ನು ಸುಗಮವಾಗಿ ನಿರ್ವಹಿಸಲು ಸಹಕಾರಿಯಾಯಿತು. ಆದರೂ ಇವರು ಸಂಪೂರ್ಣವಾಗಿ ವಿಜಯನಗರ ಅರಸರ ಕಾಲದ ಈ ವ್ಯವಸ್ಥೆಯನ್ನೇ ಮುಂದುವರೆಸಿಕೊಂಡು ಬಂದರೆಂದು ಹೇಳಿದರೆ ತಪ್ಪಾಗಲಾರದು. ಏಕೆಂದರೆ ಇವರು ವಿಜಯನಗರದ ಸಾಮಂತ ಅರಸರಾಗಿದ್ದು ಶ್ರೀರಂಗಪಟ್ಟಣದಲ್ಲಿ ವಿಜಯನಗರದ ಕೊನೆಯ ಅರಸನಾದ ಶ್ರೀರಂಗರಾಯನು ಆಳ್ವಿಕೆಯನ್ನು ಮಾಡಿದ್ದು ಅವರ ಪ್ರಭಾವವೇ ಮೈಸೂರು ಅರಸರ ಮೇಲಾಯಿತು. ಹೆಚ್ಚಿನದಾಗಿ ಅದೇ ಮಾದರಿಯ ಸೈನಿಕ ಆಡಳಿತ ವ್ಯವಸ್ಥೆಯನ್ನು ಅಳವಡಿಸಿಕೊಂಡರು. ಆದ್ದರಿಂದ ಮೈಸೂರು ಒಡೆಯರ ಕಾಲದ ಸೈನ್ಯಾಡಳಿತವನ್ನು ಕುರಿತು ಈ ಅಧ್ಯಾಯದಲ್ಲಿ ಹಂತಹಂತವಾಗಿ ವಿವರಿಸಲಾಗಿದೆ.

**೩.೧. ಒಡೆಯರು ಅಥವಾ ಅರಸ (ರಾಜತ್ವ)**

ಕೌಟಲ್ಯನು ತನ್ನ ಅರ್ಥಶಾಸ್ತ್ರ ಕೃತಿಯಲ್ಲಿ ತಿಳಿಸುವಂತೆ ರಾಜ್ಯದ ಆಡಳಿತದಲ್ಲಿ ಅಥವಾ ಸಪ್ತಾಂಗಗಳ ಆಡಳಿತದಲ್ಲಿ ರಾಜ ಹೇಗೆ ಪ್ರಮುಖನಾಗಿದ್ದಾನೋ, ಹಾಗೆಯೇ ಸೈನ್ಯಾಡಳಿತದಲ್ಲಿ

ಕೂಡ ಈತನೇ ಮುಖ್ಯವಾದ ಭಾಗವಾಗಿದ್ದು ರಾಜ್ಯದ ಸೇನೆಯನ್ನು ಮುನ್ನಡೆಸುತ್ತಿದ್ದನು. ಸೈನ್ಯಾಡಳಿತದ ನಿರ್ವಹಣೆ ಬಳಕೆ ಮತ್ತು ಶಿಸ್ತುಕ್ರಮಗಳಲ್ಲಿ ರಾಜನದು ಮಹತ್ವದ ಪಾತ್ರವಿದೆ. ಯುದ್ಧ ಮತ್ತು ಶಾಂತಿಯ ಸಂದರ್ಭಗಳಲ್ಲಿ ಈತ ಸೈನ್ಯದ ನೇತೃತ್ವವನ್ನು ವಹಿಸಿ ಸೈನ್ಯವನ್ನು ಸಂಘಟಿಸುವ, ಸೈನಿಕರನ್ನು ಪ್ರೋತ್ಸಾಹಿಸುವ ಹಾಗೂ ಯುದ್ಧದ ನೀತಿ– ನಿಯಮಗಳನ್ನು ರೂಪಿಸುವ ಹೋರಾಟದ ಸಂದರ್ಭದಲ್ಲಿ ಸೈನಿಕರನ್ನು ಹುರಿದುಂಬಿಸುವ ಕಾರ್ಯವನ್ನು ನಿರ್ವಹಿಸಲು ಸಮರ್ಥನಾಗಿರಬೇಕಿತ್ತು.[೫] ಮೈಸೂರಿನ ಸ್ವತಂತ್ರ ಅರಸರೆಂದು ಘೋಷಿಸಿಕೊಂಡ ರಾಜಒಡೆಯರಿಂದ ಹಿಡಿದು ದೊಡ್ಡದೇವರಾಜ ಒಡೆಯರವರೆಗೆ ಅರಸರೇ ನೇರವಾಗಿ ಆಳ್ವಿಕೆಯನ್ನು ನಡೆಸುತ್ತಿದ್ದರು. ರಾಜ್ಯವು ಅತಿಯಾದ ವಿಸ್ತಾರವನ್ನು ಪಡೆದುಕೊಂಡಿದ್ದರಿಂದ ಅರಸರಿಗೆ ಆಡಳಿತದಲ್ಲಿ ಒತ್ತಡಗಳು ಹೆಚ್ಚಿದವು. ಇದರಿಂದ ಅವರು ತಮ್ಮ ಅಧಿಕಾರದ ವಿಕೇಂದ್ರೀಕರಣಕ್ಕೆ ಪ್ರಯತ್ನಿಸಿದರು. ಅದರ ಫಲವಾಗಿ ಸೈನ್ಯದ ಆಡಳಿತವನ್ನು ದಳವಾಯಿಗಳು ನಿರ್ವಹಿಸುವಂತೆ ನೇಮಕ ಮಾಡಿದರು. ಈ ದಳವಾಯಿಯು ಪ್ರಧಾನಮಂತ್ರಿ ಹಾಗೂ ದಂಡನಾಯಕನಾಗಿ ತನ್ನ ಪಾತ್ರವನ್ನು ನಿರ್ವಹಿಸುತ್ತಿದ್ದನು. ರಾಜನು ಯುದ್ಧ ಮತ್ತು ಶಾಂತಿ ಸಮಯದಲ್ಲಿ ಆಜ್ಞೆ ಆದೇಶಗಳನ್ನು ಅಧಿಕಾರಿಗಳ ಮೇಲೆ ಹೇರುವುದಾಗಿತ್ತು. ಅದು ಪ್ರಜೆಗಳಿಗೆ ತಮ್ಮ ಒಡೆಯನು ತಮ್ಮ ಮೇಲೆ ಹೇರಿದ ಆಜ್ಞೆ, ಆದೇಶಗಳು ಯಾವ ವೇಳೆಯಲ್ಲೂ ಅಹಿತಕರವಾಗದಂತೆ ಪಾಲಿಸುವುದು ಪ್ರಜೆಗಳ ಕರ್ತವ್ಯವಾಗಿತ್ತು. ಇದರಿಂದ ರಾಜನಲ್ಲಿದ್ದ ಉನ್ನತ ಅಧಿಕಾರವೆಲ್ಲವೂ ದಳವಾಯಿಗಳಲ್ಲಿ ಕೇಂದ್ರೀಕರಣವಾಯಿತು. ದಳವಾಯಿಗಳು ತಮ್ಮ  ಅಧಿಕಾರದಲ್ಲಿ ರಾಜ್ಯವನ್ನು ವಿಸ್ತರಿಸುವತ್ತ ಗಮನಹರಿಸಿದರು. ಆದರೆ ಕ್ರಿ.ಶ.೧೮ನೆಯ ಶತಮಾನದ ಪೂರ್ವಭಾಗದಲ್ಲಿ ಅಂದರೆ ಕ್ರಿ.ಶ.೧೭೩೪ರ ನಂತರ ಅರಸನ ಅಧಿಕಾರವು ದಳವಾಯಿಗಳಲ್ಲಿ ಕೇಂದ್ರೀಕರಣವಾಗಿ ದಳವಾಯಿಗಳು ಸರ್ವಾಧಿಕಾರಿಗಳಂತೆ ಪ್ರಬಲರಾಗಿ ಅರಸರನ್ನು ಮೂಲೆಗುಂಪು ಮಾಡಿದ್ದರಿಂದ ಅರಸರು ಕೇವಲ ಹೆಸರಿಗೆ ಮಾತ್ರವೇ ಅರಸರು ಅಧಿಕಾರದಲ್ಲಿದ್ದರು.

ಮೈಸೂರು ಪ್ರಾರಂಭದಲ್ಲಿ ಒಂದು ಸಣ್ಣ ಪಾಳೆಯಪಟ್ಟಾಗಿದ್ದರಿಂದ ಅದನ್ನು ವಿಸ್ತರಿಸಲು ತಮ್ಮ ದೂರಾಲೋಚನೆ ಮತ್ತು ಅಧಿಕಾರದ ಮಹದಾಸೆಯಿಂದ ರಾಜಒಡೆಯರು ಶ್ರೀರಂಗಪಟ್ಟಣದಲ್ಲಿ ಆಳ್ವಿಕೆ ಮಾಡುತ್ತಿದ್ದ ವಿಜಯನಗರದ ಕೊನೆಯ ರಾಜಪ್ರತಿನಿಧಿಯನ್ನು ಕೆಳಗಿಳಿಸಿ ರಾಜ್ಯವನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಮುಂದೆ ರಾಜಒಡೆಯರ ಉತ್ತರಾಧಿಕಾರಿಯು ಆಡಳಿತದಲ್ಲಿ ಅಸಮರ್ಥನಾಗಿದ್ದರಿಂದ ಆತನನ್ನು ಸಿಂಹಾಸನದಿಂದ ಕೆಳಗಿಳಿಸಿ ಕಂಠೀರವ ನರಸರಾಜ ಒಡೆಯರು ಅಧಿಕಾರಕ್ಕೆ ಬಂದರು. ಇವರು ತಮ್ಮ ಯುದ್ಧಕಲೆ ಮತ್ತು ಹೋರಾಟಗಳಿಂದಲೇ 'ರಣಧೀರ ಕಂಠೀರವ' ಎಂಬ ಬಿರುದನ್ನು ಪಡೆದಿದ್ದರು[೬] ಎಂದು ತಿಳಿದುಬರುತ್ತದೆ. ಮೈಸೂರು ಅರಸರೆಂದರೆ ಶತ್ರುಗಳಲ್ಲಿ ಭಯಹುಟ್ಟುವ ಹಾಗೆ ಗೆರಿಲ್ಲಾ ಯುದ್ಧನೀತಿಗಳನ್ನು ಅಳವಡಿಸಿಕೊಂಡಿದ್ದರು. ಆದ್ದರಿಂದ ಇವರ ಅಧಿಕಾರಾವಧಿಯಲ್ಲಿ ಬಿಜಾಪುರದ ದಾಳಿಯೊಂದು ಬಿಟ್ಟರೆ ಉಳಿದ ಮತ್ತಾವುದೇ ದಾಳಿಗಳೂ ಅಷ್ಟೊಂದು ಭೀಕರವಾಗಿ ನಡೆಯಲಿಲ್ಲ. ಆದರೂ ಕೂಡ ಇವರು ತಮ್ಮ ಹೋರಾಟ, ಶೌರ್ಯ, ಸಾಹಸಗಳಿಂದಲೇ ಹೆಸರಾದವರು. ಚಾಮರಾಜ ಒಡೆಯರು ಅಧಿಕಾರಕ್ಕೆ ಬರುವ

ಮುಂಚೆ ದಳವಾಯಿ, ವೈದ್ಯ, ವಿದ್ಯಾಗುರುಗಳು ಸರಿಯಾಗಿ ಕರ್ತವ್ಯ ನಿರ್ವಹಿಸಲಿಲ್ಲವೆಂದು ತಾವು ಅಧಿಕಾರಕ್ಕೆ ಬಂದ ತಕ್ಷಣವೇ ಅವರನ್ನು ಕೆಲಸದಿಂದ ತೆಗೆದುಹಾಕಿದರು. ದೊರೆಗಳ ಸೇವೆಯಲ್ಲಿದ್ದು ಪಾಠಹೇಳಿಕೊಡುತ್ತಿದ್ದ ರಾಮಸೋಮಯಾಜಿಯ ಮಗ ರಂಗನಾಥ ದೀಕ್ಷಿತನೂ, ಔಷಧವನ್ನು ಒಪ್ಪಿಸುತ್ತಿದ್ದ ಬೊಮ್ಮರಸ ಪಂಡಿತನೂ ಮತ್ತು ದಳವಾಯಿ ಸೈನ್ಯದ ಅಧಿಕಾರವನ್ನು ದುರುಪಯೋಗ ಮಾಡಿಕೊಂಡಿದ್ದರು. ಬೆಟ್ಟದರಸು ಅವರ ತಮ್ಮ ದೊಡ್ಡಚಾಮಪ್ಪ ಮತ್ತು ಅವನ ಮಗ ಚಿಕ್ಕಚಾಮಪ್ಪ ವಿಷನೀಡಿಯಾದರೂ ಅರಸರನ್ನು ಕೊಲ್ಲಬೇಕು ಆಗ ಮಾತ್ರ ಇಮ್ಮಡಿ ಚಾಮರಾಜ ಒಡೆಯರಿಗೆ ಪಟ್ಟವಾಗುತ್ತದೆ. ಈ ವೇಳೆಯಲ್ಲಿ ಅವರಿಗೂ ಬಾಲ್ಯವಾದ್ದರಿಂದ ಸರ್ವಸ್ವತಂತ್ರವಾದ ಅಧಿಕಾರವು ನಮಗೇ ದೊರೆಯುವುದು ಎಂದು ಬೆಳಗಿನ ಜಾವದಲ್ಲಿ ಆಡುತ್ತಲ್ಲಿದ್ದ ಮಾತುಗಳು ಚಾಮರಾಜರ ತಾಯಿ ಹೊನ್ನಾಜಮ್ಮಣ್ಣಿಯವರು ಅರಸರಿಗೆ ತಿಳಿಸಿದ್ದರಿಂದ ಇವರುಗಳನ್ನು ಅಧಿಕಾರದಿಂದ ತೆಗೆದು ದಳವಾಯಿ ಬೆಟ್ಟದರಸುವಿಗೆ ಶಿಕ್ಷೆಯನ್ನು ವಿಧಿಸಿದರು[೯]. ಅಲ್ಲದೆ ಬೆಟ್ಟದರಸು ನೇಮಕಮಾಡಿದ್ದ ಅರಮನೆಯ ಊಳಿಗದವರನ್ನು ತೆಗೆದು ಹೊಸ ವ್ಯಕ್ತಿಗಳನ್ನು ನೇಮಕ ಮಾಡಿದರು. ಅಲ್ಲದೆ ಇವರ ಕಾಲದಲ್ಲಿ ದಳವಾಯಿ ಬಸವಲಿಂಗಣ್ಣನಿಗೆ ಕಾರ್ಕೊಡಿಹಳ್ಳದ ಬಾಳರಾಯನಿಗೆ ಕಟ್ಟೆಮಳಲವಾಡಿ ಎಂಬ ಸೀಮೆಯ ತಮ್ಮಡಹಳ್ಳಿ ಗ್ರಾಮದಲ್ಲಿ ಒಂದು ವರ್ಷಕ್ಕೆ ೭೯ ೧/೨ ವರಹಗಳ ಭೂಕಂದಾಯವನ್ನೂ ೮೦ವರಹ ವೇತನವನ್ನೂ ಅವನು ಹೇಳಿದ ಸ್ಥಳದಲ್ಲಿ ೩೦೦ ಆನೆ–ಕಪ್ಪುಗಳನ್ನು ತೆಗೆದುಕೊಟ್ಟರೆ ಸುಲಭವಾಗಿ ಆನೆಗಳನ್ನು ಅರಮನೆಯ ಸೈನ್ಯಕ್ಕೆ ಒಪ್ಪಿಸುತ್ತಾನೆಂದು[೯] ತಿಳಿದು ಆನೆಗಳ ಕ್ರಯವನ್ನು ಮಾಡಿದರು. ಈ ಕಾರ್ಯವು ಮೈಸೂರಿನ ಸೈನ್ಯಕ್ಕೆ ಅಗತ್ಯವಾಗಿದ್ದ ಆನೆಗಳನ್ನು ಒದಗಿಸಲು ಅನುಕೂಲವಾಯಿತು. ಚಾಮರಾಜ ಒಡೆಯರು ತಮ್ಮ ೧೯ ವರ್ಷಗಳ ಆಳ್ವಿಕೆಯಲ್ಲಿ ನಾಲ್ಕುಜನ ದಳವಾಯಿಗಳನ್ನು ಬದಲಾಯಿಸಿದರು.[೧೦] ಇವರ ನಂತರ ಕ್ರಿ.ಶ.೧೬೩೭ರಲ್ಲಿ ಅಧಿಕಾರಕ್ಕೆ ಬಂದ ಇಮ್ಮಡಿ ರಾಜಒಡೆಯರು ದಳವಾಯಿ ವಿಕ್ರಮರಾಯನ ಕುತಂತ್ರಕ್ಕೆ ಬಲಿಯಾದರು.

ಕ್ರಿ.ಶ.೧೬೩೮ರಲ್ಲಿ ಮೈಸೂರಿನ ಸಿಂಹಾಸನವೇರಿದ ರಣಧೀರ ಕಂಠೀರವ ನರಸರಾಜ ಒಡೆಯರು ಈ ಮೊದಲೇ ತಿಳಿಸಿದಂತೆ ಹೆಸರಿಗೆ ತಕ್ಕ ಹಾಗೆ ರಣಧೀರರೇ ಆಗಿದ್ದರು. ಜಟ್ಟಿಕಾಳಗದಲ್ಲಿ ನಿಪುಣತೆಯನ್ನು ಹೊಂದಿದ್ದ ಇವರು ತಿರುಪಚನಾಪಳ್ಳಿಯ ಜಟ್ಟಿಯನ್ನು ಜಯಿಸಿ ಮೈಸೂರಿನ ಅರಸರು ಮಲ್ಲಯುದ್ಧದಲ್ಲೂ ಪರಿಣಿತರೆಂದು ತಿಳಿಯಪಡಿಸಿದರು. ದಳವಾಯಿ ವಿಕ್ರಮರಾಯನು ಇಮ್ಮಡಿರಾಜ ಒಡೆಯರಿಗೆ ವಿಷಪ್ರಾಶನ ಮಾಡಿಸಿದ ವಿಷಯವನ್ನು ಹೊರತಂದು, ವಿಕ್ರಮರಾಯನ ಕಣ್ಣುಗಳನ್ನು ಕೀಳಿಸಿ ಆತನನ್ನು ಸೆರೆಯಲ್ಲಿಟ್ಟರು. ಇವರ ಕಾಲದಲ್ಲಿ ಮೈಸೂರಿನ ಮೇಲೆ ಹೆಚ್ಚಿನ ದಾಳಿಗಳಾದವು. ಶ್ರೀರಂಗಪಟ್ಟಣವು ಕ್ರಿ.ಶ.೧೬೩೮ರಲ್ಲಿ ಭಯಂಕರವಾದ ದಾಳಿಗಳಿಗೆ ಹೆಸರಾಗಿದ್ದ ಬಿಜಾಪುರದ ಸೈನ್ಯಾಧಿಕಾರಿ ರಣದುಲ್ಲಾಖಾನನ ಕ್ರೂರದಾಳಿಗೆ ತುತ್ತಾಯಿತು. ಬಿಜಾಪುರದ ಸೈನಿಕರು ಶ್ರೀರಂಗಪಟ್ಟಣದ ಆಗ್ನೇಯ ದಿಕ್ಕಿನಲ್ಲಿ ಕೋಟೆಗೋಡೆಗೆ ಹೊಂದಿಕೊಂಡಂತೆ ಒಂದು ಸುರಂಗವನ್ನು ಕೊರೆದು ಅದರಲ್ಲಿ ಸಿಡಿಮದ್ದುಗಳನ್ನು ತುಂಬಿ ಸ್ಫೋಟಿಸಿ ಕೋಟೆಗೋಡೆಯನ್ನು ಬೀಳಿಸಿದರು. ಆ ಕೋಟೆಗೋಡೆ ಬಿದ್ದ ಕೂಡಲೇ ಬಿಜಾಪುರದ ಸೈನಿಕರು ಲಗ್ಗೆಯೇರಿದರು. ಈ ವೇಳೆಯಲ್ಲಿ

ಕಂಠೀರವ ನರಸರಾಜ ಒಡೆಯರು ಮೈಸೂರಿನ ಸೈನಿಕರು ಶೌರ್ಯ ಸಾಹಸಗಳಿಂದ ಹೋರಾಟ ಮಾಡುವಂತೆ  ಯೋಜನೆಗಳನ್ನು ರೂಪಿಸಿ ಅದರಲ್ಲಿ ಯಶಸ್ವಿಯಾದರು. ನಂತರದ ಕಾಲದಲ್ಲಿ ದಳವಾಯಿಗಳು ಕೆಲವೊಮ್ಮೆ ತಮ್ಮ ಅಧಿಕಾರವನ್ನು ಬಳಸಿಕೊಂಡು ಅರಸನ್ನೇ ಬದಲಾಯಿಸುವ ಮತ್ತು ಅವರನ್ನು ಅಧಿಕಾರ ತಮ್ಮ ದಾಹದಿಂದ ಕೊಲೆಮಾಡುವ ಹಂತಗಳಿಗೆ ಇಳಿದರು. ಕ್ರಿ.ಶ.೧೭೩೪ರಲ್ಲಿ ಚಾಮರಾಜ ಒಡೆಯರನ್ನು ದಳವಾಯಿ ದೇವರಾಜಯ್ಯನು ಅಧಿಕಾರದಿಂದ ವಜಾಮಾಡಿ ಇಮ್ಮಡಿ ಕೃಷ್ಣರಾಜ ಒಡೆಯರನ್ನು ಅಧಿಕಾರಕ್ಕೆ ತಂದನು.[೧೧] ಈ ಸಂದರ್ಭದಲ್ಲಿ ಚಾಮರಾಜ ಒಡೆಯರನ್ನು ತಮ್ಮ ಕೈಗೊಂಬೆಯನ್ನಾಗಿ ಮಾಡಿಕೊಳ್ಳಲಾಯಿತು.

ಮೈಸೂರಿನಲ್ಲಿ ಯದುರಾಯನಿಂದ(ಕ್ರಿ.ಶ.೧೩೯೯) ಹಿಡಿದು ಇಮ್ಮಡಿರಾಜ ಒಡೆಯರವರೆಗೆ (ಕ್ರಿ.ಶ.೧೬೧೭–೧೬೩೮) ಅರಸರ ಹಿರಿಯಪುತ್ರರಿಗೆ ಜೇಷ್ಠತೆಯ ಆಧಾರದ ಮೇಲೆ ಪಟ್ಟಾಭಿಷೇಕವನ್ನು ಮಾಡುತ್ತಿದ್ದರು. ಆದರೆ ಕಂಠೀರವ ನರಸರಾಜ ಒಡೆಯರು ತಮ್ಮ ಉತ್ತರಾಧಿಕಾರಿಯಾಗಿ ಇಮ್ಮಡಿ ಕೃಷ್ಣರಾಜ ಒಡೆಯರ ಸಹೋದರನ (ಬೆಟ್ಟದ ಚಾಮರಾಜ ಒಡೆಯರ್) ಮಗನನ್ನು ಶಾಸ್ತ್ರೋಕ್ತವಾಗಿ ದತ್ತುಪಡೆದುಕೊಂಡು ಪಟ್ಟಾಭಿಷೇಕವನ್ನು ಮಾಡಿದರು. ಇಲ್ಲಿಂದಲೇ ಮೈಸೂರಿನ ಇತಿಹಾಸದಲ್ಲಿ ಅರಸರ ದತ್ತು ಪ್ರಕ್ರಿಯೆಯು ಪ್ರಾರಂಭವಾಯಿತು. ಅರಸರು ಪಟ್ಟಾಭಿಷೇಕವಾದ ಕ್ಷಣದಿಂದಲೇ ರಾಜ್ಯದ ಸೈನಿಕ ಅಧಿಕಾರವೆಲ್ಲ ಅರಸನ ನೇರ ಹಿಡಿತದಲ್ಲಿರುತ್ತಿತ್ತು. ಹೀಗಾಗಿ ಹೋರಾಟಗಳಲ್ಲಿ ತನ್ನ ಸೈನಿಕರನ್ನು ಹುರಿದುಂಬಿಸುವ ಕಾರ್ಯವನ್ನು ನಿರ್ವಹಿಸಲು ಸಮರ್ಥನಾಗಿರಬೇಕಿತ್ತು.[೧೨] ಮೈಸೂರು ಒಡೆಯರು ಈ ಕಾರ್ಯಗಳಲ್ಲಿ ಯಶಸ್ವಿಯಾದರು. ಮೈಸೂರು ಪಾಳೆಯಪಟ್ಟಿನ ಸ್ವತಂತ್ರ ಆಳ್ವಿಕೆಯು ರಾಜಒಡೆಯರು ಸ್ವತಂತ್ರರಾಗುವ ಹೆಬ್ಬಯಕೆಯಿಂದ ಶ್ರೀರಂಗಪಟ್ಟಣದಲ್ಲಿ ಆಳ್ವಿಕೆಯನ್ನು ಮಾಡುತ್ತಿದ್ದ ಶ್ರೀರಂಗರಾಯನನ್ನು(ತಿರುಮಲಾಯ) ಸಿಂಹಾಸನದಿಂದ ಕೆಳಗಿಳಿಸಿ ತಲಕಾಡಿಗೆ ಕಳಿಸುವುದರ ಮೂಲಕ ಈ ಯೋಜನೆಯು ಸಫಲವಾಯಿತು.

ಮೈಸೂರಿನ ಅರಸರು ವಿಜಯನಗರ ಸಾಮ್ರಾಜ್ಯದ ಸಾಮಂತ ಅರಸರಾಗಿ ಅಧಿಕಾರಕ್ಕೆ ಬಂದರೂ ಸಹ ತಮ್ಮ ಸಾಮ್ರಾಜ್ಯದ ಕೊನೆಯ ರಾಜಪ್ರತಿನಿಧಿಗೆ ರಾಜಾಶ್ರಯವನ್ನು ನೀಡಿತು. ಆದರೆ ಅರಸನು ಅದಕ್ಷನಾಗಿದ್ದರಿಂದ ತನ್ನ ಅಂತ್ಯಕಾಲದಲ್ಲಿ ಅಧಿಕಾರದಿಂದ ಪದಚ್ಯುತನಾದನು. ಹೀಗೆ ಪದಚ್ಯುತನಾದ ಅರಸನಿಂದ ರಾಜಒಡೆಯರು ಶ್ರೀರಂಗಪಟ್ಟಣವನ್ನು ತಮ್ಮ ವಶಮಾಡಿಕೊಂಡು ತಿರುಮಲರಾಯನನ್ನು ತಲಕಾಡಿಗೆ ಹೋಗುವಂತೆ ಮಾಡಿದರು. ವಿಜಯನಗರದ ಅರಸರು ಕ್ರಿ.ಶ.೧೫೬೫ರ ತಾಳಿಕೋಟೆ ಕದನ ತರುವಾಯ ಅಸಮರ್ಥರು ಮತ್ತು ಅದಕ್ಷರಾಗಿದ್ದು, ವಿಜಯನಗರ ಸಾಮ್ರಾಜ್ಯದ ಅರಸರೆಂಬ ತಮ್ಮನ್ನು ಆಳಿದ ಅರಸರೆಂಬ ಒಂದೇ ಒಂದು ಕಾರಣಕ್ಕೆ ಆಶ್ರಯ ನೀಡಿದ್ದ ಇವರು ತಮ್ಮ ಅಧಿಕಾರದ ದುರಾಸೆಯಿಂದ ಸ್ವತಂತ್ರ ಆಳ್ವಿಕೆಯನ್ನು ಸ್ಥಾಪಿಸಲು ಪ್ರಾರಂಭಿಸಿದರು. ಇದೊಂದು ವಿಪರ್ಯಾಸವೇ ಸರಿ. ಈ ಮೊದಲೇ ತಿಳಿಸಿದಂತೆ ಕ್ರಿ.ಶ.೧೫೭೮ರಲ್ಲಿ ಅಧಿಕಾರಕ್ಕೆ ಬಂದ ರಾಜಒಡೆಯರಿಂದ ಹಿಡಿದು ಕ್ರಿ.ಶ.೧೭೧೪ರಲ್ಲಿ ಕಂಠೀರವ ಮಹಾರಾಜ

ಒಡೆಯರ ಅಧಿಕಾರಕ್ಕೆ ಬರುವ ಕಾಲದವರೆಗೆ ಮೈಸೂರು ಅರಸರ ನೇರಆಳ್ವಿಕೆಗೆ ಒಳಪಟ್ಟಿತ್ತು. ಆದರೆ ಕ್ರಿ.ಶ.೧೭೩೪ರ ಅವಧಿಯಿಂದ ಹಿಡಿದು ಕ್ರಿ.ಶ.೧೭೯೯ರ ವರೆಗೆ ಮೈಸೂರು ರಾಜ್ಯವು ದಳವಾಯಿಗಳ ಹಿಡಿತದಲ್ಲಿತ್ತು. ನಂತರ ಕ್ರಿ.ಶ.೧೭೯೯ರಲ್ಲಿ ಟಿಪ್ಪುವಿನ ಮರಣದಿಂದ ಹಿಡಿದು ಕ್ರಿ.ಶ.೧೮೮೧ರ ವರೆಗೆ ಮೈಸೂರಿನ ಸಂಸ್ಥಾನವು ಬ್ರಿಟಿಷ್ ರೆಸಿಡೆಂಟರ ಆಳ್ವಿಕೆಗೆ ಒಳಪಟ್ಟರೆ ಕ್ರಿ.ಶ.೧೮೮೧ ರಿಂದ ಕ್ರಿ.ಶ.೧೯೪೭ರ ವರೆಗೆ ಮೈಸೂರಿನ ಸೈನ್ಯಾಧಿಕಾರವು ರಾಜನ ನೇರ ಹಿಡಿತಕ್ಕೆ ಒಳಗಾದರೂ ಬ್ರಿಟಿಷರು ಜಾರಿಗೆ ತಂದ ಸಹಾಯಕಸೈನ್ಯ ಪದ್ಧತಿಯ ನಿಯಂತ್ರಣದಲ್ಲೇ ತನ್ನ ಆಳ್ವಿಕೆಯನ್ನು ನಿರ್ವಹಿಸುತ್ತಿತ್ತು. ಆದರೂ ಸಹ ದಳವಾಯಿಗಳ ಕಾಲಾವಧಿಯಲ್ಲಿ ನಡೆಸುತ್ತಿದ್ದ ಸೈನ್ಯದ ಏರ್ಪಾಡು, ಆಡಳಿತ, ಸಂಘಟನೆ, ನಿಯೋಜನೆ ಮೊದಲಾದವುಗಳು ಅರಸರ ಕೈತಪ್ಪಿದವು. ಒಟ್ಟಾರೆಯಾಗಿ ಬದಲಾದ ಪರಿಸ್ಥಿತಿಗಳು ಹಾಗೂ ಅವಶ್ಯಕತೆಗಳಿಂದ ರಾಜತ್ವದ ಕಾರ್ಯವು ಕೂಡ ಭಿನ್ನವಾಯಿತು.

ಮೈಸೂರಿನ ಒಡೆಯರ ನೇರ ಆಳ್ವಿಕೆಯ ಕಾಲದಲ್ಲಿ ಅರಸನು ಉನ್ನತ ಸ್ಥಾನದಲ್ಲಿದ್ದನು. ಸೈನ್ಯವನ್ನು ಸಂಘಟಿಸುವ, ಅವರಿಗೆ ತರಬೇತಿ ನೀಡುವ, ಯುದ್ಧದ ಸಂದರ್ಭಗಳಲ್ಲಿ ಸೈನ್ಯವನ್ನು ಮುನ್ನಡೆಸುವಂತಹ ಹಾಗೂ ಸದಾ ಶಿಸ್ತುಬದ್ಧತೆಯಿಂದ ಕೂಡಿದ್ದ ಸೈನ್ಯವನ್ನು ನಿರ್ವಹಿಸುವ ಅಧಿಕಾರವು ಅರಸನಿಗಿತ್ತು. ಹೊರಗಿನ ಶತ್ರುಗಳಿಂದ ಅಲ್ಲದೇ ತನ್ನ ರಾಜ್ಯದ ಒಳಗಿರುವ ಶತ್ರುಗಳನ್ನು ಅರಸನು ಧಮನ ಮಾಡಬೇಕು. ಆಗಮಾತ್ರ ಅಧಿಕಾರವನ್ನು ನಡೆಸುವುದು ಸುಲಭ. ಆದರೆ ಮೈಸೂರು ಒಡೆಯರಿಗೆ ಪ್ರಾರಂಭದಲ್ಲಿ ಹೊರಗಿನ ಶತ್ರುಗಳು ಹೆಚ್ಚಿದ್ದರೆ, ಕಾಲಾನಂತರದಲ್ಲಿ ದಳವಾಯಿಗಳು ಮತ್ತು ಅವರ ಮನೆತನದ ಕೆಲವು ರಕ್ತಸಂಬಂಧಿಗಳೇ ಅರಸರಿಗೆ ರಾಜ್ಯದ ಒಳಗಿನ ಶತ್ರುಗಳಾಗಿ ಪರಿಣಮಿಸಿದ್ದರು. ಅದರಲ್ಲೂ ದಳವಾಯಿ ವಿಕ್ರಮರಾಯ, ನಂಜರಾಜಯ್ಯ, ದೇವರಾಜಯ್ಯನವರಂತಹ ಅಧಿಕಾರಿಗಳಿಂದ ಅಧಿಕಾರವನ್ನು ನಿಯಂತ್ರಿಸಲು ಹರಸಾಹಸ ಪಡಬೇಕಾಯಿತು. ಅರಸರು ತಮ್ಮ ಆಳ್ವಿಕೆಯ ವಿವಿಧ ಕಾಲಾವಧಿಯಲ್ಲಿ ಬದಲಾದ ಪರಿಸ್ಥಿತಿಗಳಿಗೆ ತಕ್ಕಂತೆ ಯುದ್ಧನೀತಿಯನ್ನು ಅನುಸರಿಸುತ್ತಿದ್ದರು. ಕಂಠೀರವ ನರಸರಾಜ ಒಡೆಯರ್ ಅವರು ತಮ್ಮ ಕಾಲದಲ್ಲಿ ಕಾಳಗಗಳಲ್ಲಿ ವಿಭಿನ್ನವಾದ ಯುದ್ಧನೀತಿಗಳಿಂದ ಹೋರಾಟಗಳನ್ನು ಮಾಡುತ್ತಿದ್ದರು. ಯುದ್ಧಗಳಲ್ಲಿ ಶತ್ರುಗಳು ಯಾರಾದರೂ ಶತ್ರುಗಳು ತಮ್ಮ ಕೈಗೆಸಿಕ್ಕಿದರೆ ಅವರ ಕಿವಿಮೂಗುಗಳನ್ನು ಕತ್ತರಿಸುವಂತೆ ಆಜ್ಞೆ ಮಾಡುತ್ತಿದ್ದರು. ಮುಂದೆ ಇದೇ ಮಾದರಿಯ ಯುದ್ಧನೀತಿಯನ್ನು ದೊಡ್ಡದೇವರಾಜ ಒಡೆಯರು ಕೂಡ ಶ್ರೀರಂಗಪಟ್ಟಣದ ಮೇಲೆ ಮರಾಠರ ಆಕ್ರಮಣಗಳನ್ನು ತಡೆಯಲು ಬಳಸಿಕೊಂಡರು. ಇದಕ್ಕೆ ಕಾರಣವೆಂದರೆ ಶತ್ರುಗಳ ಕಿವಿಮೂಗುಗಳನ್ನು ಕತ್ತರಿಸಿ ವಿಕಾರಗೊಳಿಸಿದರೆ ಅವರು ಬೇಗ ಸೋಂಕುಗಳಿಗೆ ತುತ್ತಾಗುವಂತೆ ಮಾಡುವುದಾಗಿತ್ತು. ಶತ್ರುಗಳ ನಿಗ್ರಹಕ್ಕಾಗಿ ಗೂಢಾಚಾರರನ್ನು ನೇಮಿಸುವುದು ಅಗತ್ಯವಾಗಿತ್ತು. ಗೂಢಾಚಾರರು ಹೊತ್ತುತಂದ ಮಾಹಿತಿಯನ್ನು ಆಧರಿಸಿ ರಾಜ್ಯವನ್ನು ರಕ್ಷಿಸಲು ಅರಸನು ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಲು ಸಹಾಯಕವಾಗುತ್ತಿತ್ತು. ಮೈಸೂರು ಒಡೆಯರು ಯುದ್ಧ ಸಂದರ್ಭಗಳಲ್ಲಿ ಶತ್ರುಗಳಿಂದ ಅಪಾರ

ಪ್ರಮಾಣದ ಶಸ್ತ್ರಾಸ್ತ್ರಗಳು, ಬಟ್ಟೆ, ಆಭರಣಗಳು ಮತ್ತು ಸಂಪತ್ತನ್ನು ವಶಪಡಿಸಿಕೊಳ್ಳುವಂತೆ ಆದೇಶಿಸುತ್ತಿದ್ದರು. ಹೀಗೆ ವಶಪಡಿಸಿಕೊಂಡ ವಸ್ತುಗಳನ್ನು ಸೈನಿಕರಿಗೆ ಎರಡು ವರ್ಷಗಳಿಗೊಮ್ಮೆ ಒದಗಿಸಲಾಗುತ್ತಿತ್ತು. ಈ ಮಾಹಿತಿಯು 'ಶ್ರೀಮನ್ಮಹಾರಾಜರ ವಂಶಾವಳಿ' ಕೃತಿಯಲ್ಲಿ ಉಲ್ಲೇಖಿಸಿರುವುದನ್ನು ನಾವು ಮನಗಾಣಬಹುದು.

ಮೈಸೂರು ಒಡೆಯರು ಯುದ್ಧ ಮತ್ತು ಶಾಂತಿ ಸಂದರ್ಭಗಳಲ್ಲಿ ಬಳಕೆಯಾಗುವಂತೆ ಸುವ್ಯವಸ್ಥಿತವಾದ ಸೈನ್ಯವನ್ನು ಹೊಂದಿದ್ದರು. ದಳವಾಯಿಗಳ ಕಾಲಾವಧಿಯಲ್ಲಿ ಸೈನ್ಯವನ್ನು ಕಲೆಹಾಕಿ ಒಗ್ಗೂಡಿಸುವುದು ಮೈಸೂರು ಒಡೆಯರಿಗೆ ಒಂದು ದೊಡ್ಡ ಸವಾಲಾಗಿ ಪರಿಣಮಿಸಿತು. ಏಕೆಂದರೆ ದಳವಾಯಿಗಳು ರಾಜರ ಅಧಿಕಾರದ ಲೋಪದೋಷಗಳನ್ನು ಮತ್ತು ಅವರ ಅಸಮರ್ಥತೆಯನ್ನು ಸಂಪೂರ್ಣವಾಗಿ ಬಳಸಿಕೊಂಡು ಅವನನ್ನು ಕೇವಲ ನಾಮಮಾತ್ರ ಅರಸನನ್ನಾಗಿ ಆಡಳಿತದ ಸಮಸ್ತ ಅಧಿಕಾರವನ್ನು ತಮ್ಮಲ್ಲಿಯೇ ಕೇಂದ್ರೀಕರಿಸಿಕೊಂಡಿದ್ದರು. ಮುಂದೆ ಈ ದಳವಾಯಿಗಳ ವಿರುದ್ಧವಾಗಿ ಧ್ವನಿಯೆತ್ತುವ ಸಾಮರ್ಥ್ಯಗಳು ಆ ಕಾಲದ ಮೈಸೂರಿನ ಯಾವ ಅರಸರಿಗೂ ಇರಲಿಲ್ಲ. ಅದಕ್ಕೆ ಕಾರಣವೆಂದರೆ ದಳವಾಯಿಗಳು ಮೈಸೂರು ಅರಸು ಮನೆತನದ ರಕ್ತಸಂಬಂಧಿಗಳಾಗಿದ್ದು ಅವರನ್ನು ಪ್ರಶ್ನಿಸುವ ಅರಸು ಮನೆತನ ಮತ್ತು ಆತನ ಮಂತ್ರಿಮಂಡಲದವರನ್ನು ಸಂಚಿನಿಂದ ಕೊಲೆಮಾಡುವ ಕಾರ್ಯಗಳಿಂದ ಪ್ರೇರಿತರಾದರು. ಆದರೂ ಇಂತಹ ಭಿನ್ನಮತ ಸಂದರ್ಭಗಳಲ್ಲಿ ಸೈನ್ಯವನ್ನು ಒಂದುಗೂಡಿಸಿ ಶಸ್ತ್ರಾಸ್ತ್ರಗಳ ಸಂಗ್ರಹಣೆ ಮಾಡಿ ಯುದ್ಧಗಳು ಮತ್ತು ಹೋರಾಟದ ಸಂದರ್ಭಗಳಲ್ಲಿ ಆಯುಧಗಳ ಬಳಕೆ ಹಾಗೂ ಅವುಗಳನ್ನು ಸಂಗ್ರಹಿಸುವಂತಹ ಕಾರ್ಯಗಳನ್ನು ಮಾಡುವುದು ದುಸ್ತರವಾಗಿದ್ದಿತು. ಏಕೆಂದರೆ ಪ್ರತಿಯೊಂದು ಕಾರ್ಯಗಳಿಗೂ ಸರ್ವಾಧಿಕಾರಿಗಳಾಗಿದ್ದ ದಳವಾಯಿಗಳ ಅನುಮತಿಯು ಕಡ್ಡಾಯವಾಗಿದ್ದು ಸೈನಿಕರ ತರಬೇತಿ, ವೇತನ ಮತ್ತು ನಿವೃತ್ತಿ ವೇತನಗಳನ್ನು ನೀಡುವ ಕಾರ್ಯಗಳೂ ಸಹ ಅರಸನಿಗೆ ಸೇರಿದ್ದಿತು. ಇಂತಹ ಒತ್ತಡದ ಸಂದರ್ಭಗಳಲ್ಲಿ ಸೈನ್ಯವನ್ನು ಕ್ರಿಯಾಶೀಲವಾಗಿ ಇರುವಂತೆ ಮಾಡುವ ಕಾರ್ಯಗಳು ಅರಸನಿಗೆ ಸೇರಿದ್ದಂತಹ ಜವಾಬ್ದಾರಿಯುತ ಕೆಲಸಗಳಾಗಿದ್ದವು.

ಉನ್ನತ ಅಧಿಕಾರದಲ್ಲಿದ್ದ ರಾಜನು ಸಾರ್ವಭೌಮನಾಗಿದ್ದ ಕ್ರಿ.ಶ.೧೩೯೯ ರಿಂದ ೧೬೧೭ರ ವರೆಗೆ ಅರಸನೇ ರಾಜ್ಯದ ಜವಾಬ್ದಾರಿಯ ಜೊತೆಗೆ ಸೈನ್ಯಾಧಿಕಾರದ ಕರ್ತವ್ಯವನ್ನು ಕೂಡ ನಿರ್ವಹಿಸಬೇಕಿತ್ತು. ಆದರೆ ಕ್ರಿ.ಶ.೧೬೩೮ರಲ್ಲಿ ಕಂಠೀರವ ನರಸರಾಜ ಒಡೆಯರು ಅಧಿಕಾರಕ್ಕೆ ಬಂದ ತರುವಾಯವೇ ರಾಜ್ಯದ ಮೇಲೆ ಬಿಜಾಪುರದ ಸೈನಿಕರು ದಾಳಿಮಾಡಿದರು. ಈ ಯುದ್ಧದಲ್ಲಿ ರಣದುಲ್ಲಾಖಾನನು ಸೋತು ಪಲಾಯನ ಮಾಡಿದ ವಿಷಯವನ್ನು ತಿಳಿದ ತಿರುಚನಾಪಳ್ಳಿಯ ಅರಸನು ರಹಸ್ಯವಾಗಿ ತನ್ನ ಕಡೆಯ ೨೫ಜನ ಸೇವಕರಿಗೆ ಶ್ರೀರಂಗಪಟ್ಟಣದ ದೊರೆಯ ತಲೆಯನ್ನು ತನ್ನಿ ಎಂದು ಆಜ್ಞಾಪಿಸಿದನು. ಒಂದುದಿನ ರಾತ್ರಿವೇಳೆಯಲ್ಲಿ ಆ ೨೫ ಜನ ಸೈನಿಕರು ಶ್ರೀರಂಗಪಟ್ಟಣದ ಅರಮನೆಗೆ ಸಂಚಿನಿಂದ ಧಾವಿಸಿದ ಅವರೆಲ್ಲರೂ ಏಕಾಏಕಿ ಅರಸರ ಮೇಲೆರಗಿದರು. ಕಂಠೀರವ ನರಸರಾಜ ಒಡೆಯರು ಅವರೊಡನೆ ಹೋರಾಡಿ ಅವರನ್ನು ತಮ್ಮ

ಚಾಕಚಕ್ಯತೆಯಿಂದ ಕೊಂದರು. ಅಲ್ಲದೆ ತಮ್ಮ ರಾಜ್ಯದ ಮೇಲೆ ಅನ್ಯರ ಆಕ್ರಮಣಗಳು, ದಾಳಿಗಳು ನಡೆಯದಂತೆ ಅವುಗಳಿಂದ ರಾಜ್ಯಧಾನಿಯನ್ನು ರಕ್ಷಿಸಲು ಶ್ರೀರಂಗಪಟ್ಟಣದ ಕೋಟೆಯಲ್ಲಿ ಫಿರಂಗಿಗಳನ್ನಿರಿಸಿ ಅವುಗಳಿಗೆ ಅಗತ್ಯವಾದ ಮದ್ದುಗುಂಡುಗಳನ್ನು ತಯಾರಿಸಿ ಅವುಗಳನ್ನು ಸದಾ ಯುದ್ಧ ಸನ್ನಧವಾಗಿರುವಂತೆ ನೋಡಿಕೊಂಡರು. ಅಲ್ಲದೆ ಇವರು ತಮ್ಮ ಜೀವಿತದ ಬಹುಭಾಗವನ್ನು ಯುದ್ಧಗಳಲ್ಲೇ ಕಳೆಯಬೇಕಾಯಿತು. ದೊಡ್ಡದೇವರಾಜ ಒಡೆಯರು(ಕ್ರಿ.ಶ.೧೬೫೯–೧೬೭೩) ತಾವು ಶತ್ರುಗಳಿಂದ ವಶಪಡಿಸಿಕೊಂಡ ವಿವಿಧ ರೀತಿಯ ವಸ್ತ್ರಾಭರಣಗಳು ಮತ್ತು ಅಪಾರವಾದ ಸಂಪತ್ತನ್ನು ದಾನ, ಧರ್ಮ ಮತ್ತು ದೇವತಾ ಸೇವೆಗಳಿಗೆ ಮೀಸಲಾಗಿರುವಂತೆ ನೋಡಿಕೊಳ್ಳಲು ಅಧಿಕಾರಿಗಳಿಗೆ ಆದೇಶ ಮಾಡಿದರು.[೧೩] ಇದಕ್ಕೆ ಕಾರಣವೆಂದರೆ ಸಂಪತ್ತು ಕೇವಲ ಅರಸನಲ್ಲಿ ಮಾತ್ರ ಒಗ್ಗೂಡದೆ ತಮ್ಮ ಪ್ರಜೆಗಳು, ಅಧಿಕಾರಿಗಳು, ಮತ್ತು ಸೈನಿಕರಲ್ಲಿ ಸೇರಬೇಕೆಂಬ ಉದ್ದೇಶವಿರಬಹುದು. ಇವರು ತಮ್ಮ ಹದಿಮೂರುವರೆ ವರ್ಷಗಳ ಆಳ್ವಿಕೆಯಲ್ಲಿ ೭ ಜನ ದಳವಾಯಿಗಳನ್ನು ಬದಲಾಯಿಸಿದರು.[೧೪] ದಳವಾಯಿಗಳು ಅಧಿಕಾರದ ದುರುಪಯೋಗವನ್ನು ಮಾಡಿಕೊಳ್ಳಬಹುದೆಂಬ ಮುಂದಾಲೋಚನೆಯೇ ಆಗಿರಬೇಕು. ಏಕೆಂದರೆ ದಳವಾಯಿ ಬೆಟ್ಟದರಸು ವಿಕ್ರಮರಾಯನು ಅರಸರಿಗೆ ವಿಷಪ್ರಾಸನ ಮಾಡಿಸಿದ್ದೇ ಈ ಬದಲಾವಣೆಗೆ ಕಾರಣವೆಂದು ತೋರುತ್ತದೆ.

ಚಿಕ್ಕದೇವರಾಜ ಒಡೆಯರು (ಕ್ರಿ.ಶ.೧೬೭೩–೧೭೦೪) ಮೈಸೂರಿನ ಸಿಂಹಾಸನವೇರಿದ ಕೆಲದಿನಗಳಲ್ಲಿಯೇ ಹಲವಾರು ಯುದ್ಧಗಳಲ್ಲಿ ಪಾಲ್ಗೊಂಡು ಜಯಶಾಲಿಯಾದರು. ಕ್ರೂರ ದಾಳಿಗಳಿಗೆ ಹೆಸರಾಗಿದ್ದ ಮೊಘಲರು ಮೈಸೂರಿನ ಮೇಲೆ ದಾಳಿಮಾಡುವ ಮುನ್ಸೂಚನೆ ಕಂಡುಬಂದಾಗ ಅವರೊಂದಿಗೆ ಒಪ್ಪಂದವನ್ನು ಮಾಡಿಕೊಂಡು ಚಾಣಾಕ್ಷತೆಯಿಂದ ಸಂಧಾನವನ್ನು ಬಯಸಿದರು. ಅಲ್ಲದೆ ಮೈಸೂರಿನಲ್ಲಿ ಕೋಟೆಯ ಮೇಲೆ ಫಿರಂಗಿಗಳನ್ನು ರಕ್ಷಣೆಯ ದೃಷ್ಟಿಯಿಂದ ಇರಿಸಿದರು. ಇವರು ಹೊಸದಾಗಿ ೧೨,೦೦೦ ಅಶ್ವದಳ, ಒಂದುಲಕ್ಷ ಕಾಲ್ದಳ ಅದಕ್ಕೆ ತಕ್ಕ ಕಾಮಾಟಿಗಳು, ಕಲಾಸಿಗಳು, ಶಸ್ತ್ರಾಸ್ತ್ರಗಳಾದ ಫಿರಂಗಿ, ತುಪಾಕಿ, ಕತ್ತಿ, ಕಠಾರಿ, ಗುರಾಣಿ, ಈಟಿ, ಮೊದಲಾದ ಆಯುಧಗಳು, ಮದ್ದುಗುಂಡುಗಳು, ಆನೆ, ಒಂಟೆ, ಎತ್ತು, ಬಂಡಿ, ಗುಡಾರ ಮುಂತಾದ ಯುದ್ಧಸಾಮಾಗ್ರಿಗಳನ್ನು ಯುದ್ಧಕ್ಕೆ ಸದಾಸಿದ್ಧವಿರುವಂತೆ ನೋಡಿಕೊಳ್ಳಲಾಯಿತು. ವಿವಿಧ ರಾಜ್ಯಗಳನ್ನು ಜಯಿಸಿದಂತೆ ಸೈನ್ಯ ಮತ್ತು ರಾಜ್ಯದ ಗಡಿಗಳ ಸುಧಾರಣೆಯು ಬಹುಮುಖ್ಯವೆಂದು ತಿಳಿದು ಶತ್ರುಗಳ ಉಪಟಳವನ್ನು ಕಡಿಮೆ ಮಾಡಲು ವಿವಿಧ ಅಧಿಕಾರಿಗಳನ್ನು ನೇಮಿಸಲಾಯಿತು. ತಮ್ಮ ಕಾಲದಲ್ಲಿ ಶತ್ರುಗಳ ಉಪಟಳ ಹೆಚ್ಚಾದ್ದರಿಂದ ಸುಬೇದಾರ, ಗುಮಾಸ್ತ, ರಾಯಬಾರಿ, ಗೂಢಾಚಾರ ಮೊದಲಾದ ಗಡಿಗಳ ರಕ್ಷಣಾ ಜನರನ್ನು ನೇಮಿಸಿದರು. ಇದಷ್ಟೇ ಅಲ್ಲದೆ ತೂಕ, ಅಳತೆಗಳನ್ನು ಪರಿಶೀಲಿಸಿ ಗ್ರಾಮ ಸೇವಕರ ನೇಮಕ ಮಾಡುವಾಗ ಅವರಿಗೆ ವೇತನವನ್ನು ನೀಡುವಂತೆ ನಿರ್ಧರಿಸಲಾಯಿತು.

ಚಿಕ್ಕದೇವರಾಜ ಒಡೆಯರ ನಂತರದ ಕಾಲಾವಧಿಯಲ್ಲಿ ಅರಸನು ಕೇವಲ ನಾಮಮಾತ್ರ ಅಧಿಕಾರಿಯಾಗಿ ಹೆಸರಿಗಷ್ಟೇ ತನ್ನ ಅಧಿಕಾರವನ್ನು ಚಲಾಯಿಸುತ್ತಿದ್ದನು. ಈ ಸರ್ವಾಧಿಕಾರಿ

ಆಳ್ವಿಕೆಯು ದಳವಾಯಿ ದೇವರಾಜಯ್ಯನ ಕಾಲದಿಂದ ಹಿಡಿದು ಟಿಪ್ಪೂಸುಲ್ತಾನನ ಕಾಲದವರೆಗೆ ಮುಂದುವರೆಯಿತು. ಈ ಸಂದರ್ಭದಲ್ಲಿ ಹೈದರ್ ಅಲಿ ನಾಮಕಾವಸ್ಥೆಯಲ್ಲಿ ಅಧಿಕಾರದಲ್ಲಿದ್ದ ಅರಸರಿಗೆ ಮಾತ್ರ ನಿಷ್ಠನಾಗಿದ್ದು ದಳವಾಯಿಗಳ ಬದಲಿಗೆ ಆ ಸ್ಥಾನದಲ್ಲಿ ದಿವಾನರನ್ನು ನೇಮಿಸಿದನು. ಈ ಅವಧಿಯಲ್ಲಿ ದಳವಾಯಿಗಳಿಗೆ ನಿವೃತ್ತಿ ವೇತನವನ್ನು ನೀಡಿ ರಾಜ್ಯಾಡಳಿತದ ಅಧಿಕಾರ ವ್ಯಾಪ್ತಿಗೆ ಬಾರದಂತೆ ತಡೆಯುವುದೇ ಹೈದರನ ಉದ್ದೇಶವಾಗಿತ್ತೆಂದು ತೋರುತ್ತದೆ. ಕ್ರಿ.ಶ.೧೭೯೯ರ ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಮರಣಾನಂತರ ಬ್ರಿಟಿಷರು ಸಹಾಯಕ ಸೈನ್ಯಪದ್ಧತಿಗೆ ಮೈಸೂರನ್ನು ಒಳಪಡಿಸಿದರು. ಈ ಒಪ್ಪಂದದಿಂದ ಮೈಸೂರಿನ ಅರಸರು ಕೇವಲ ಹಲ್ಲುಕಿತ್ತ ಹಾವಿನಂತಾಗಿ ಬ್ರಿಟಿಷ್ ರೆಸಿಡೆಂಟರು ಮತ್ತು ಆಂಗ್ಲ ಸರ್ಕಾರದ ಹಸ್ತಕ್ಷೇಪವಿಲ್ಲದೆ ತಮ್ಮ ಅಧಿಕಾರವನ್ನು ಚಲಾಯಿಸಲು ಸಾಧ್ಯವಿರಲಿಲ್ಲ. ಸ್ವದೇಶೀಯ ಸಂಸ್ಥಾನಗಳು ಯೂರೋಪಿನ ವಸಾಹತುಶಾಹಿ ಆಡಳಿತ ಯಂತ್ರದ ಅಡ್ಡಕತ್ತರಿಯಲ್ಲಿ ಸಿಲುಕಿ ಯಾವಾಗಬೇಕಾದರೂ ತಮ್ಮ ಆಡಳಿತದ ಕೊಂಡಿಯನ್ನೇ ಕಳಚಿಕೊಳ್ಳುವ ಭೀತಿಯಿಂದ ವಿದೇಶಿಯರ ಗುಲಾಮರಂತೆ ಬದುಕಲು ಅವಕಾಶವನ್ನು ಒದಗಿಸಿತು. ಇದರಿಂದ ಸ್ವತಂತ್ರವಾಗಿ ಅಧಿಕಾರ ನಡೆಸುವುದು ದುಸ್ತರವಾಯಿತು. ಕ್ರಿ.ಶ.೧೮೮೧ರ ಮೈಸೂರು ಪುನರ್ದಾನದ ನಂತರ ಅರಸರು ತಮ್ಮ ಸ್ವ-ಇಚ್ಛೆಯಿಂದ ಆಡಳಿತ ನಿರ್ವಹಿಸಲು ಪ್ರಯತ್ನಪಟ್ಟಿತಾದರೂ ಯೂರೋಪಿಯನ್ ಸರ್ಕಾರದ ಆಜ್ಞೆಆದೇಶಗಳನ್ನು ಅರಸರು ಕಡ್ಡಾಯವಾಗಿ ಪಾಲಿಸಲೇಬೇಕಿತ್ತು. ಸೈನ್ಯದ ನಿಜವಾದ ದಂಡಾಧಿಕಾರಿಯಾಗಿ ಅರಸನು ಸಹಾಯಕ ಸೈನ್ಯಪದ್ಧತಿಯ ಕಾಲಾವಧಿಯಲ್ಲಿ ಗುಲಾಮಗಿರಿಗಿಂತ ಕೀಳಾಗಿ ಬ್ರಿಟಿಷರ ಅಧೀನದಲ್ಲಿ ಅಧಿಕಾರವನ್ನು ನಿರ್ವಹಿಸಬೇಕಿದ್ದಿತು. ತಮ್ಮ ರಾಜ್ಯದ ಸ್ವಹಿತಾಸಕ್ತಿಗೆ ವಿರುದ್ಧವಾಗಿ ಮತ್ತು ಬ್ರಿಟಿಷರ ಸಂಪತ್ತಿನ ಆಸೆಗಳನ್ನು ಈಡೇರಿಸುವ ಕಾಮಧೇನುವಾಗಿ ಮೈಸೂರು ಅರಸರು ರೂಪುಗೊಂಡಿದ್ದರು.

**೩.೧.೧. ಪಟ್ಟಾಭಿಷೇಕ**

ಈ ಮೊದಲೇ ತಿಳಿಸಿದಂತೆ ಮೈಸೂರು ಕಿರುಪಾಳೆಯಪಟ್ಟು ಕ್ರಿ.ಶ.೧೩೯೯ರಲ್ಲಿ ಯದುರಾಯನಿಂದ ಪ್ರಾರಂಭವಾಯಿತು. ಯದುರಾಯನು ಅರಸನಾಗಲು ಅವಶ್ಯಕವಾದ ಮುದ್ರೆಯುಂಗುರವನ್ನು ಕಾರುಗಳ್ಳಿಯ ಮಾರಪ್ಪ ನಾಯಕನನ್ನು ಕೊಲೆಮಾಡಿ ತನ್ನ ವಶಮಾಡಿಕೊಂಡನು. ಈ ಸಂದರ್ಭದಲ್ಲಿ ಯದುರಾಯನಿಗೆ ಪಟ್ಟಾಭಿಷೇಕವು ಬ್ರಾಹ್ಮಣರು, ನಗರವಾಸಿಗಳು, ರಾಜಪರಿವಾರದವರು, ಆಡಳಿತದ ಅಧಿಕಾರಿ ವರ್ಗದವರು ಮತ್ತು ನಿತ್ಯಸುಮಂಗಲಿಯರ ಮುಂದೆ ನೆರವೇರಿತ್ತು. ಹೀಗೆ ಯದುರಾಯನು ಮೈಸೂರಿನ ಪ್ರಥಮ ಆಡಳಿತಗಾರನಾಗಿ ಅಧಿಕಾರದ ಚುಕ್ಕಾಣಿಯನ್ನು ಹಿಡಿದನು. ಈ ಮೈಸೂರು ಪಾಳೆಯಪಟ್ಟಿನ ಗಡಿಗಳು ವಿವಿಧ ಕಾಲಮಾನಗಳಲ್ಲಿ ವಿಸ್ತರಿಸುತ್ತಾ ಹೋದಂತೆ ಅರಸರ ಸ್ಥಾನಮಾನಗಳು ಸಹ ಹೆಚ್ಚುತ್ತಾ ಹೋದವು. ಈ ವೇಳೆಯಲ್ಲಿ ಅವರ ಸ್ಥಾನಮಾನಗಳಿಗೆ ತಕ್ಕಂತೆ ಮತ್ತು ಅವರಿಗೆ ಅನುಕೂಲಕರವಾದ ರೀತಿಯಲ್ಲಿ ಒದಗುತ್ತಿದ್ದ ಸಂಪತ್ತಿನ ಬಳಕೆಯಿಂದ ಪಟ್ಟಾಭಿಷೇಕವನ್ನು ನೆರವೇರಿಸಲಾಗುತ್ತಿತ್ತು. ಪ್ರಾರಂಭದಲ್ಲಿ ವಿಜಯನಗರ ಸಾಮ್ರಾಜ್ಯದ ರಾಜಪ್ರತಿನಿಧಿಗಳಾಗಿ

ಕಾರ್ಯನಿರ್ವಹಿಸುತ್ತಿದ್ದ ಇವರು ಅವರ ಮಾದರಿಯಲ್ಲೇ ತಮ್ಮ ರಾಜ್ಯದ ಆಳ್ವಿಕೆಯನ್ನು ಮುಂದುವರೆಸಿದರು. ಮೈಸೂರು ಅರಸರ ಕಾಲದ ಆಡಳಿತ ಯಂತ್ರದ ಪ್ರಮುಖ ಅಂಶಗಳಾದ ಸೈನ್ಯ, ರಾಜ್ಯದ ಸಂಪತ್ತು, ಸೀಮೆಗಳ ವಿಸ್ತಾರವು ಕಾಲಮಾನಕ್ಕೆ ಮತ್ತು ಹೊಸ ಆವಿಷ್ಕಾರಗಳಿಗೆ ತಕ್ಕಂತೆ ಬದಲಾದವು. ಆದರೂ ಇವರು ವಿಜಯನಗರದ ಸಂಸ್ಕೃತಿಯ ಆಚರಣೆಯನ್ನು ಮುಂದುವರೆಸಿದರು.[೧೫] ಪ್ರಾರಂಭದಿಂದ ಕ್ರಿ.ಶ. ೧೮ನೆಯ ಶತಮಾನದವರೆಗೂ ಪಟ್ಟಾಭಿಷೇಕವನ್ನು ಕುರಿತ ಯಾವುದೇ ರೀತಿಯ ಮಾಹಿತಿಗಳು ನಮಗೆ ತಿಳಿದುಬರುವುದಿಲ್ಲ. ಈ ಹಿಂದೆ ಅರಸು ಮನೆತನಗಳಲ್ಲಿ ಪಟ್ಟಾಭಿಷೇಕವು ಒಂದು ಅತೀ ಮುಖ್ಯಕಾರ್ಯಕ್ರಮವಾಗಿತ್ತು. ಪಟ್ಟಾಭಿಷೇಕದ ನಂತರವೇ ರಾಜ್ಯದ ಪೂರ್ಣಹಕ್ಕು ಯುವರಾಜನಿಗೆ ದೊರೆತನದ ರೂಪದಲ್ಲಿ ದೊರೆಯುವಂತೆ ಮಾಡುವುದು ಇದರ ಉದ್ದೇಶ. ಮೈಸೂರು ಒಡೆಯರ ಪಟ್ಟಾಭಿಷೇಕವನ್ನು ಕುರಿತಂತೆ ಕ್ರಿ.ಶ.೧೯೧೬ರವರೆಗೆ ಕಾಲದ ಸಾಹಿತ್ಯ ಆಕರಗಳಲ್ಲಿ ಯಾವುದೇ ರೀತಿಯ ಮಾಹಿತಿಗಳು ನಮಗೆ ತಿಳಿದುಬರುವುದಿಲ್ಲ. ರಾಜ್ಯದ ಅಭಿಷೇಕವಾದ ನಂತರವಷ್ಟೇ ಯುವರಾಜ ಅಥವಾ ರಾಜಕುಮಾರನು ರಾಜನೆಂದು ಕರೆಯಲ್ಪಡುವನು. ಇಲ್ಲದಿದ್ದರೆ ಅವನಿಗೆ ರಾಜ್ಯದ ಯಾವುದೇ ರೀತಿಯ ಹಕ್ಕು ದೊರೆಯುವುದಿಲ್ಲ. ರಾಜ್ಯದ ಅಭಿಷೇಕವು ಅರಸು ಮನತನೆದವರ ಸಾಮಂತರು, ಗುರುಗಳು, ದಳವಾಯಿಗಳು ಪ್ರಧಾನಿಗಳು ಹಾಗೂ ಪ್ರಮುಖ ಮುಖಂಡರುಗಳ ಸಮ್ಮುಖದಲ್ಲಿ ಅರಮನೆ ಒಳಗಾಗಲೀ ಅಥವಾ ಹೊರಗಾಗಲೀ ನಡೆಯುತ್ತಿದ್ದವು. ಇವು ಅರಸನು ಪ್ರಾಪ್ತವಯಸ್ಕನಾಗಿರಬೇಕಾಗಿತ್ತು.[೧೬] ಆದರೆ ಇದಕ್ಕೆ ಅಪವಾದ ಎಂಬಂತೆ ದೊಡ್ಡಕೃಷ್ಣರಾಜ ಒಡೆಯರು(ಕ್ರಿ.ಶ.೧೭೧೪-೧೭೩೨) ಹನ್ನೆರಡು ವರ್ಷಗಳಿಗೆ ಪಟ್ಟಕ್ಕೆ ಬಂದರೆ ಇಮ್ಮಡಿ ಕೃಷ್ಣರಾಜ ಒಡೆಯರು(ಕ್ರಿ.ಶ.೧೭೩೪-೬೬) ಕೇವಲ ೬ ವರ್ಷಗಳಿಗೇ ಅಧಿಕಾರಕ್ಕೆ ಬಂದರು. ನಂಜರಾಜ ಒಡೆಯರು ನಾಲ್ಕುವರ್ಷಗಳಿಗೆ ಮೈಸೂರಿನ ಪಟ್ಟಾಭಿಷೇಕ ಹೊಂದಿದರೆ ಖಾಸಾ ಚಾಮರಾಜ ಒಡೆಯರು ಕೇವಲ ಎರಡು ವರ್ಷಗಳಿಗೆ ಮೈಸೂರಿನ ಸಿಂಹಾಸನವೇರಿದ ಅತ್ಯಂತ ಕಿರಿಯ ಅರಸರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಇವರ ನಂತರ ಅಧಿಕಾರಕ್ಕೆ ಬಂದ ಮುಮ್ಮಡಿಕೃಷ್ಣರಾಜ ಒಡೆಯರು(ಕ್ರಿ.ಶ.೧೭೯೪-೧೮೬೮) ಮಾತ್ರ ಐದನೆಯ ವರ್ಷದಲ್ಲಿ ಮೈಸೂರಿನ ಸಿಂಹಾಸನವೇರಿದರು.

ಮೈಸೂರಿನ ಅತ್ಯಂತ ಕಿರಿಯ ವಯಸ್ಸಿನ ಅರಸರೆನಿಸಿದ ಖಾಸಾ ಚಾಮರಾಜ ಒಡೆಯರನ್ನು ಪಟ್ಟಕ್ಕೆ ತರಲು ಹೈದರ್ ಅಲಿಯ ನೇತೃತ್ವದಲ್ಲಿ ಒಂದು ಯೋಜನೆಯನ್ನು ಕೈಗೊಂಡರು. ಈ ಯೋಜನೆಯ ಪ್ರಕಾರ ಕೇವಲ ಎರಡು ವರ್ಷದ ಶಿಶುವಿನ ಮುಂದೆ ಒಂದು ಕಡೆ ಆಟಿಕೆಗಳನ್ನು ಮತ್ತೊಂದೆಡೆ ಕಠಾರಿಯನ್ನು ಇಡಲಾಗಿತ್ತು. ಮಗುವನ್ನು ಆ ಎರಡೂ ವಸ್ತುಗಳಲ್ಲಿ ಯಾವುದಾದರೂ ಒಂದನ್ನು ಆಯ್ಕೆಮಾಡಿಕೊಳ್ಳಲು ಬಿಡಲಾಯಿತು. ಮಗು ಆಟಿಕೆಯನ್ನು ಆಯ್ಕೆ ಮಾಡಿಕೊಳ್ಳುವ ಬದಲು ಕಠಾರಿಯನ್ನು ಹಿಡಿದುಕೊಂಡಿದ್ದರಿಂದ ಆ ಮಗುವನ್ನೇ ಮೈಸೂರಿನ ಅರಸ ಎಂದು ಘೋಷಿಸಿದರು.[೧೭] ಮೈಸೂರು ಒಡೆಯರ ಕಾಲದ ಪಟ್ಟಾಭಿಷೇಕವನ್ನು ಕುರಿತ ಪೂರ್ಣ ಮಾಹಿತಿಯು

ನಮಗೆ ಕ್ರಿ.ಶ.೧೭೯೯ರಲ್ಲಿ ಟಿಪ್ಪುವಿನ ಮರಣಾನಂತರ ಮುಮ್ಮಡಿ ಕೃಷ್ಣರಾಜ ಒಡೆಯರ್(೧೭೯೯-೧೮೬೮) ಮೈಸೂರಿನ ಅರಸರಾಗಿ ಸಿಂಹಾಸನವೇರಿದ ಕಾಲದಲ್ಲಿ ರಚನೆಯಾದ ಸಾಹಿತ್ಯ ಆಕರಗಳಿಂದ ನಮಗೆ ಪಟ್ಟಾಭಿಷೇಕದ ಬಗ್ಗೆ ಮಾಹಿತಿಯು ತಿಳಿದುಬರುತ್ತದೆ. ಅಂದಿನ ಮುಮ್ಮಡಿ ಕೃಷ್ಣರಾಜ ಒಡೆಯರ ಪಟ್ಟಾಭಿಷೇಕವು ಈ ಕೆಳಗಿನಂತೆ ಜರುಗಿತೆಂದು ಹಲವಾರು ಸಾಹಿತ್ಯ ಆಕರಗಳು ಉಲ್ಲೇಖಿಸುತ್ತವೆ.

ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ವೃದ್ಧರಾಗಿರುವ ಸುವಾಸಿನಿಯರನ್ನು ಕರೆಸಿ ದೊರೆಗಳಿಗೆ ಮಂಗಳಸ್ನಾನವನ್ನು ಮಾಡಿಸಿದರು. ಅನಂತರ ಅರಮನೆಯ ಸಂಪ್ರದಾಯಕ್ಕೆ ಅನುಸಾರವಾಗಿ ಶ್ರೀಚಾಮುಂಡೇಶ್ವರಿ, ಜ್ವಾಲಾಮುಖಿ, ಶ್ರೀಕಂಠೇಶ್ವರ, ವೆಂಕಟರಮಣಸ್ವಾಮಿ ದೇವರುಗಳಿಗೆ ಕಾಣಿಕೆ ಕಪ್ಪಗಳನ್ನು ಕಟ್ಟಿಸಿ ಸುಮಂಗಲಿಯರಿಂದ ಪ್ರಾರ್ಥನೆಗಳನ್ನು ಮಾಡಿಸಲಾಯಿತು. ರಾಜಕುಮಾರನು ಆಭರಣಗಳಿಂದ ಅಲಂಕರಿಸಲ್ಪಟ್ಟನು. ಸಖಿಯರು ಅಂತಃಪುರದಲ್ಲಿ ನಡೆಯುವ ರಾಜೋಪಚಾರ ಸೇವೆಗಳನ್ನು ಮಾಡಿದರು. ಆ ಸಮಯದಲ್ಲಿ ದಿವಾನರಾದ ಪೂರ್ಣಯ್ಯನು ಸರದಾರರ ಅಪ್ಪಣೆಯ ಮೇರೆಗೆ ಲಕ್ಷ್ಮೀರಮಣಸ್ವಾಮಿ ದೇವಾಲಯದಲ್ಲಿ ಚಪ್ಪರ ಮೇಲುಕಟ್ಟುಗಳೊಡನೆ ಅಭಿಷೇಕ ಮಂಟಪವನ್ನು ಕಟ್ಟಿ, ಅಲಂಕರಿಸಿದ ಸಿಂಹಾಸನವನ್ನು ತರಿಸಿ ಪಟ್ಟಾಭಿಷೇಕ ಸಾಮಾಗ್ರಿಗಳನ್ನು ಸಿದ್ಧಮಾಡಿ, ಸರ್ವಜನರೂ ಬಂದು ಕಾದಿರುವಂತೆ ತಾಕೀತುಮಾಡಿಸಿದರು. ನಜರಾಬಾದು ಕೋಟೆಗೆ ಬಂದು ಸರ್ವಾಲಂಕಾರ ಭೂಷಿತರಾಗಿರುವ ದೊರೆಗಳವರಿಗೆ ಹಸ್ತಲಾಘವ ಮಾಡಿ ಪಲ್ಲಕ್ಕಿಯಲ್ಲಿ ಮುಹೂರ್ತವನ್ನು ಮಾಡಿಸಿ ಪಟ್ಟದಕತ್ತಿ ಮತ್ತು ಶಿಖಸರವನ್ನು ಇರಿಸಿ ಪಟ್ಟಕ್ಕೆ ಯೋಗ್ಯವಾದ ಕುದುರೆ, ಆನೆಗಳನ್ನು ಅಲಂಕರಿಸಿದರು. ಶ್ವೇತಛತ್ರಿ, ಉಭಯ ಚಾಮರ ಸೂರಪಾನೆ, ಅಷ್ಟಮಂಗಳ ದ್ರವ್ಯ, ಆನೆ, ಕುದುರೆ, ಧ್ವಜ, ಶಂಖ, ಚಕ್ರಾಂಕುಶ, ಹನುಮಧ್ವಜ, ಗರುಡಧ್ವಜ, ಕಂಠೀರವ ಮೊದಲಾದ ಬಿರುದುಗಳಿಂದ, ವೀಣಾವೇಣು, ಮೃದಂಗ ಮುಂತಾದ ವಿಶೇಷ ವಾದ್ಯಗಳಿಂದಲೂ ನರ್ತನ ಮಾಡುತ್ತಿರುವ ವಾರಾಂಗನೆಯರುಗಳಿಂದಲೂ, ಗಧ್ಯ, ಪದ್ಯಗಳಿಂದ ಬಿರುದಾವಳಿಗಳನ್ನು ಪಟಿಸುತ್ತಿರುವ ಹೊಗಳುಭಟರಿಂದಲೂ ರಾಜಮರ್ಯಾದೆಯಿಂದ ಲಕ್ಷ್ಮೀರಮಣ ದೇವಾಲಯಕ್ಕೆ ಕರೆದುಕೊಂಡು ಬಂದರು. ಈ ಸಂದರ್ಭದಲ್ಲಿ ಎರಡೂ ಬದಿಯಲ್ಲಿದ್ದ ಇಂಗ್ಲಿಷ್ ಅಧಿಕಾರಿಗಳು ಮತ್ತು ದೊರೆಯ ಕಡೆಯ ಸೇವಾಜನರೂ ಸಾಲಾಗಿ ನಿಂತುಕೊಂಡು ಸಲಾಮುಗಳನ್ನು ಮಾಡುವಾಗ ಕಟ್ಟಿಗೆಯವರು, ಚೋಪುದಾರರಿಂದ ಪರಾಕುಗಳು ತುಂಬಿದ್ದವು. ಜನಸಂದಣಿಯಿಂದ ಹೊಗಳಿಸಿಕೊಳ್ಳುವ ಸಂದರ್ಭದಲ್ಲಿ ಪೂರ್ಣಯ್ಯನವರು ಹಸ್ತಲಾಗವವನ್ನು ಒಪ್ಪಿಸಿ ಪಟ್ಟಾಭಿಷೇಕ ಮಂಟಪದ ಭದ್ರಾಸನ(ಸಿಂಹಾಸನ)ದಲ್ಲಿ ಮುಹೂರ್ತ ಮಾಡಿಸಿದರು.

ಈ ಶಾಸ್ತ್ರ ಸಂಪ್ರದಾಯಗಳಂತೆ ಕಂಕಣಧಾರಣೆಯು ಸಭಾಗೆ ಅನುಜ್ಞೆಯಾಗಿ ನವಗ್ರಹ ದೇವತಾರಾಧನೆ, ಅಭಿಷೇಕ, ಕಲ್ಪೋಕ್ತ ದೇವತಾಪೂಜೆ ಹವನ ಹೋಮಗಳನ್ನು ಮಾಡಿದ ಬಳಿಕ ಜನರಲ್ ಹ್ಯಾರಿಸ್, ಕರ್ನಲ್ ಕ್ಲೋಸ್, ರೀಡ್, ಮೆಕ್ಲೈಡ್ ಮೊದಲಾದವರು ತಮ್ಮ ಟೋಪಿಗಳನ್ನು ತೆಗೆದು ದೊರೆಯ ಕೈಗಳನ್ನಿಡಿದು ಸಲಾಮುಗಳನ್ನು ಮಾಡಿ ಹ್ಯಾರಿಸ್ ಮತ್ತು ಮೀರ್‌ಅಲಂ

ದೊರೆಗಳ ಕೈಯ್ಯನ್ನಿಡಿದು ಸಿಂಹಾಸನದ ಮೇಲೆ ಕೂರಿಸಿದರು. ಈ ವೇಳೆಗೆ ಅನೇಕ ಫಿರಂಗಿಗಳಿಂದ ಸಿಡಿಮದ್ದು, ಗುಂಡುಗಳನ್ನು ಹಾರಿಸಲಾಯಿತು. ಸರ್ವರೂ ಅರಸರಿಗೆ ಪುಷ್ಪಗಳನ್ನು ಅರ್ಪಿಸಿದರು. ಅನಂತರ ಪುರೋಹಿತರು, ಜೋಯಿಸರು, ಋತ್ವಿಕ್ಕುಗಳೆಲ್ಲರೂ ಸೇರಿ ಪೂಜೆಯನ್ನು ಸಲ್ಲಿಸಿದರು. ಯೋಗ್ಯವಾದ ಆನೆ, ಕುದುರೆಗಳಿಗೆ ಕೂಡ ಇದೇ ಕಾಲದಲ್ಲಿ ಪಟ್ಟಾಭಿಷೇಕ ಮಾಡಿದರು. ಜನರಲ್ ಹ್ಯಾರಿಸ್ಸನು ದೊರೆಗೆ ರತ್ನಾಭಿಷೇಕವನ್ನು ಮಾಡಿದನು. ಮದ್ರಾಸಿನಿಂದ ತಂದಿದ್ದ ಒಪ್ಪಂದದ ಕರಾರಿನ ಪ್ರತಿಯನ್ನು ಒಪ್ಪಿಸಿ ಶ್ರೀಕೃಷ್ಣರಾಜ ಒಡೆಯರೆಂಬುದಾಗಿ ಕರೆದು ಪೂರ್ಣಯ್ಯ ಮತ್ತು ಉಳಿದ ಅಧಿಕಾರಿಗಳಿಗೆ ರಾಜ್ಯದ ಆಡಳಿತವನ್ನು ಜಾಗರೂಕನಾಗಿ ಸಕಲ ಕಾರ್ಯದಲ್ಲಿಯೂ ಅನುಭವಶಾಲಿಯಾಗಿ ಹಿಂದೆ ನಡೆದ ವಿಚಾರಗಳನ್ನು ಮುಂದಿನ ವಿಚಾರಗಳನ್ನೂ ತಿಳಿದಿರುವ ಪ್ರಾಜ್ಞನಾದ ದಿವಾನ್ ಪೂರ್ಣಯ್ಯನವರನ್ನು ಸಭಾದ ಮಧ್ಯದಲ್ಲಿ ಕರೆದು ನಾವು ಈಗ ದೊರೆಗಳವರ ಸನ್ನಿಧಿಯಲ್ಲಿ ನಿನಗೆ ಮುಖ್ಯವಾದ ಮಂತ್ರಿ ಪದವಿಯನ್ನು ಕೊಡಿಸುತ್ತಿದ್ದೇವೆ. ನೀನು ಇಂದಿನಿಂದ ಸಮಸ್ತ ಕಾರ್ಯಗಳಲ್ಲಿಯೂ ಜಾಗರೂಕನಾಗಿದ್ದಕೊಂಡು ಸದಾ ದೊರೆಗಳ ಹಿತವನ್ನು ಬಯಸುತ್ತಾ ಸಂಸ್ಥಾನದ ಮರ್ಯಾದೆಯನ್ನು ಮೀರದೆ ದೊರೆಗಳಿಗೆ ಬಾಲ್ಯವಯಸ್ಸು ಮುಗಿದು ಸರ್ವಸ್ವತಂತ್ರರಾಗಿ ರಾಜ್ಯಕೋಶ ಮೊದಲಾದವುಗಳ ವಿಚಾರಣೆ ಮಾಡಿ ಅರಸರು ಪ್ರಾಪ್ತವಯಸ್ಕರಾಗುವವರೆಗೆ ನೀನೇ ಚೆನ್ನಾಗಿ ಆಡಳಿತ ಕಾರ್ಯವನ್ನು ನಿರ್ವಹಿಸಬೇಕು. ನೀನು ಈ ರೀತಿ ಬಿಟ್ಟು ಸುಲ್ತಾನನ ಮಗನಿಗೆ ಮಂತ್ರಿಪದವಿಯನ್ನು ಕೊಡಿಸುತ್ತೇನೆಂದು ಅಭಿಪ್ರಾಯಪಟ್ಟಿದ್ದ ವಿಷಯವನ್ನು ತಿಳಿದಿದ್ದರೂ ನಿನ್ನನ್ನು ಕ್ಷಮಿಸಿ ಇಲ್ಲಿ ಮಂತ್ರಿಪದವಿಯನ್ನು ಕೊಡಿಸಿದ್ದೇವೆ ಎಂದು ನಮ್ರತೆಯಿಂದಿದ್ದ ಪೂರ್ಣಯ್ಯನಿಗೆ ಹೇಳಿದನು.[೧೮]

### ೩.೧.೨. ದತ್ತು ಸ್ವೀಕಾರ

ಮೈಸೂರು ಒಡೆಯರು ಪ್ರಾರಂಭದಿಂದಲೂ ಉತ್ತಮವಾದ ಆಳ್ವಿಕೆಯನ್ನು ಮಾಡುತ್ತಾ ಬಂದಿದ್ದು, ತಮ್ಮ ಸಿಂಹಾಸನಕ್ಕಾಗಿ ಅರಸು ಮನೆತನದವರಿಂದ ಯಾವುದೇ ಕಿರುಕುಳವಿಲ್ಲದೆ ಆಡಳಿತವನ್ನು ನಿರ್ವಹಿಸುತ್ತಿದ್ದರು. ಯದುರಾಯರಿಂದ ಹಿಡಿದು ದೊಡ್ಡಕೃಷ್ಣರಾಜ ಒಡೆಯರವರೆಗೆ ಅರಸರ ಸ್ವಂತಮಕ್ಕಳು ಅಥವಾ ಅವರಿಗೆ ಮಕ್ಕಳಿರದಿದ್ದರೆ ತಮ್ಮ ಸಹೋದರರ ಮಕ್ಕಳನ್ನು ಅಧಿಕಾರಕ್ಕೆ ತರುತ್ತಿದ್ದರು. ದೊಡ್ಡಕೃಷ್ಣರಾಜ ಒಡೆಯರಿಗೆ(ಕ್ರಿ.ಶ.೧೭೧೪–೩೨) ಮಕ್ಕಳಿರದಿದ್ದರಿಂದ ಏಳನೆಯ ಚಾಮರಾಜ ಒಡೆಯರ್ ಅವರನ್ನು ದತ್ತು ತೆಗೆದುಕೊಂಡರು. ಏಳನೆಯ ಚಾಮರಾಜ ಒಡೆಯರ್ ಅವರನ್ನು ದಳವಾಯಿ ದೇವರಾಜಯ್ಯನು ಕಬ್ಬಾಳುದುರ್ಗದ ಸೆರೆಮನೆಗೆ ತಳ್ಳಿದನು. ಇಲ್ಲಿನ ಪ್ರತಿಕೂಲ ವಾತಾವರಣದಿಂದ ಚಾಮರಾಜ ಒಡೆಯರು ಅಲ್ಲಿಯೇ ಮರಣ ಹೊಂದಿದರು.[೧೯] ಇವರ ಮರಣದ ನಂತರ ಕೇವಲ ೬ ವರ್ಷಗಳ ಬಾಲಕರಾಗಿದ್ದ ಇಮ್ಮಡಿ ಕೃಷ್ಣರಾಜ ಒಡೆಯರ್ ಅವರನ್ನು ದತ್ತು ತೆಗೆದುಕೊಳ್ಳಲಾಯಿತು. ಆದ್ದರಿಂದ ಮೈಸೂರಿನ ರಾಜಕೀಯ ಇತಿಹಾಸದಲ್ಲಿ ಮೈಸೂರು ಅರಸರ ಪ್ರಥಮ ದತ್ತುಪುತ್ರರೇ ಏಳನೆಯ ಚಾಮರಾಜ ಒಡೆಯರ್ ಎಂದು ಹೇಳಬಹುದು.

ಮೈಸೂರು ಅರಸರಿಗೆ ಮಕ್ಕಳಾಗದಿರುವುದಕ್ಕೆ ನಿರ್ದಿಷ್ಟವಾದ ಕಾರಣವಿದೆ. 'ರಾಜಒಡೆಯರು ಅಧಿಕಾರಕ್ಕೆ ಬಂದಮೇಲೆ ಶ್ರೀರಂಗಪಟ್ಟಣವನ್ನು ಆಳುತ್ತಿದ್ದ ವಿಜಯನಗರದ ಕೊನೆಯ ರಾಜಪ್ರತಿನಿಧಿಯಾಗಿದ್ದ ಶ್ರೀರಂಗರಾಯನನ್ನು ಆತನ ಕೊನೆಯ ದಿನಗಳಲ್ಲಿ ತಲಕಾಡಿಗೆ ಹೋಗುವಂತೆ ಮಾಡಿ ಶ್ರೀರಂಗಪಟ್ಟಣದ ಅಧಿಕಾರವನ್ನು ವಹಿಸಿಕೊಂಡರು. ಚಾಮುಂಡಿ ಉತ್ಸವದ ವೇಳೆಗೆ ಶ್ರೀರಂಗರಾಯನ ಪತ್ನಿ ಅಲಮೇಲಮ್ಮನವರ ಬಳಿಯಿದ್ದ ಆಭರಣಗಳನ್ನು ತರುವಂತೆ ಸೇವಕರಿಗೆ ರಾಜಒಡೆಯರು ತಿಳಿಸಿದರು. ಆದರೆ ಸೇವಕರು ಆಭರಣಗಳನ್ನು ನೀಡುವಂತೆ ಬೆದರಿಸಿ ನೀಡದಿದ್ದರೆ ಶಿಕ್ಷೆಗೊಳಪಡಿಸಲಾಗುವುದು ಎಂದು ಅಲಮೇಲಮ್ಮ ಅವರಲ್ಲಿ ಭಯದ ವಾತಾವರಣವನ್ನು ನಿರ್ಮಾಣ ಮಾಡಿದರು. ಈ ಘಟನೆಯಿಂದ ವಿಚಲಿತರಾದ ಅಲಮೇಲಮ್ಮನವರು ಕೂಡಲೇ ಅರಸರನ್ನು ಕುರಿತು ಒಂದು ಶಾಪವನ್ನು ನೀಡಿದರು. ಅದರ ಸಾರಾಂಶವು ಹೀಗಿದೆ. 'ತಲಕಾಡು ಮರಳಾಗಿ ಮಾಲಂಗಿ ಮಡುವಾಗಿ ಮೈಸೂರು ದೊರೆಗೆ ಮಕ್ಕಳಾಗದಿರಲಿ'[೯] ಎಂಬುದೇ ಆಕೆ ನೀಡಿದ ಶಾಪ. ಕಾಲಕ್ರಮೇಣ ಈ ಶಾಪವು ದೊಡ್ಡಕೃಷ್ಣರಾಜ ಒಡೆಯರಿಗೆ ತಟ್ಟಿತು. ಈ ಶಾಪದ ಫಲವಾಗಿಯೇ ಮೈಸೂರು ಅರಸರಿಗೆ ಮಕ್ಕಳಾಗಲಿಲ್ಲ ಎಂಬಂತಹ ಮಾತುಗಳು ಇಂದಿಗೂ ಪ್ರಚಲಿತದಲ್ಲಿದೆ. ಆದರೆ ನಿಜವಾದ ಸಂಗತಿಯೆಂದರೆ ಅರಸರ ಮೇಲಿನ ಒತ್ತಡಗಳು ಕಾರಣವೆಂದು ಹೇಳಬಹುದು. ಏಕೆಂದರೆ ಈ ವೇಳೆಗಾಗಲೇ ಶ್ರೀರಂಗಪಟ್ಟಣ ಸುತ್ತಮುತ್ತಲಿನ ಪಾಳೆಯಗಾರರನ್ನೆಲ್ಲ ದೊಡ್ಡಕೃಷ್ಣರಾಜ ಒಡೆಯರ ಪೂರ್ವಿಕರು ತಮ್ಮ ವಶಮಾಡಿಕೊಂಡಿದ್ದರು. ಅಂತೆಯೇ ಆ ವೇಳೆಗಾಗಲೇ ಮೇಲಿಂದ ಮೇಲೆ ನಡೆದ ಮರಾಠರ ಆಕ್ರಮಣಗಳು ರಾಜಧಾನಿಯನ್ನು ತತ್ತರಗೊಳಿಸಿದ್ದವು. ಇದರಿಂದ ವಿಸ್ತಾರವಾದ ರಾಜ್ಯವನ್ನು ಶತ್ರುಗಳು ಆಕ್ರಮಣ ಮಾಡದಂತೆ ತಡೆಯುವುದು ಒಂದು ಕಡೆಯಾದರೆ, ರಾಜ್ಯದ ಹಿತಕಾಪಾಡಲು ರಾಜಧಾನಿಯ ಜೊತೆಗೆ ಪ್ರಜೆಗಳ ಯೋಗಕ್ಷೇಮವನ್ನು ವಿಚಾರಿಸುವುದರಲ್ಲಿ ಅರಸರಿಗೆ ಒತ್ತಡಗಳು ಹೆಚ್ಚಾದವು ಈ ಕಾರಣದಿಂದ ಅರಸರಿಗೆ ಮಕ್ಕಳಾಗಲಿಲ್ಲವೆಂದು ಹೇಳಬಹುದು.

ದೊಡ್ಡಕೃಷ್ಣರಾಜ ಒಡೆಯರು ಏಳನೆಯ ಚಾಮರಾಜ ಒಡೆಯರು ಮತ್ತು ಇಮ್ಮಡಿ ಕೃಷ್ಣರಾಜ ಒಡೆಯರನ್ನು ದತ್ತು ತೆಗೆದುಕೊಂಡರು. ಇದು ಮುಂದೆ ಬೆಟ್ಟದ ಚಾಮರಾಜ ಒಡೆಯರ ಕಾಲದಲ್ಲೂ ಮುಂದುವರೆಯಿತು. ಬೆಟ್ಟದ ಚಾಮರಾಜ ಒಡೆಯರ ಉತ್ತರಾಧಿಕಾರಿಯನ್ನಾಗಿ ಕೇವಲ ೨ ವರ್ಷಗಳ ಹಸುಳೆಯಾದ ಖಾಸಾ ಚಾಮರಾಜ ಒಡೆಯರನ್ನು(ಕ್ರಿ.ಶ.೧೭೭೬-೧೭೯೬) ದತ್ತು ಪಡೆಯಲಾಯಿತು. ಆದರೆ ಇವರನ್ನು ದತ್ತು ಪಡೆಯುವ ಮುಂಚೆ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ತಮ್ಮ ತಂಗಿಯ ಗಂಡನ ಮನೆಯ ಕಳಲೆಕಾಂತರಾಜಯ್ಯನ ಪುತ್ರ ನರಸರಾಜಯ್ಯ ಅಥವಾ ತಮ್ಮ ಸವತಿಯ ಮೊಮ್ಮಗ ಸಿದ್ಧರಾಜಯ್ಯನನ್ನಾಗಲೀ ದತ್ತು ತೆಗೆದುಕೊಂಡು ಪಟ್ಟಕಟ್ಟಬೇಕೆಂಬುದು ಯೋಜನೆಯಾಗಿತ್ತು. ಆದರೆ ಆ ವೇಳೆಗಾಗಲೇ ಮೈಸೂರಿನ ದಳವಾಯಿಯಾಗಿದ್ದ ಹೈದರ್ ಅಲಿಯ ಯೋಜನೆಯೇ ಬೇರೆಯಾಗಿತ್ತು. ಈತ ಸೌಂದರ್ಯವಂತರಾದ ಸದ್ಗುಣವುಳ್ಳ ಪುತ್ರರನ್ನು ಪರೀಕ್ಷಿಸಿ ಸ್ವೀಕಾರ ಮಾಡಬೇಕೆಂದು ಹೈದರ್ ಸಲಹೆ ನೀಡಿದ್ದರಿಂದ ವಕ್ರವಾದ, ಕುಂಟುಕಾಲುಳ್ಳ

ಒಂದು ಮಗು ಮತ್ತು ಶ್ವೇತ ಕುಷ್ಠರೋಗವುಳ್ಳ ಮತ್ತೊಂದು ಮಗುವನ್ನು ಬಿಡಲಾಯಿತು. ತರುವಾಯ ಶ್ರೀರಂಗಪಟ್ಟಣದ ದೊರೆಗಳ ಬಂಧುಗಳ ಅರಸು ಮಕ್ಕಳನ್ನು ಕರೆಸಿ ಒಂದೆಡೆ ತಿಂಡಿತಿನಿಸುಗಳು, ಮತ್ತೊಂದೆಡೆ ಆಭರಣ ಮತ್ತು ವಸ್ತ್ರಗಳನ್ನು, ಮಗದೊಂದೆಡೆ ಆಟದ ಪದಾರ್ಥಗಳನ್ನು, ಬೇರೊಂದೆಡೆ ಕಠಾರಿ, ಕನ್ನಡಿಗಳನ್ನು ಇರಿಸಿದರು. ನೀವುಗಳು ಭಯಪಡದೆ ಯಾವ ವಸ್ತುಗಳು ಬೇಕೋ ಅವುಗಳನ್ನು ಆಯ್ಕೆಮಾಡಿಕೊಳ್ಳಿ ಎಂದುಹೇಳಿದಾಗ ಮಕ್ಕಳು ತಮಗೆ ಸಿಕ್ಕವಸ್ತುಗಳನ್ನು ತೆಗೆದುಕೊಂಡರು. ಆದರೆ ಅರಿಕುಠಾರದ ದೇವರಾಜ ಅರಸರ ಮಗ ಚಾಮರಾಜ ಎಂಬ ಮೂರು ವರ್ಷಗಳ ಅಲ್ಲರಿಸಿದ್ಧ ಎಂಬ ಬಾಲಕನು ಕಠಾರಿ ಮತ್ತು ಕನ್ನಡಿಗಳನ್ನು ತೆಗೆದುಕೊಂಡಿದ್ದರಿಂದ ಆ ಬಾಲಕನೇ ರಾಜ್ಯವಾಳಲು ಸೂಕ್ತವೆಂದು ಭಾವಿಸಿ ಆತನನ್ನೇ ದತ್ತು ತೆಗೆದುಕೊಂಡರು.[೨೦] ಹೀಗೆ ಪ್ರಾರಂಭವಾದ ದತ್ತು ಪ್ರಕ್ರಿಯೆ ಪ್ರಸ್ತುತದವರೆಗೂ ಸಾಗಿದೆ. ಒಂದು ಕಡೆ ಅಲಮೇಲಮ್ಮನು ಮೈಸೂರು ದೊರೆಗಳಿಗೆ ಮಕ್ಕಳಾಗದಿರಲೆಂದು ನೀಡಿದ ಶಾಪವು ಕೂಡ ಸಿಂಹಾಸನವೇರಿದ ಮೈಸೂರು ದೊರೆಗೆ ಗಂಡು ಸಂತಾನವಾಗುವುದಿಲ್ಲ ಎಂಬ ಐತಿಹ್ಯವಿದೆ. ಆದ್ದರಿಂದ ಮೈಸೂರು ಅರಸರು ತಮ್ಮ ರಕ್ತಸಂಬಂಧಿಗಳಲ್ಲಿ ದತ್ತುಪಡೆಯುವ ಪ್ರಕ್ರಿಯೆಯನ್ನು ಮುಂದುವರೆಸಿದ್ದಾರೆ.

**೩.೧.೩. ದಸರಾ ಉತ್ಸವಗಳಲ್ಲಿ ಅರಸ**

ಮೈಸೂರು ಅರಸರು ವಿಜಯನಗರದ ಸಾಂಸ್ಕೃತಿಕ ಪ್ರತಿನಿಧಿಗಳಾಗಿ ಮುಂದುವರೆದಿದ್ದಾರೆ. ಏಕೆಂದರೆ ವಿಜಯನಗರದ ಅರಸರು ನಡೆಸಿಕೊಂಡು ಬರುತ್ತಿದ್ದ ನವರಾತ್ರಿ ಉತ್ಸವವನ್ನು ರಾಜಒಡೆಯರ್ ಕ್ರಿ.ಶ.೧೬೧೦ರಲ್ಲಿ ಪ್ರಾರಂಭಿಸಿದರು. ಇದು ಮುಂದಿನ ದಿನಗಳಲ್ಲಿ ದಸರಾ ಉತ್ಸವ ಎಂದು ಹೆಸರಾಯಿತು. ತಾವು ವಿಜಯನಗರ ಅರಸರ ಸಾಮಂತರೆಂದು ತೋರ್ಪಡಿಸುವುದರ ಜೊತೆಗೆ ತಮ್ಮ ಪ್ರಜೆಗಳಿಗೆ ಸೈನ್ಯ ಬಲವನ್ನು ಪ್ರದರ್ಶಿಸುವ ಉದ್ದೇಶವಾಗಿರಬಹುದು. ಪ್ರಾರಂಭದಲ್ಲಿ ನವರಾತ್ರಿ ಉತ್ಸವವಾಗಿದ್ದ ಇದು, ಇಂದು ನಾಡಹಬ್ಬ ದಸರಾ ಎಂಬ ಹೆಸರಿನಿಂದ ಪ್ರಸಿದ್ಧಿಯಾಗಿದೆ. ದಸರಾ ಎಂಬ ಪದವು ಸಂಸ್ಕೃತದ ಮೂಲರೂಪವಾಗಿದೆ. 'ದಶ' ಎಂದರೆ ಹತ್ತು, ಅಹರ್ ಎಂದರೆ ದಿನವೆಂದು ಅರ್ಥವಿದೆ. ಒಟ್ಟಿನಲ್ಲಿ ಹತ್ತುದಿನಗಳ ಅಥವಾ ಹತ್ತನೆಯ ದಿನದ ಉತ್ಸವವನ್ನು ದಸರಾ ಎಂದು ಕರೆಯುತ್ತಾರೆ. ದಸರಾ, ದುರ್ಗಪೂಜಾ, ನವರಾತ್ರಿ ಮುಂತಾದ ಹೆಸರುಗಳಿಂದ ಈ ಆಚರಣೆಯನ್ನು ಹೆಸರಿಸಲಾಗುತ್ತದೆ. ಮೊದಲನೆಯ ಒಂಬತ್ತು ದಿನಗಳ ಪೂಜೆ ಆಚರಣೆಯ ಒಂದುಭಾಗ ಹಾಗೂ ಹತ್ತನೆಯ ದಿನದ ವಿಜಯೋತ್ಸವ ಆಚರಣೆಯ ಎರಡನೆಯ ಅಂಗ. ಒಂಬತ್ತು ದಿನಗಳ ಆಚರಣೆಯು ಸಾತ್ವಿಕತೆಯ ಧಾರ್ಮಿಕ ವಿಧಿ–ವಿಧಾನಗಳ ರೀತಿಯಲ್ಲಿ ನಡೆದರೆ, ಹತ್ತನೆಯ ದಿನದ ಉತ್ಸವವು ಸಾರ್ವಜನಿಕವಾಗಿ ನೆರವೇರುತ್ತದೆ. ನವರಾತ್ರಿಯನ್ನು ಚಾಂದ್ರಮಾನ ಪಂಚಾಂಗದ ಗಣನಾರೀತ್ಯ ಆಶ್ವಯುಜ ಮಾಸದ ಶುಕ್ಲಪಕ್ಷದ ಪಾಡ್ಯದಿಂದ ನವಮಿಯವರೆಗೆ ಈ ಉತ್ಸವವನ್ನು ಆಚರಿಸುತ್ತಾರೆ. ನವಮಿಯ ಮಾರನೆಯ ದಿನವಾದ ದಶಮಿಯಂದು ವಿಜಯೋತ್ಸವವನ್ನು ಆಚರಿಸುತ್ತಾರೆ.[೨೧] ಈ ವಿಜಯೋತ್ಸವವು

ದೇವದಾನವರ ಯುದ್ಧದಲ್ಲಿ ದೇವತೆಗಳ ವಿಜಯದ ಪ್ರತೀಕವೆಂದು ತಿಳಿದುಬರುತ್ತದೆ. ಅದರಲ್ಲೂ ರಾಮರಾವಣ ಮಹಿಷಾಸುರ ದುರ್ಗೆಯ ವಿಜಯವಾಗಿದೆ.

ರಾಮಾಯಣದಲ್ಲಿ ಬರುವ ರಾಮ-ರಾವಣರ ಯುದ್ಧದ ಸಂದರ್ಭದಲ್ಲಿ ರಾಮನು ದುರ್ಗೆಯನ್ನು ಆರಾಧಿಸಿ ಆಕೆಯ ನೆರವನ್ನು ಕೋರಿ ಸಹಾಯವನ್ನು ಪಡೆದಿದ್ದು ಉಲ್ಲೇಖವಿದೆ. ಹಾಗೆಯೇ ಮಹಾಭಾರತದಲ್ಲಿ ಪಾಂಡವರು ಅಜ್ಞಾತವಾಸ ಮುಗಿದ ಬಳಿಕ ಕೌರವರ ವಿರುದ್ಧ ವಿರಾಟರಾಜನ ಪರವಾಗಿ ಹೋರಾಡಿ ಆಯುಧಗಳನ್ನು ಪೂಜಿಸುವ ಉಲ್ಲೇಖಗಳು ನಮಗೆ ಮಹಾಭಾರತದಿಂದ ತಿಳಿದುಬರುತ್ತದೆ. ರಾಜಒಡೆಯರ್ ಕ್ರಿ.ಶ.೧೬೧೦ರಲ್ಲಿ ನವರಾತ್ರಿ ಉತ್ಸವವನ್ನು ಪ್ರಾರಂಭಿಸಿದಾಗ ರಾಜತ್ವದ ಪ್ರತಿಭೆಯನ್ನು ಇದು ಅಧಿಕಗೊಳಿಸಿತು. ಈ ಆಚರಣೆಯನ್ನು ವಂಶಪಾರಂಪರ್ಯವಾಗಿ ನಡೆಯುವಂತೆ ವಿವರಗಳನ್ನು ಬರೆಸಿ ನಿಬಂಧನೆಯನ್ನು ಮಾಡಿದರು. ಇವರ ಕಾಲದಲ್ಲಿ ಶಾಸ್ತ್ರೋಕ್ತವಾಗಿ ದುರ್ಗೆಯನ್ನು ಆರಾಧಿಸಿ ಕಾಳಿಕಾ ಪುರಾಣದಲ್ಲಿ ಉಲ್ಲೇಖವಿರುವ ಪ್ರಕಾರ ಸಿಂಹಾಸನವನ್ನು ಪೂಜಿಸಿ ಸಿಂಹಾಸನವನ್ನು ಏರಿದರು. ತಮ್ಮ ಪುತ್ರರು, ಪಾಳೆಯಗಾರರೂ, ಅಧಿಕಾರಿಗಳೂ ಅವರವರ ಮರ್ಯಾದೆಗಳಿಗೆ ಅನುಗುಣವಾಗಿ ಕಾಣಿಕೆಗಳನ್ನು ತಂದು ಒಪ್ಪಿಸಿದರು. ಪಟ್ಟದ ಆನೆ, ಕುದುರೆಗಳು ವಂದನೆಗಳನ್ನು ಸಲ್ಲಿಸಿದ ನಂತರ ಜನರೊಪ್ಪಿಸಿದ ಕಾಣಿಕೆಗಳನ್ನು ಅರಸರು ಸ್ವೀಕರಿಸಿ ಸಿಂಹಾಸನದಿಂದ ಕೆಳಗಿಳಿದರು. ದೊರೆಗಳು ಪ್ರಾತಃಕಾಲದಂತೆ ಒಡ್ಡೋಲಗವನ್ನು ಕೈಗೊಳ್ಳುವಾಗ ತಮ್ಮ ಅಳಿಯಂದಿರು ಪಾಳೆಯಗಾರರೂ ಸೆಟ್ಟೆಯಿಂದ ಇಳಿದು ಕೈಯಲ್ಲಿ ಖಡ್ಗವನ್ನಿಡಿದು ಕೆಮ್ಮಣ್ಣು ಮಟ್ಟಿಯಲ್ಲಿ ನಿಂತು ತಮ್ಮ ಮರ್ಯಾದೆಗೆ ಸಲಾಂ ಮಾಡಿದರು. ಅನಂತರ ಒಂದು ಕಡೆ ಜಟ್ಟಿಕಾಳಗವನ್ನು, ಮತ್ತೊಂದು ಕಡೆ ಟಗರು, ಕೋಣ ಮೊದಲಾದವುಗಳ ಕಾಳಗವನ್ನೂ ವೀಕ್ಷಿಸಿದರು. ಮಹಾನವಮಿಯ ದಿನ ಪಟ್ಟದಕತ್ತಿಗೆ ಪೂಜೆಮಾಡಿ, ಗಜಾಶ್ವಗಳಿಗೂ ಪೂಜೆಮಾಡಿದರು. ದಶಮಿಯ ದಿನದಂದು ಸರಸ್ವತಿ ದೇವಿಗೆ ಪೂಜೆಯನ್ನು ಸಲ್ಲಿಸಿದ ನಂತರ ಆಯುಧ ಪೂಜೆಮಾಡಿ ಆಯುಧಗಳಿಗೆ ಬಲಿಯ ರೂಪದಲ್ಲಿ ಕೂಷ್ಮಾಂಡವನ್ನು ಕತ್ತರಿಸಿ, ಜಟ್ಟಿಗಳಿಂದ ವಜ್ರಮುಷ್ಠಿ ಕಾಳಗವನ್ನು ಮಾಡಿಸಿದರು. ಈ ಕಾಳಗ ಮುಗಿದ ಕೂಡಲೇ ಪಟ್ಟದಾನೆ ಮತ್ತು ಕುದುರೆ ಹಾಗೂ ಸೈನ್ಯ ಸಮೇತ ಬನ್ನಿಮಂಟಪ ಪೂಜೆಯನ್ನು ಮುಗಿಸಿ ಅರಮನೆಗೆ ವಾಪಸ್ಸಾದರು.[೨೧]

ಕಂಠೀರವ ನರಸರಾಜ ಒಡೆಯರು ಕ್ರಿ.ಶ.೧೬೪೭ರಲ್ಲಿ ಆಚರಿಸಿದ ದಸರಾ ವರ್ಣನೆಯನ್ನು ಗೋವಿಂದ ವೈದ್ಯನು ತನ್ನ ಕೃತಿಯಾದ ಕಂಠೀರವ ನರಸರಾಜ ವಿಜಯಂನಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. ಗಜ, ಅಶ್ವಲಾಯಗಳು ಮತ್ತು ದಿವ್ಯಾಯುಧಗಳನ್ನು ಪೂಜಿಸುವ ಭದ್ರಭುವನಗಳು ಅಲಂಕಾರಗೊಂಡಿದ್ದವು. ಈ ಉತ್ಸವಕ್ಕೆ ಆಮಂತ್ರಣ ಸ್ವೀಕರಿಸಿದ್ದ ನರಸಿಂಹಪುರದ ಅರಸ, ಬೇಲೂರಿನ ನೃಪ, ಕುಣಿಗಲಿನ ಅರಸ, ಮಾಗಡಿಯ ಅಧಿಪತಿ, ನಂಜರಾಜಪಟ್ಟಣದ ರಾಜ, ಮಲೆಯೊಳದ ಅವನೀಶ, ತಂಜಾವೂರಿನ ಪ್ರಧಾನಮಂತ್ರಿಗಳು, ಮಧುರೆಯ ತಿರುಮಲೇಂದ್ರನ ಮಂತ್ರಿ, ತೆಂಜೆ(ಜಿಂಜಿ), ಇಕ್ಕೇರಿ ಮೊದಲಾದ ಪ್ರದೇಶಗಳನ್ನಾಳುವ ಅಧಿಪತಿಗಳು ಉಡುಗೊರೆಯ ಸಮೇತ ಮಹಾನವಮಿ ಉತ್ಸವಕ್ಕೆ ಆಗಮಿಸಿದ್ದರು.[೨೨] ಮೈಸೂರು ಅರಸರ ಆಶ್ರಯ ಬಯಸಿಬಂದ

ಅರಸರು ಮತ್ತು ಕೆಲವು ಮನ್ನೆಯರುಗಳಿಗೆ ಸನ್ಮಾನವೇರ್ಪಟ್ಟವು. ಕಂಠೀರವ ನರಸರಾಜನು ಹೊಳೆಯುವ ಪಲ್ಲಕ್ಕಿಯನ್ನೇರಿ ಮೊಳಗುವ ವಾದ್ಯಘೋಷಗಳೊಂದಿಗೆ ಮಕರಟಕ್ಕೆ, ಶಂಖ, ಚಕ್ರದ ಬಿರುದಿನ ಸಾಲಧ್ವಜಗಳ ಮೆರವಣಿಗೆಯ ಸಂಭ್ರಮದಲ್ಲಿ ಬಿರುದುಗಳನ್ನು ಹೊಗಳುವ ಭಟರೊಂದಿಗೆ ತಮ್ಮ ಆಸ್ಥಾನಕ್ಕೆ ಆಗಮಿಸಿದರು. ಉತ್ಸವದಲ್ಲಿ ಭಾಗವಹಿಸಿದ್ದ ಪಾಳೆಯಗಾರರಿಂದ ಕಪ್ಪಕಾಣಿಕೆಗಳನ್ನು ಸ್ವೀಕರಿಸಿ ವಜ್ರಮುಷ್ಠಿ ಕಾಳಗವನ್ನು ವೀಕ್ಷಿಸಿದರು. ಆಯುಧಪೂಜೆಯಲ್ಲಿ ಖಡ್ಗ, ಅಂಬು, ಸಿಂಗಾಡಿ, ಜವದಾಡೆ, ದಿವ್ಯಸುರಗಿ, ಚಿಕ್ಕಕಠಾರಿ, ಕರಾಚೂರಿ, ಸುರಗಿ, ಸಬಲ, ಕೈಯಟ್ಟಿಗಳೆಂಬ ಆಯುಧಗಳ ಜೊತೆಗೆ ಯುದ್ಧಗಳಲ್ಲಿ ಶತ್ರುಗಳಿಂದ ವಶಪಡಿಸಿಕೊಂಡ ಆಯುಧಗಳನ್ನು ಸಹ ಪೂಜಿಸಿದರು.[೨೩] ವಿಜಯದಶಮಿಯ ದಿನದಂದು ಅಶ್ವದಳ, ಗಜಸೇನೆಗಳೊಂದಿಗೆ ಮಕರಟಕ್ಕೆ, ಚಾಮರ, ಚಿನ್ನದ ಹಡಪ, ಕುಂಚ, ಕಾಳಂಜಿ, ಹೊಸಬಟ್ಟೆಯ ಪಾವಡೆಯವರೊಂದಿಗೆ ವಾದ್ಯಮೇಳಗಳೊಂದಿಗೆ ದಳವಾಯಿ ಮತ್ತು ಮನ್ನೆಯವರ ಸಮೇತ ಮೆರವಣಿಗೆ ಸಾಗಿಸುತ್ತಿದ್ದನು. ಅರಸರು ಬಿಲ್ಲಿನ ಸಹಾಯದಿಂದ ಹಾರುವ ಹಕ್ಕಿಗೆ ಬಾಣವನ್ನು ಹೊಡೆದು ತನ್ನ ಗುರಿಯನ್ನು ಪ್ರದರ್ಶಿಸಿ, ಟಗರುಕಾಳಗ ಮಲ್ಲಯುದ್ಧವನ್ನು ನೋಡಿ ವಾಪಸ್ಸಾಗುತ್ತಿದ್ದನು.[೨೪] ಇದೇ ಆಚರಣೆಯು ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನರ ಕಾಲದವರೆಗೂ ಮುಂದುವರೆಯಿತು.

ಟಿಪ್ಪುವಿನ ಮರಣದ ತರುವಾಯ ದಸರಾ ಆಚರಣೆಗಳು ಸಾಂಪ್ರದಾಯಿಕವಾದ ರೀತಿಯಲ್ಲೇ ನಡೆದರೂ ಸಹ ಅದರಲ್ಲಿ ಯೂರೋಪಿಯನ್ ಆಡಳಿತ ಮತ್ತು ಆಚರಣೆಗಳು ಮಿಶ್ರಣವಾದವು. ಆ ಪ್ರಕಾರವಾಗಿ ಕ್ರಿ.ಶ.೧೮೦೦ರಲ್ಲಿ ಹದಿನೈದು ದಿನಗಳ ಮುಂಚಿತವಾಗಿ ಅರಸ ಮತ್ತು ಯೂರೋಪಿಯನ್ ಅಧಿಕಾರಿಗಳೊಡನೆ ಸಭೆಯೇರ್ಪಟ್ಟು ದಸರಾ ಉತ್ಸವವನ್ನು ನಡೆಸಲು ಒಪ್ಪಿಗೆಯನ್ನು ಸೂಚಿಸಲಾಯಿತು. ಅಲ್ಲಿಯವರೆಗೂ ಅರಸನೇ ದಸರಾ ಉತ್ಸವವನ್ನು ನಡೆಸಲು ತೀರ್ಮಾನವನ್ನು ಕೈಗೊಳ್ಳುತ್ತಿದ್ದನು. ಅರಮನೆಯ ದರ್ಬಾರ್ ಹಾಲಿಗೆ ಮಹಾರಾಜನು ದರ್ಬಾರಿನ ಪೋಷಾಕುಗಳನ್ನು ಧರಿಸಿ, ಕಿರೀಟಧಾರಿಗಳಾಗಿ ಸಿಂಹಾಸನಾರೋಹಣ ಮಾಡಿದಾಗ ಅರಮನೆಯ ಬ್ಯಾಂಡಿನವರು 'ಕಾಯ ಶ್ರೀಗೌರೀ ಕರುಣಾಲಹರೀ' ಎಂಬ ಮೈಸೂರು ರಾಜ್ಯದ ನಾಡಗೀತೆಯನ್ನು ನುಡಿಸುತ್ತಿದ್ದರು. ಗನ್‌ಹೌಸ್‌ನಿಂದ ೨೧ ಮದ್ದು ತುಂಬಿದ ಕುಶಾಲ ತೋಪುಗಳನ್ನು ಹಾರಿಸುತ್ತಿದ್ದರು. ಪಟ್ಟದ ಕತ್ತಿಯನ್ನು ಮಹಾರಾಜರ ಬಲಭಾಗದಲ್ಲಿ ಇಡಲಾಗುತ್ತಿತ್ತು. ಅವರ ಅಕ್ಕಪಕ್ಕಗಳಲ್ಲಿ ಅಂಗರಕ್ಷಕರು ನಿಂತುಕೊಳ್ಳುತ್ತಿದ್ದರು. ಅರಮನೆಯ ಪದ್ಧತಿಯಂತೆ ಸರದಾರರು, ರಾಜಬಂಧುಗಳು, ಉನ್ನತ ಅಧಿಕಾರಿಗಳು ಮಹಾರಾಜರಿಗೆ ಮುಜರೆ ಒಪ್ಪಿಸುತ್ತಿದ್ದರು. ಅಶ್ವಾರೂಢರಾದ ಸೈನಿಕರಿಂದ ಪಥಸಂಚಲನಗಳು ನಡೆಯುತ್ತಿದ್ದವು. ಅರಸನಿಂದ ಯೂರೋಪಿಯನ್ನರಿಗಾಗಿಯೇ ಪ್ರತ್ಯೇಕವಾಗಿ ಯೂರೋಪಿಯನ್ ದರ್ಬಾರನ್ನು ಮಹಾನವಮಿಯ ದಿನದಂದು ನಡೆಸಲಾಗುತ್ತಿತ್ತು. ಬ್ರಿಟಿಷ್ ರೆಸಿಡೆಂಟರು ಸರ್ಕಾರಿ ಭವನದಿಂದ ಸಕಲ ಮರ್ಯಾದೆಗಳಿಂದ ಸಂಜೆ ೭ರ ಹೊತ್ತಿಗೆ ಕಚ್ ಗಾಡಿಯಲ್ಲಿ ಅರಮನೆಯ ದರ್ಬಾರ್ ಹಾಲನ್ನು ಪ್ರವೇಶಿಸಿ ಮಹಾರಾಜರೊಂದಿಗೆ ಹಸ್ತಲಾಘವ ಮಾಡುತ್ತಿದ್ದರು. ಮಹಾರಾಜರು ಸಿಂಹಾಸನದ ಮೇಲೆ ಕುಳಿತರೆ ರೆಸಿಡೆಂಟರು ಮಹಾರಾಜರ

ಬಲಭಾಗದಲ್ಲಿದ್ದ ಬೆಳ್ಳಿಯ ಕುರ್ಚಿಯ ಮೇಲೆ ಆಸೀನರಾಗುತ್ತಿದ್ದರು.[೨೪] ಸಂಗೀತ ಕಛೇರಿ, ಕುಸ್ತಿ, ಸೈನಿಕರ ಕವಾಯತುಗಳು ನಡೆದ ನಂತರ ಅರಸರು ಜಂಬೂಸವಾರಿಯ ದಿನ ಆನೆಯ ಮೇಲೆ ಅಲಂಕರಿಸಲಾಗುತ್ತಿದ್ದ ಅಂಬಾರಿಯ ಮೇಲೆ ಆಸೀನರಾಗಿ ಮೆರವಣಿಗೆ ಹೊರಡುತ್ತಿದ್ದರು.

ಅರಸರು ಅಂಬಾರಿಯೆರಿದ ತಕ್ಷಣವೇ ಕುಶಾಲ ತೋಪುಗಳು ಹಾರುತ್ತಿದ್ದವು. ಅಂಬಾರಿಯನ್ನು ಹೊತ್ತ ಆನೆಯು ಬನ್ನಿಮಂಟಪದತ್ತ ಹೊರಡುತಿತ್ತು. ಅದರ ಹಿಂದೆಯೇ ಮೆರವಣಿಗೆಯಲ್ಲಿ ನಿಶಾನಿ ಆನೆ, ಒಂಟಿಆನೆಗಳು, ಅಶ್ವದಳ, ಸಿಪಾಯಿಗಳು ಸ್ಕೌಟುಗಳು, ಗೈಡುಗಳು, ನಗಾರಿ, ನೌಬತ್ತು ಹಿಡಿದವರು, ಹಿರಿಯ ಅಧಿಕಾರಿಗಳು, ದೇಸೀಯ ಮತ್ತು ವಿದೇಶಿ ಬ್ಯಾಂಡಿನವರು, ಅರಸು ಪ್ರಮುಖರನ್ನು ಕರೆತರುತ್ತಿದ್ದ ಆನೆಬಂಡಿಗಳು ಇರುತ್ತಿದ್ದವು. ಇವುಗಳ ಹಿಂದೆ ಮಹಾರಾಜರ ಅಂಗರಕ್ಷಕ ಪಡೆಯವರು, ಅರಸರ ಸಂಬಂಧಿಗಳು ಬರುತ್ತಿದ್ದರು. ಅವರ ನಂತರದಲ್ಲಿ ಅಂಬಾರಿಯಲ್ಲಿದ್ದ ಅರಸನನ್ನು ಹೊತ್ತು ಪಟ್ಟದ ಆನೆಯು ಬರುತ್ತಿತ್ತು. ಅಂಬಾರಿಯ ಒಳಗೆ ಗಂಭೀರವಾಗಿ ಕುಳಿತಿರುತ್ತಿದ್ದ ಮಹಾರಾಜರ ಹಿಂದೆ ಅಶ್ವದಳ, ಪಟ್ಟದಕತ್ತಿ, ಸಾರೋಟು, ನೌಬತ್ತುಗಳನ್ನು ಹೊಂದಿದ್ದ ಒಂದು ದೊಡ್ಡ ಪಡೆಯೇ ಅವರನ್ನು ಹಿಂಬಾಲಿಸುತ್ತಿತ್ತು. ಇವುಗಳ ಜೊತೆಯಲ್ಲಿ ಅಂಬುಲೆನ್ಸ್‌ಗಳು ಕೂಡ ಇರುತ್ತಿದ್ದವು. ಬನ್ನಿ ಪೂಜೆಯ ನಂತರ ಮಹಾರಾಜರು ರಾಜಪೋಷಾಕು ಧರಿಸಿ, ರಾಜ್ಯದ ಧ್ವಜವನ್ನು ಹಾರಿಸಿ, ಸೈನಿಕರಿಂದ ವಂದನೆಯನ್ನು ಸ್ವೀಕರಿಸುತ್ತಿದ್ದರು.[೨೫] ನಂತರ ಮಹಾರಾಜರು ಪಂಜಿನ ಮೆರವಣಿಗೆಯನ್ನು ವೀಕ್ಷಿಸಿ ಪೋಷಾಕನ್ನು ಬದಲಿಸಿ ತಮ್ಮ ಅಂಬಾರಿಯಲ್ಲಿ ಅರಮನೆಗೆ ವಾಪಸ್ಸಾಗುತ್ತಿದ್ದರು. ಹೀಗೆ ದಸರಾ ಮೆರವಣಿಗೆ ಅರಮನೆಯನ್ನು ತಲುಪಿದ ನಂತರ ಕೊನೆಯಾಗುತ್ತಿತ್ತು. ದಸರಾ ಉತ್ಸವವು ಇಂದಿಗೂ ಕೂಡ ವಿಶ್ವವಿಖ್ಯಾತಿಯನ್ನು ಹೊಂದಿದೆ.

**೩.೨. ದಳವಾಯಿಗಳು**

ಕ್ರಿ.ಶ. ೧೫೭೮ರಲ್ಲಿ ರಾಜಒಡೆಯರು ಅಧಿಕಾರವನ್ನು ಹಿಡಿಯುವವರೆಗೆ ಮೈಸೂರಿನಲ್ಲಿ ಅಧಿಕೃತವಾದ ಒಡೆಯರ ಆಳ್ವಿಕೆಯು ಪ್ರಾರಂಭವಾಗಿರಲಿಲ್ಲ. ರಾಜಒಡೆಯರ ಪೂರ್ವದಲ್ಲಿ ಆಳ್ವಿಕೆ ಮಾಡಿದ ಯಾವುದೇ ಅರಸರ ಸ್ವತಂತ್ರ ಆಳ್ವಿಕೆಯನ್ನು ಕುರಿತ ನಿರ್ದಿಷ್ಟವಾದ ಉಲ್ಲೇಖಗಳಿಲ್ಲ. ರಾಜಒಡೆಯರು ವಿಜಯನಗರದ ಪ್ರತಿನಿಧಿಯಾದ ತಿರುಮಲರಾಯನಿಂದ ಶ್ರೀರಂಗಪಟ್ಟಣವನ್ನು ಕ್ರಿ.ಶ.೧೬೧೦ರಲ್ಲಿ ಕಿತ್ತುಕೊಂಡು ಅದನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡರು. ಅಲ್ಲದೆ ಕೇವಲ ಹದಿನಾರು ಹಳ್ಳಿಗಳಿಗೆ ಮಾತ್ರ  ಮೀಸಲಾಗಿದ್ದಂತಹ ಮೈಸೂರು ರಾಜ್ಯವನ್ನು ವಿವಿಧ ಕಾಲಘಟ್ಟಗಳಲ್ಲಿ ವಿಸ್ತರಿಸುವಂತಹ ಕಾರ್ಯವನ್ನು ಗಮನಾರ್ಹವಾಗಿ ಮಾಡಿದರು. ಇವರ ರಾಜಕೀಯ ದಿಗ್ವಿಜಯದ ಭಾಗವಾಗಿ ಅಕ್ಕಿಹೆಬ್ಬಾಳು, ಮುಳ್ಳೂರು, ಹಾರೋಹಳ್ಳಿ ಗಾರುಗಳ್ಳಿ, ಶ್ರೀರಂಗಪಟ್ಟಣ, ಸಿರಿಯೂರು, ಸರಗೂರು, ಹದಿನಾರು ತೆಂಕಣಾಂಬಿ ಉಮ್ಮತ್ತೂರು, ಹುರ, ಹರದನಹಳ್ಳಿ, ತಲಕಾಡು, ಹುಲ್ಲಹಳ್ಳಿ, ಮಳಲವಾಡಿ, ಬಿಳಿಕೆರೆ, ಕೊತ್ತೆಗಾಲ, ಅಮ್ಮಚವಾಡಿ, ಮೂಗೂರು, ಇಕ್ಕೇರಿ, ಹೊಸಹೊಳ ಇತ್ಯಾದಿ ಪ್ರದೇಶಗಳು ಮೈಸೂರು ರಾಜ್ಯಕ್ಕೆ ಸೇರಿದ್ದವು.[೨೬]

ರಾಜಒಡೆಯರು ತಮ್ಮ ತೋಳ್ಬಲದಿಂದ ರಾಜ್ಯದ ಗಡಿಗಳನ್ನು ವಿಸ್ತರಿಸಿ ಅವುಗಳ ರಕ್ಷಣೆ ಮತ್ತು ಭದ್ರತೆಗೆ ಪ್ರಾಮುಖ್ಯತೆ ನೀಡಿದರು. ಶತ್ರುಗಳಿಂದ ರಾಜ್ಯವನ್ನು ರಕ್ಷಿಸುವ ಮತ್ತು ಗಡಿಗಳನ್ನು ಮತ್ತಷ್ಟು ವಿಸ್ತರಿಸುವಂತಹ ಉದ್ದೇಶಗಳಿಂದ ಆಡಳಿತ ವ್ಯವಸ್ಥೆಯಲ್ಲಿ ಹಲವಾರು ಸೈನಿಕರನ್ನು ನೇಮಿಸುವ ಯೋಜನೆಯನ್ನು ಹಾಕಿಕೊಂಡರು. ಈ ನಿಟ್ಟಿನಲ್ಲಿ ಕ್ರಮ ಕೈಗೊಂಡ ರಾಜಒಡೆಯರು ಸೈನ್ಯಾಡಳಿತದ ಅಧಿಪತ್ಯವನ್ನು ನೋಡಿಕೊಳ್ಳುವ ಉದ್ದೇಶದಿಂದ ವಿಜಯನಗರ ಅರಸರ ಕಾಲದಲ್ಲಿ ಮಹಾದಂಡನಾಯಕನ ಅಧೀನದಲ್ಲಿದ್ದ ಅಮರನಾಯಕರ ದಳವಾಯಿ ಎಂಬ ಸೈನ್ಯಾಧಿಕಾರಿಯ ಹುದ್ದೆಯನ್ನು ತಮ್ಮ ಅಧಿಕಾರಾವಧಿಯಲ್ಲಿ ಪುನಃ ನಿಯೋಜಿಸಿದರು. ಈ ಹುದ್ದೆಯು ಮೈಸೂರು ಪಾಳೆಯಪಟ್ಟಿನ ಮೂಲ ಅರಸನಾದ ಚಾಮರಾಜ ಒಡೆಯನ ಮರಣಾನಂತರ ಆತನ ವಿಧವೆ ಪತ್ನಿ ಮತ್ತು ಮಗಳೊಂದಿಗೆ ದಳವಾಯಿಯಾಗಿದ್ದ ಕಾರುಗಳ್ಳಿಯ ಮಾರಪ್ಪನಾಯಕನು ಅನುಚಿತವಾಗಿ ವರ್ತಿಸಿದ್ದರಿಂದ ಯದುರಾಯನು ಈ ಹುದ್ದೆಯನ್ನು ರದ್ದುಪಡಿಸಿದ್ದನು. ಈ ರದ್ಧತಿಯು ಸುಮಾರು ೨೦೦ ವರ್ಷಗಳವರೆಗೆ ಹಾಗೆಯೇ ಮುಂದುವರೆದಿತ್ತು. ನಂತರ ರಾಜ್ಯದ ವಿಸ್ತಾರದಿಂದ ಈ ಹುದ್ದೆಯ ಅವಶ್ಯಕತೆಯನ್ನು ಮನಗಂಡಂತಹ ರಾಜಒಡೆಯರು ಕ್ರಿ.ಶ.೧೬೧೦ರಲ್ಲಿ ಪುನಃ ಜಾರಿಗೆತಂದರು. ಇದರಿಂದ ಆಡಳಿತದಲ್ಲಿ ರಾಜನ ಮೇಲೆ ಒತ್ತಡವನ್ನು ಕಡಿಮೆ ಮಾಡಲು ಈ ಹುದ್ದೆಯು ಸಹಕರಿಸಿತು.

ಬಿ.ಎಲ್.ರೈಸ್‌ರವರು ದಳವಾಯಿ ಎಂಬ ಪದದ ಅರ್ಥವನ್ನು ಈ ಕೆಳಗಿನಂತೆ ಅರ್ಥೈಸಿದ್ದಾರೆ. 'ದಳ' ಮತ್ತು 'ವಾಯಿ' ಎಂಬ ಎರಡು ಸಂಯೋಜನೆಯಿಂದ ದಳವಾಯಿ ಎಂದಾಗಿದೆ.[೨೭] ಮೂಲತಃ ಈ ದಳವಾಯಿ ಎಂಬ ಪದವು ದಳಗಾಹಿ ಪದದ ರೂಪಾಂತರವಾಗಿರಬೇಕು. ಮುಂದೆ ಅದು ಜನಸಾಮಾನ್ಯರ ಬಾಯಲ್ಲಿ ದಳವಾಯಿಯಾಗಿರಬೇಕೆಂದು ತೋರುತ್ತದೆ. ದಳವಾಯಿ ಎಂದರೆ ಸಾಮಾನ್ಯ ಅರ್ಥದಲ್ಲಿ ಸೇನಾದಳದ ಅಧಿಪತಿ ಎಂದು ಅರ್ಥೈಸಬಹುದಾಗಿದೆ. ಈ ದಳವಾಯಿ ಹುದ್ದೆಯು ಮೈಸೂರು ಒಡೆಯರ ಕಾಲದಲ್ಲಿ ಈ ಹಿಂದೆ ತಲಕಾಡಿನ ಗಂಗರು ಮತ್ತು ದ್ವಾರಸಮುದ್ರದ ಹೊಯ್ಸಳರ ಕಾಲಾವಧಿಯಲ್ಲಿದ್ದ ದಂಡನಾಯಕ ಹುದ್ದೆಗೆ ಸಮನಾಗಿತ್ತು. ರಾಜ ರಾಜ್ಯದ ನಿರಂಕುಶ ಪ್ರಭುವಾಗಿದ್ದರೆ, ಆತನ ನಂತರದ ಸ್ಥಾನವು ಸೈನ್ಯದ ಅಧಿಪತಿಯಾದ ದಳವಾಯಿಯದ್ದಾಗಿತ್ತು. ಆದರೆ ಈತ ಕೇವಲ ಸೈನಿಕ ಅಧಿಕಾರವನ್ನು ಚಲಾಯಿಸುತ್ತಿದ್ದ ಆಡಳಿತಾಧಿಕಾರಿಯಾಗಿ ನೇಮಕಗೊಂಡಿದ್ದನು. ಮೈಸೂರು ಮತ್ತು ತಂಜಾವೂರುಗಳು ಏಕಪ್ರಕಾರವಾದ ಆಳ್ವಿಕೆಯನ್ನು ಹೊಂದಿದ್ದರೆ, ಮಧುರೆಯಲ್ಲಿ ದಳವಾಯಿಯು ಮಹಾಪ್ರಧಾನಿಯ ಪಾತ್ರವನ್ನು ಸಹ ಹೊಂದಿದ್ದನು. ಅವಶ್ಯಕತೆಗೆ ತಕ್ಕಂತೆ ಮೈಸೂರು ಒಡೆಯರಿಗೆ ದಳವಾಯಿಯು ಆಡಳಿತದಲ್ಲಿ ಸಹಕಾರದ ಜೊತೆಗೆ ರಾಜಕೀಯ ವ್ಯವಹಾರಗಳಲ್ಲಿ ಅಪಾರ ಪ್ರಭಾವ ಹೊಂದಿರುತ್ತಿದ್ದ ಮಂತ್ರಾಲೋಚನಾ ಸಭೆಯ ಸದಸ್ಯನೂ ಆಗಿದ್ದನು. ರಾಜನು ತನ್ನ ಜೀವಿತಾವಧಿಯಲ್ಲಿ ಮತ್ತು ಆತನ ಮರಣಾನಂತರ ಅವನ ಸಮರ್ಥ ಉತ್ತರಾಧಿಕಾರಿಯನ್ನು ಆಯ್ಕೆ ಮಾಡುವ ಬಹು ಗುರುತರವಾದ ಜವಾಬ್ದಾರಿಯು ದಳವಾಯಿಗಳ ಮೇಲಿದ್ದಿತು.

ಕ್ರಿ.ಶ. ೧೬೧೦ರಲ್ಲಿ ರಾಜಒಡೆಯರು ಸಮರ್ಥ, ದಕ್ಷ ಮತ್ತು ನಿಷ್ಠಾವಂತನಾದ ವ್ಯಕ್ತಿಯನ್ನು ದಳವಾಯಿಯನ್ನಾಗಿ ನೇಮಿಸಲು ತಮ್ಮ ಸೋದರ ಸಂಬಂಧಿಯಾದ ಕಳಲೆ ಮನೆತನದ ಕರಿಕಾಲು ಮಲ್ಲರಾಜಯ್ಯನನ್ನು ಮೈಸೂರು ರಾಜ್ಯದ ಪ್ರಥಮ ದಳವಾಯಿಯನ್ನಾಗಿ ನೇಮಿಸಿದರು. ಮೈಸೂರಿನ ಅರಸರು ಉನ್ನತ ಅಧಿಕಾರದಲ್ಲಿ ತಮ್ಮ ಸಂಬಂಧಿಗಳನ್ನು ಕೂರಿಸುವಂತಹ ಅಪೇಕ್ಷೆಯಾಗಿತ್ತು. ಸಂಬಂಧಗಳಿಂದ ಹೊರಗಿನವರನ್ನು ನೇಮಿಸಿದರೆ ಅವರು ಉದಾಸೀನರಾಗಿ ಕಾರ್ಯನಿರ್ವಹಿಸುವರೆಂಬ ಕಾರಣವಿದ್ದಿರಬೇಕು. ಇಲ್ಲವೇ ಮೈಸೂರು ಮತ್ತು ಕಳಲೆ ರಾಜಮನೆತನಗಳು ಸಮಾನವಾದ ರಾಜಕೀಯ ಮತ್ತು ಸಾಮಾಜಿಕ ಸ್ಥಾನಮಾನಗಳನ್ನು ಹೊಂದಿದ್ದು ಕಂಡುಬರುತ್ತದೆ. ಜೊತೆಗೆ ಈ ಎರಡೂ ಅರಸುಮನೆತನಗಳು ತಮ್ಮಲ್ಲಿ ವೈವಾಹಿಕ ಸಂಬಂಧಗಳನ್ನು ಹೊಂದಿದ್ದು ಕೂಡ ಕಾರಣವಾಗಿರಬಹುದು. ಅಲ್ಲದೆ ಮಲ್ಲರಾಜಯ್ಯನು ರಾಜಒಡೆಯರ ಸಹೋದರಿಯ ಮಗನಾಗಿದ್ದು ಬಾಲ್ಯದಿಂದಲೂ ತಮ್ಮ ಸೋದರಮಾವನ ಮನೆಯಲ್ಲಿಯೇ ಬೆಳೆದಿದ್ದರಿಂದ ಸಹಜವಾಗಿ ಸೋದರ ಸಂಬಂಧಿಗೆ ಉನ್ನತ ಅಧಿಕಾರವನ್ನು ನೀಡುವ ಆಲೋಚನೆಯಾಗಿತ್ತು. ಅಲ್ಲದೆ ಮೈಸೂರು ಒಡೆಯರ ಅಧಿಕಾರ ವಿಸ್ತರಣೆಯಲ್ಲಿ ಸೋದರ ಸಂಬಂಧಿಯು ಸಹಕರಿಸುವನೆಂಬ ಭಾವನೆಯಿಂದ ಕರಿಕಾಲ ಮಲ್ಲರಾಜಯ್ಯನನ್ನು ದಳವಾಯಿಯನ್ನಾಗಿ ನೇಮಿಸಲಾಯಿತು.[೨೮] ಜೊತೆಗೆ ಕಳಲೆ ಮನೆತನದವರನ್ನು ನೇಮಿಸಿಕೊಂಡರೆ ಅವರ ಅಧೀನದಲ್ಲಿದ್ದ ಸಂಸ್ಥಾನವನ್ನು ಮೈಸೂರು ರಾಜ್ಯಕ್ಕೆ ಸೇರಿಸಿಕೊಳ್ಳಬಹುದೆಂಬ ದೂರದೃಷ್ಟಿತ್ವ ಮತ್ತು ಮಹತ್ವದ ಆಕಾಂಕ್ಷೆಯಾಗಿರಬಹುದು.

ಕರಿಕಾಲ ಮಲ್ಲರಾಜಯ್ಯನಿಗೆ ಒಂದು ಒಪ್ಪಂದ ಪತ್ರವನ್ನು ಬರೆದ ರಾಜಒಡೆಯರು ಆತನಿಂದ ಪ್ರಮಾಣವನ್ನು ಮಾಡಿಸಿಕೊಂಡು ಮೈಸೂರಿನ ಒಡೆಯರ ಮನೆತನದವರು ರಾಜಧಾನಿ ಶ್ರೀರಂಗಪಟ್ಟಣದ ಸಿಂಹಾಸನದಲ್ಲಿ ಕುಳಿತು ಶ್ರೀರಂಗಪಟ್ಟಣದ ಆಳ್ವಿಕೆಗೊಳಪಟ್ಟ ಪ್ರದೇಶಗಳ ಆಳ್ವಿಕೆಯನ್ನು ನಿರ್ವಹಿಸುವುದು ಹಾಗೂ ರಾಜ್ಯದ ಗಡಿಗಳನ್ನು ವಿಸ್ತರಿಸುವುದು. ಅಂತೆಯೇ ಕಳಲೆ ಮನೆತನದವರು ವಂಶಪಾರಂಪರ್ಯವಾಗಿ ಆಳ್ವಿಕೆಯಲ್ಲಿ ಒಡೆಯರಿಗೆ ಸಹಕರಿಸುವುದು ಎಂದು ತೀರ್ಮಾನವಾಯಿತು. ಈ ಒಪ್ಪಂದ ಪತ್ರದ ವಿವರವು ಈ ಕೆಳಗಿನಂತೆ ವಿವರವಾಗಿದೆ.

"ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರುಷಂಗಳು ೧೫೩೬ ಸಂದ ವರ್ತಮಾನದ ನಳಸಂವತ್ಸರದ ಮಾರ್ಗಶಿರ ಶುದ್ಧ ೧೦ರಲ್ಲೂ ಕಳಲೆ ಪಟ್ಟಾಭಿಷೇಕ ವಿರಾಜಮಾನರಾದ ಚಂದ್ರವಂಶದ ಭಾರದ್ವಜ ಗೋತ್ರೋತ್ಪನ್ನರಾದ ಕಳಲೆ ಅರಸುಗಳಿಗೆ ಶ್ರೀರಂಗಪಟ್ಟಣದ ದಳವಾಯಿತನ ನಿಗದಿಯಾದ ವಿವರ ಮಹಿಶೂರು ನಗರದ ರಾಜೊಡೆಯರೈಯ್ಯನವರು ಶ್ರೀರಂಗಪಟ್ಟಣವು ನಮ್ಮದಾಗಿದೆಯಷ್ಟೇ ಮುಂದೆ ಶೀಮೆ(ಸೀಮೆ) ಭೂಮಿ ಕೈವಶವಾಗತಕ್ಕ ಬಗ್ಗೆ ನಮಗೆ ಆಪ್ತರಾಗಬೇಕೆಂಬುದಾಗಿ ಯೋಚಿಸಿ ಕಳಲೆ ಅರಸರುಗಳು ಪ್ರಬಲರೂ ಹೌದು, ನಮ್ಮ ರಕ್ತಸಂಬಂಧ ಬಂಧುಗಳೂ ಆಹುವುದು, ಇವರ ಹೊರತು ನಮಗೆ ಬೇರೆ ಸ್ವಂತ ಜನಗಳಿಲ್ಲ ಎಂಬುದಾಗಿ ಯೋಚಿಸಿ, ತಮಗೆ ಆಪ್ತರಾದ ನಂಬಿಕೆ ಜನಗಳಕೂಡಿ ಮಾತನಾಡಿ ಸಂಬಂಧಿಸಿಕೊಂಡು ತಮ್ಮ

ಸೋದರಿಯ ಮಗನಾದ ಮಲ್ಲಿರಾಜಒಡೆಯರ ಬಳಿಗೆ ಬುದ್ಧಿವಂತರಾದ ಜನರುಗಳನ್ನು ಕಳಿಸಿಕೊಟ್ಟು ತಮ್ಮ ಬಳಿಗೆ ಕರೆದುಕೊಂಡು ಉಭಯತ್ರರೂ ಕೂಡಿ ಆಲೋಚನೆ ಮಾಡಿ, ನಾವು ನೀವು ಏಕವಾಗಿ ಇರಬೇಕೆಂಬುದಾಗಿ ಶ್ರೀ ಚಾಮುಂಡೇಶ್ವರಿ ಅಮ್ಮನವರ ಸನ್ನಿಧಿಯಲ್ಲಿ ಉಭಯತ್ರರೂ ಪ್ರಮಾಣಪೂರ್ವಕವಾಗಿ ಮಹಿಶೂರು ನಗರದವರಿಗೆ ದೊರೆತನ ಕಳಲೆಯವರಿಗೆ ದಳವಾಯಿತನ ಎಂದು ನಿಷ್ಕರ್ಷ ಮಾಡಿಕೊಂಡು ಭಾಷಾ ಪತ್ರಿಕೆಯಾಯಿತು.[೫೯] ಅದರಿಂದಲೇ ಮೈಸೂರು ಒಡೆಯರಿಗೆ ಕುಳಿತುಪಟ್ಟ, ಕಳಲೆಯವರಿಗೆ ನಿಂತುಪಟ್ಟ ಎಂಬ ಹೇಳಿಕೆಯು ಇಂದಿಗೂ ಈ ಪ್ರದೇಶದ ಜನರ ಆಡುಮಾತಿನಲ್ಲಿದೆ.

ಈ ಭಾಷಾಪತ್ರದ ಒಪ್ಪಂದ ಏರ್ಪಟ್ಟನಂತರ ಕರಿಕಾಲ ಮಲ್ಲರಾಜಯ್ಯನು ಬಹುಶಃ ತನ್ನ ಮಾವನ ಊರಾದ ಯಳಂದೂರಿಗೆ ಹೋಗಿ ಬರುವುದಾಗಿ ತಿಳಿಸಿ ಹೊರಟು ಅರಮನೆಯಿಂದ ಬೀಳ್ಕೊಟ್ಟನು. ಆದರೆ ಮಲ್ಲರಾಜಯ್ಯನು ತಾನು ಕೊಟ್ಟ ಮಾತಿನಂತೆ ನಡೆಯದೆ ತನ್ನ ಮೊಮ್ಮಗ ನಂದಿನಾಥಯ್ಯನೆಂಬ ಎಂಟುವರ್ಷದ ಬಾಲಕನ ಮುಖಾಂತರವಾಗಿ ದಳವಾಯಿ ಪದವಿಗೆ ರಾಜೀನಾಮೆ ಪತ್ರವನ್ನು ಕಳುಹಿಸಿದನು. ಮಲ್ಲರಾಜಯ್ಯನ ಈ ರೀತಿಯ ನಿರ್ಧಾರಕ್ಕೆ ಕೆಲವು ಕಾರಣಗಳನ್ನು ಊಹಿಸಬಹುದು. ಒಂದನೆಯದಾಗಿ ದಳವಾಯಿ ಹುದ್ದೆಯನ್ನು ವಹಿಸಿಕೊಳ್ಳುವಾಗ ಆದ ಭಾಷಾ ಪತ್ರಕ್ಕೆ ಸಹಿಹಾಕುವ ವೇಳೆಗೆ ಆತ ಕಳಲೆಯನ್ನಾಳುತ್ತಿದ್ದ ಮಲಸಹೋದರ ಚಂದ್ರೇಶಖರಯ್ಯ ಒಡೆಯನಿಂದ ಸಿಂಧುವಳ್ಳಿ ಮತ್ತು ಉಪ್ಪಿನಹಳ್ಳಿಗಳನ್ನು ವಶಪಡಿಸಿಕೊಂಡಿದ್ದ. ಹಾಗೆ ಕಳಲೆ ಸಂಸ್ಥಾನದ ಆಡಳಿತ ಕೇಂದ್ರವಾಗಿದ್ದ ರಾಜಧಾನಿ ಕಳಲೆಯನ್ನು ವಶಪಡಿಸಿಕೊಳ್ಳಲು ಸಿದ್ಧತೆ ಮಾಡಿಕೊಂಡಿದ್ದ. ಇಂತಹ ಪರಿಸ್ಥಿತಿಯಲ್ಲಿ ಕರಿಕಾಲ ಮಲ್ಲರಾಜಯ್ಯನು ತಾನು ಕಳಲೆಯ ಪ್ರಭುತ್ವ ಮತ್ತು ಮೈಸೂರಿನ ದಳವಾಯಿ ಹುದ್ದೆಗಳೆರಡನ್ನೂ ಏಕಕಾಲದಲ್ಲಿ ನಿರ್ವಹಿಸುವುದು ಕಷ್ಟವೆಂದು ಅರಿತಿರಬೇಕು. ಏಕೆಂದರೆ ಕಳಲೆ ಏಳುದಶಕಗಳ ಕಾಲ ಮಲ್ಲಿರಾಜಯ್ಯನ ಮಲಸಹೋದರರ ಅಧೀನದಲ್ಲಿತ್ತು. ಕಳಲೆ ಸಂಸ್ಥಾನವು ಹಲವಾರು ಸಮಸ್ಯೆಗಳಿಂದ, ಸಂಕಷ್ಟಗಳಿಂದ ಕೂಡಿದ್ದು ಅದನ್ನು ಸರಿಪಡಿಸಲು ಹಾಗೂ ಆಡಳಿತವನ್ನು ಸುವ್ಯವಸ್ಥೆಗೊಳಿಸಲು ತನ್ನ ಗಮನವನ್ನೆಲ್ಲಾ ಅತ್ತಕಡೆ ಕೇಂದ್ರೀಕರಿಸುವ ಅಗತ್ಯವಿದೆಯೆಂದು ಆತನು ಮನಗಂಡಿರಬೇಕು.

ಎರಡನೆಯದಾಗಿ ಕಳಲೆ ಸಂಸ್ಥಾನವನ್ನು ಮೈಸೂರು ರಾಜ್ಯದ ಅಧೀನಕ್ಕೆ ಸೇರಿಸುವುದರಿಂದ ತನ್ನ ಮನೆತನದ ಏಳಿಗೆಗೆ ಅಡ್ಡಿಯಾಗುವುದೆಂದು ತಿಳಿದಿರಬಹುದು. ಮೂರನೆಯದಾಗಿ ದಳವಾಯಿ ಹುದ್ದೆಯು ರಾಜನ ಹುದ್ದೆಗಿಂತ ಕೆಳಗೆ ಮತ್ತು ರಾಜನಿಗೆ ಸರಿಸಮಾನವಲ್ಲದ ಕಾರಣ ಈ ಹುದ್ದೆಯನ್ನು ತಿರಸ್ಕರಿಸಿರಬಹುದು. ಅದೇನೇ ಕಾರಣಗಳಿದ್ದರೂ ಕರಿಕಾಲ ಮಲ್ಲರಾಜಯ್ಯನು ರಾಜೀನಾಮೆಯನ್ನು ನೀಡಿದ ನಂತರ ರಾಜಒಡೆಯರು ಆ ಸ್ಥಾನಕ್ಕೆ ತಮ್ಮ ಸಹೋದರ ಬೆಟ್ಟದ ಚಾಮರಾಜ ಒಡೆಯರ ಮಗ ಬೆಟ್ಟದರಸುವನ್ನು ದಳವಾಯಿಯನ್ನಾಗಿ ನೇಮಿಸಿದರು.[೬೦] ಆದ್ದರಿಂದ ವಾಸ್ತವವಾಗಿ ಮೈಸೂರು ಒಡೆಯರ ಪ್ರಥಮ ದಳವಾಯಿಯಾಗಿ ಬೆಟ್ಟದರಸು ಅಧಿಕೃತವಾಗಿ ಕಾರ್ಯಾರಂಭ ಮಾಡಿದ ವ್ಯಕ್ತಿಯಾಗಿದ್ದಾನೆ.

ದಳವಾಯಿಯಾಗಿ ಅಧಿಕೃತವಾಗಿ ಅಧಿಕಾರವನ್ನು ಸ್ವೀಕರಿಸಿದ ನಂತರ ಬೆಟ್ಟದರಸು ಮೊಟ್ಟಮೊದಲ ಬಾರಿಗೆ ಹೊಳೆನರಸೀಪುರವನ್ನು ಗೆದ್ದು ಆ ಪ್ರದೇಶವನ್ನು ಮೈಸೂರು ರಾಜ್ಯಕ್ಕೆ ಸೇರಿಸಿದನು. ಈ ವಿಜಯದ ಕೆಲವೇ ದಿನಗಳ ನಂತರ ರಾಜಒಡೆಯರು ಮರಣವನ್ನಪ್ಪಿದರು. ಅವರ ಉತ್ತರಾಧಿಕಾರಿಯಾಗಿ ಹದಿನಾಲ್ಕು ವರ್ಷದ ಚಾಮರಾಜ ಒಡೆಯರನ್ನು(ಕ್ರಿ.ಶ.೧೬೧೮-೩೭) ಶ್ರೀರಂಗಪಟ್ಟಣದ ಸಿಂಹಾಸನದಲ್ಲಿ ಕೂರಿಸಲಾಯಿತು. ಈ ಅವಧಿಯಲ್ಲಿ ಬೆಟ್ಟದರಸು ಅಪ್ರಾಪ್ತರಾಗಿದ್ದ ಚಾಮರಾಜ ಒಡೆಯರ ವಯಸ್ಸನೇ ಪ್ರಬಲವಾದ ಅಶಕ್ತತೆಯ ನೆಪಮಾಡಿಕೊಂಡು ಸಂಪೂರ್ಣವಾದ ಅಧಿಕಾರವನ್ನೆಲ್ಲ ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸಿದನು. ಅಲ್ಲದೆ ತನ್ನ ಅಧಿಕಾರ ವಲಯವನ್ನು ವಿಸ್ತರಿಸಿಕೊಳ್ಳುವ ಪ್ರಯತ್ನವನ್ನು ಮಾಡಿದನು. ಈ ಪ್ರಯತ್ನವನ್ನು ಸೂಕ್ಷ್ಮವಾಗಿ ಗಮನಿಸಿದ ಚಾಮರಾಜ ಒಡೆಯರು ಕ್ರಿ.ಶ.೧೬೧೮ರಲ್ಲಿ ಬೆಟ್ಟದರಸುವನ್ನು ಅಧಿಕಾರದಿಂದ ತೆಗೆದುಹಾಕಿ ಆಸ್ಥಾನಕ್ಕೆ ಲಿಂಗಣ್ಣ ಎಂಬಾತನನ್ನು ನೇಮಿಸಿದರು. ದಳವಾಯಿ ಲಿಂಗಣ್ಣನು ಎರಡು ವರ್ಷಗಳ ಕಾಲ ಅಧಿಕಾರದಲ್ಲಿದ್ದನು. ಈತನ ಅನಾರೋಗ್ಯದ ಕಾರಣದಿಂದ ಕ್ರಿ.ಶ.೧೬೨೦ರಲ್ಲಿ ಬಸವಲಿಂಗಣ್ಣ ಎಂಬಾತನನ್ನು ದಳವಾಯಿಯನ್ನಾಗಿ ನೇಮಿಸಲಾಯಿತು. ಬಸವಲಿಂಗಣ್ಣನು ಸುಮಾರು ಹತ್ತುವರ್ಷಗಳ ಕಾಲ ಅಂದರೆ ಕ್ರಿ.ಶ.೧೬೩೦ರವರೆಗೂ ದಳವಾಯಿಯಾಗಿ ಅಧಿಕಾರವನ್ನು ನಿರ್ವಹಿಸಿದನು. ಆದರೆ ಕ್ರಿ.ಶ.೧೬೩೦ರಲ್ಲಿ ಅರಸು ಮನೆತನದ ರಕ್ತಸಂಬಂಧಿಯಾಗಿದ್ದ ವಿಕ್ರಮರಾಯನನ್ನು ದಳವಾಯಿಯಾಗಿ ಆಯ್ಕೆಮಾಡಲಾಯಿತು. ವಿಕ್ರಮರಾಯನು ಅತ್ಯಂತ ಸಮರ್ಥಶಾಲಿಯೂ ಪರಾಕ್ರಮಿಯೂ ಆಗಿದ್ದನು. ಈತ ದಕ್ಷ, ಚತುರ ಆಡಳಿತಗಾರನಾಗಿದ್ದನು. ಅಧಿಕಾರಕ್ಕೆ ಬಂದ ಕೂಡಲೇ ಚನ್ನಪಟ್ಟಣದ ಜಗದೇವರಾಯನ ವಿರುದ್ಧ ಯುದ್ಧ ಘೋಷಿದನು. ಈ ಯುದ್ಧದಲ್ಲಿ ಜಗದೇವರಾಯನು ಸೋತುಹೋದನು. ಚೆನ್ನಪಟ್ಟಣವು ಮೈಸೂರು ಅರಸರ ಆಳ್ವಿಕೆಗೆ ಸೇರಿಕೊಂಡಿತು.[೨೧] ಇದು ವಿಕ್ರಮರಾಯನ ಪ್ರಮುಖವಾದ ಸಾಧನೆಯಾಗಿದೆ. ಈತನ ಹಲವು ವಿಭಿನ್ನ ಪ್ರಯೋಗಗಳಿಂದ ಈತನಿಗೆ ವಿಗಡ ವಿಕ್ರಮರಾಯ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಚನ್ನಪಟ್ಟಣದ ದಿಗ್ವಿಜಯದ ನಂತರ ಕೊಂತನಹಳ್ಳಿ ನಾಗಮಂಗಲಗಳನ್ನು ಜಯಿಸಿದನು. ನಂಜನಗೂಡಿನ ದೇವಾಲಯದಲ್ಲಿ ನಂದಿವಿಗ್ರಹವನ್ನು ಸ್ಥಾಪಿಸಿದನು. ಕ್ರಿ.ಶ.೧೬೩೭ರಲ್ಲಿ ಚಾಮರಾಜ ಒಡೆಯರ ಮರಣದ ನಂತರ ಆಸ್ಥಾನಿಕರ ಸಲಹೆಯ ಮೇರೆಗೆ ಇಮ್ಮಡಿ ರಾಜಒಡೆಯರನ್ನು ಸಿಂಹಾಸನ ಮೇಲೆ ಕೂರಿಸಿದನು. ಈತನ ಶೌರ್ಯ ಪರಾಕ್ರಮಗಳನ್ನು ಮೆಚ್ಚಿ ಇಮ್ಮಡಿ ರಾಜಒಡೆಯರು ಅವನ ಜೊತೆಯಲ್ಲಿ ಸಲುಗೆಯಿಂದ ನಡೆದುಕೊಂಡ ಮೇಲೆ ಅರಸರ ಬಲಹೀನತೆಯೇ ಅಪಾರಸಲುಗೆ ಎಂದು ತಿಳಿದ ವಿಕ್ರಮರಾಯನು ತನ್ನ ಅಧಿಕಾರವನ್ನು ದುರುಪಯೋಗ ಮಾಡಿಕೊಂಡನು. ಆಡಳಿತದ ಎಲ್ಲಾ ವಿಭಾಗಗಳಿಗೂ ತನ್ನ ಆತ್ಮೀಯರನ್ನೇ ನೇಮಿಸಿಕೊಳ್ಳಲಾರಂಭಿಸಿದ. ಅಲ್ಲದೆ ಮೈಸೂರು ಸಿಂಹಾಸನ ಅಧಿಕಾರ ಗದ್ದುಗೆಯೇರುವ ಸಲುವಾಗಿ ಸಂಚನ್ನು ರೂಪಿಸಿ ಇಮ್ಮಡಿ ರಾಜಒಡೆಯರಿಗೆ ವಿಷಪ್ರಾಶನವನ್ನು ಮಾಡಿಸಿದನು. ಈ ಕುತಂತ್ರದಿಂದ ಅರಸರು ಮರಣಹೊಂದಿದರೂ ಸಹ ರಾಜ್ಯದ ಅಧಿಕಾರ

ವಿಕ್ರಮರಾಯನ ಕೈಸೇರಲಿಲ್ಲ.[೩೨] ಅದಕ್ಕೆ ಪ್ರಮುಖವಾದ ಕಾರಣವೇನೆಂದರೆ ಇಮ್ಮಡಿ ರಾಜಒಡೆಯರ ಉತ್ತರಾಧಿಕಾರಿಯಾಗಿದ್ದ ರಣಧೀರ ಕಂಠೀರವ ನರಸರಾಜ ಒಡೆಯರು ಅತ್ಯಂತ ಸಮರ್ಥಶಾಲಿಯೂ, ಚುರುಕು ಬುದ್ಧಿಯುಳ್ಳ ಕುಶಾಗ್ರಮತಿಯಾಗಿದ್ದು ವಿಗಡವಿಕ್ರಮರಾಯನ ಯೋಜನೆಗಳನ್ನು ತಲೆಕೆಳಗಾಗುವಂತೆ ಮಾಡಿದರು.

ಇಮ್ಮಡಿ ರಾಜಒಡೆಯರ ಮರಣದ ಮರ್ಮವನ್ನು ಅರಿತುಕೊಂಡ ಆಸ್ಥಾನದ ಮಂತ್ರಿಗಳು ಮತ್ತು ಸಮಾಲೋಚನಾ ಸಭೆಯ ಸದಸ್ಯರು ಕೂಡಲೇ ರಾಜ್ಯದ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ದಳವಾಯಿ ವಿಕ್ರಮರಾಯನಿಗೆ ಕಡಿವಾಳ ಹಾಕುವ ದೃಷ್ಟಿಯಿಂದ ದಕ್ಷರೂ, ಕುಶಾಗ್ರಮತಿಗಳೂ ಮತ್ತು ಆಡಳಿತ ಚತುರರೂ ಆದಂತಹ ಕಂಠೀರವ ನರಸರಾಜ ಒಡೆಯರನ್ನು ಮೈಸೂರಿನ ಶ್ರೀರಂಗಪಟ್ಟಣದ ಸಿಂಹಾಸನದಲ್ಲಿ ಕೂರಿಸಿದರು. ಕಂಠೀರವ ನರಸರಾಜ ಒಡೆಯರ ಸಾವಿಗೆ ಕಾರಣರಾದವರನ್ನು ಪತ್ತೆಹಚ್ಚಲು ಪ್ರಯತ್ನಿಸಿದರು. ಅರಮನೆಯ ಅಧಿಕಾರಿಗಳು ಮತ್ತು ದಳವಾಯಿ ವಿಗಡ ವಿಕ್ರಮರಾಯನ ಚಲನವಲನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ[೩೩] ಯಶಸ್ವಿಯಾದರು. ದಳವಾಯಿ ವಿಕ್ರಮರಾಯನೇ ರಾಜದ್ರೋಹಿಯಾಗಿ ಇಮ್ಮಡಿ ರಾಜಒಡೆಯರ ಸಾವಿಗೆ ಕಾರಣವೆಂದು ನಿಗೂಢವಾಗಿದ್ದ ವಿಷಯವನ್ನು ಬೆಳಕಿಗೆ ತಂದು, ವಿಕ್ರಮರಾಯನನ್ನು ಸೆರೆಗೆತಳ್ಳಿ ಕ್ರಿ.ಶ. ೧೬೪೧ರಲ್ಲಿ ಆತನ ಕಣ್ಣುಗಳನ್ನು ಕೀಳಿಸಿದರು. ವಿಕ್ರಮರಾಯನು ಸೆರಮನೆಯಲ್ಲಿಯೇ ಮರಣ ಹೊಂದಿದನು.

ಈ ಘಟನೆಯ ತರುವಾಯ ಕಂಠೀರವ ನರಸರಾಜ ಒಡೆಯರು ಮೂರು ತಿಂಗಳವರೆಗೆ ಈ ಹುದ್ದೆಯನ್ನು ಖಾಲಿಬಿಟ್ಟಿದ್ದರು. ಅಲ್ಲದೆ ಈ ಹುದ್ದೆಗಾಗಿ ಯೋಗ್ಯ ಹಾಗೂ ಸಮರ್ಥವಾದ ವ್ಯಕ್ತಿಯನ್ನು ಆಯ್ಕೆಮಾಡುವ ಮತ್ತು ಆ ಸ್ಥಾನದ ಪ್ರಾಮುಖ್ಯತೆಯನ್ನು ತಿಳಿದು ಕ್ರಿ.ಶ.೧೬೩೮ರ ಅಂತ್ಯದ ವೇಳೆಗೆ ತಿಮ್ಮರಾಜಯ್ಯನೆಂಬ ವ್ಯಕ್ತಿಯನ್ನು ದಳವಾಯಿಯನ್ನಾಗಿ ನೇಮಿಸಿದರು. ಇವರು ತಮ್ಮ ಅಧಿಕಾರದ ೨೧ವರ್ಷದ ಅವಧಿಯಲ್ಲಿ ಹತ್ತುಬಾರಿ ದಳವಾಯಿಗಳನ್ನು ಅದಲು ಬದಲು ಮಾಡಿದರು.[೩೪] ಈ ಪ್ರಕಾರವಾಗಿ ದಳವಾಯಿಗಳಾದ ವ್ಯಕ್ತಿಗಳು ಮತ್ತು ಕಾಲಮಾನವು ಈ ಕೆಳಗಿನಂತಿದೆ.

| ಕ್ರಸಂ. | ದಳವಾಯಿಗಳ ಹೆಸರು | ಸೇವೆ ಸಲ್ಲಿಸಿದ ಅವಧಿ (ವರ್ಷಗಳ) ಮತ್ತು ತಿಂಗಳು | ದಿನಗಳು |
|---|---|---|---|
| ೦೧. | ವಿಕ್ರಮರಾಯ | ೦ | ೨೮ |
| ೦೨. | ತಿಮ್ಮಪ್ಪನಾಯಕ | ೨-೧ | ೬ |
| ೦೩. | ನಂಜರಾಜಯ್ಯ | ೬-೦ | ೦ |
| ೦೪. | ಲಿಂಗರಾಜಯ್ಯ | ೧-೬ | ೦ |
| ೦೫. | ಕೆಂಪಯ್ಯ | ೧-೦ | ೦ |
| ೦೬. | ಲಿಂಗೇಗೌಡ | ೧-೨ | ೦ |

| | | | |
|---|---|---|---|
| ೦೭. | ಕಾರಗಳ್ಳಿ ಹಂಪರಾಜಯ್ಯ | ೧–೧ | ೦ |
| ೦೮. | ದಾಸರಾಜಯ್ಯ | ೨–೧ | ೮ |
| ೦೯. | ಲಿಂಗೇಗೌಡ(ಎರಡನೇ ಅವಧಿ) | ೧–೬ | ೦ |
| ೧೦. | ಕಾರಗಳ್ಳಿ ಹಂಪರಾಜಯ್ಯ (ಎರಡನೇ ಅವಧಿ) | ೪–೩ | ೯ |
| | ಒಟ್ಟು | ೨೦–೯ | ೨೧ |

ಅರಸರು ಈ ಮೇಲ್ಕಂಡ ರೀತಿಯಾಗಿ ದಳವಾಯಿಗಳನ್ನು ಬದಲಾಯಿಸಲು ಪ್ರಮುಖವಾದ ಕಾರಣವೆಂದರೆ ವಿಗಡ ವಿಕ್ರಮರಾಯನ ರೀತಿಯಲ್ಲಿ ಅಧಿಕಾರವನ್ನು ದುರ್ಬಳಕೆ ಮಾಡಿಕೊಳ್ಳಬಹುದೆಂಬ ಮುಂದಾಲೋಚನೆಯಿಂದ ಹಾಗೆ ಎರಡು ವರ್ಷಗಳಿಗೊಮ್ಮೆ ಈ ಪರ್ಯಾಯ ವಿಧಾನವನ್ನು ಬಳಸಿಕೊಂಡರು. ಈ ಕ್ರಮದಿಂದ ದಳವಾಯಿ ಪದ್ಧತಿಯನ್ನು ರದ್ದುಪಡಿಸಿದೇ ಅದರ ಅನಿವಾರ್ಯತೆಯನ್ನು ಮನಗಂಡು ಮುಂದುವರೆಸಿಕೊಂಡು ಹೋದರು. ಲಿಂಗಣ್ಣ ಮತ್ತು ಕೆಂಪರಾಜಯ್ಯ ಇವರುಗಳನ್ನು ದಕ್ಷತೆ ಮತ್ತು ಪ್ರಾಮಾಣಿಕತೆಯ ಮೇರೆಗೆ ಎರಡನೇ ಬಾರಿಗೆ ದಳವಾಯಿಯನ್ನಾಗಿ ನೇಮಿಸಿದರು. ಆದರೆ ಆತನ ಸೋದರಮಾವನಾದ ನಂಜರಾಜಯ್ಯನು ಮಾತ್ರ ಅತಿದೀರ್ಘ ಸಮಯದವರೆಗೆ ಅಧಿಕಾರದಲ್ಲಿ ಮುಂದುವರೆದನು.

ಬಿಜಾಪುರದ ಸೈನ್ಯ ಕ್ರಿ.ಶ.೧೬೫೩ರಲ್ಲಿ ಶ್ರೀರಂಗಪಟ್ಟಣದ ಮೇಲೆ ದಾಳಿಮಾಡಿದಾಗ ದಳವಾಯಿಯಾಗಿದ್ದ ಕಳಲೆಯ ದಾಸರಾಜಯ್ಯನುಶತ್ರು ಸೈನಿಕರು ಶ್ರೀರಂಗಪಟ್ಟಣದ ಕೋಟೆಯನ್ನು ಆಕ್ರಮಿಸದಂತೆ ಕೋಟೆಯ ಹೊರಗೆ ಹೋರಾಡುತ್ತಾ ಮರಣ ಹೊಂದಿದನು.[೬]

ಕಂಠೀರವ ನರಸರಾಜ ಒಡೆಯರ ನಂತರ ಅಧಿಕಾರವಹಿಸಿಕೊಂಡ ದೇವರಾಜ ಒಡೆಯರು(ಕ್ರಿ.ಶ.೧೬೫೯–೭೩) ಕೂಡ ದಳವಾಯಿಗಳನ್ನು ಬದಲಾಯಿಸುವ ಪರ್ಯಾಯ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದರು. ಇವರ ಕಾಲದಲ್ಲಿ ದಳವಾಯಿಗಳಾಗಿ ಕಾರ್ಯನಿರ್ವಹಿಸಿದ ವ್ಯಕ್ತಿಗಳು ಮತ್ತು ಅವರ ಕಾಲಾವಧಿಯು ಈ ಕೆಳಗಿನಂತಿದೆ.

| ಕ.ಸಂ. | ದಳವಾಯಿಗಳು | ಸೇವಾವಧಿ (ವರ್ಷ ಮತ್ತು ತಿಂಗಳು) | ದಿನಗಳು |
|---|---|---|---|
| ೦೧. | ಕಾರಗಳ್ಳಿ ಹಂಪರಾಜಯ್ಯ | ೦–೮ | ೨೧ |
| ೦೨. | ಕಳಲೆ ಮಲ್ಲರಾಜಯ್ಯ | ೦–೮ | ೦೫ |
| ೦೩. | ಮುದ್ದಯ್ಯ | ೧–೩ | ೦೦ |
| ೦೪ | ನಂಜರಾಜಯ್ಯ | ೦–೫ | ೦೦ |
| ೦೫. | ಕಾಂಜಯ್ಯ | ೦–೨ | ೦೫ |
| ೦೬. | ನಂಜನಾಥಯ್ಯ(೨ನೇ ಅವಧಿ) | ೫–೦ | ೦೦ |
| ೦೭. | ಕಳಲೆ ಕುಮಾರಯ್ಯ | ೫–೯ | ೨೫[೭] |
| | ಒಟ್ಟು | ೧೩.೧೧ | ೫೬ |

ಕೆಳದಿ ಮತ್ತು ಮೈಸೂರು ಒಡೆಯರುಗಳ ನಡುವಿನ ಯುದ್ಧದಲ್ಲಿ ಮೈಸೂರಿನ ದಳವಾಯಿಗಳು ಪ್ರಮುಖ ಪಾತ್ರವಹಿಸಿದರು. ಶಿವಪ್ಪನಾಯಕನು ಇಕ್ಕೇರಿಯಲ್ಲಿ ಆಳ್ವಿಕೆಯನ್ನು ನಡೆಸುತ್ತಿದ್ದನು. ಕಳಲೆಯ ಕಾಂತಯ್ಯನು ಕ್ರಿ.ಶ.೧೬೨೨ರ ಶ್ರೀರಂಗಪಟ್ಟಣದ ಯುದ್ಧದಲ್ಲಿ ಶಿವಪ್ಪನಾಯಕನೊಂದಿಗೆ ಹೋರಾಡುತ್ತಿದ್ದಾಗ ಸತ್ತುಹೋದನು. ಕಾಂತಯ್ಯನ ಮಗ ಕುಮಾರಯ್ಯನು ತನ್ನ ತಂದೆಯಿಂದ ತೆರವಾದ ದಳವಾಯಿಯ ಸ್ಥಾನವನ್ನು ತುಂಬಿದನು. ಕುಮಾರಯ್ಯ ಮತ್ತು ಆತನ ಮಗ ನಂದಿನಾಥಯ್ಯ ಇಕ್ಕೇರಿಯ ವಿರುದ್ಧದ ನಡೆದ ಯುದ್ಧದಲ್ಲಿ ಮೈಸೂರಿನ ಸೈನ್ಯವನ್ನು ಯಶಸ್ವಿಯಾಗಿ ಮುನ್ನಡೆಸಿ ಜಯಗಳಿಸಿದರು.[೩೮] ಶಿವಪ್ಪನಾಯಕನ ನಂತರ ಅವನ ಉತ್ತರಾಧಿಕಾರಿಗಳು ಮೈಸೂರಿನ ಸೈನಿಕರನ್ನು ಸಮರ್ಥವಾಗಿ ಎದುರಿಸಲಾರದೇ ಶಾಂತಿ ಒಪ್ಪಂದವನ್ನು ಮಾಡಿಕೊಂಡರು.

ಕುಮಾರಯ್ಯನು ಸಮರ್ಥ ಸೇನಾನಿಯೂ ದಂಡನಾಯಕನೂ ಮತ್ತು ದಕ್ಷ ಅಧಿಕಾರಿಯೂ ಆಗಿದ್ದನು. ಮಧುರೆಯ ಚೊಕ್ಕನಾಥ ಅವನ ಸ್ನೇಹಿತ ಸಾರಬಳ್ಳಿಯ ಮೊದಲಿಯಾರ್ ಅವರ ಜಂಟಿಸೈನ್ಯವನ್ನು ಈರೋಡಿನಲ್ಲಿ ಸೋಲಿಸಿ ಕೋಟೆಯನ್ನು ತನ್ನ ವಶಮಾಡಿಕೊಂಡ ದಿಗ್ವಿಜಯದ ನೆನಪಿಗಾಗಿ ದೇವರಾಜ ಒಡೆಯರು **'ಅರಿರಾಜಹರಣ ಶಾರ್ದೂಲ'**[೩೯] ಎಂಬ ಬಿರುದನ್ನು ನೀಡಿ ಗೌರವಿಸಿದರು. ದೇವರಾಜ ಒಡೆಯರ ಉತ್ತರಾಧಿಕಾರಿಯಾದ ಚಿಕ್ಕದೇವರಾಜ ಒಡೆಯರು ತಮ್ಮ ಕಾಲದಲ್ಲೂ ಕುಮಾರಯ್ಯನನ್ನು ದಳವಾಯಿಯಾಗಿ ಮುಂದುವರೆಸಿದರು. ಕುಮಾರಯ್ಯನ ಇಬ್ಬರು ಪುತ್ರಿಯರನ್ನು ಚಿಕ್ಕದೇವರಾಜ ಒಡೆಯರೇ ವಿವಾಹವಾದರು. ಅಲ್ಲದೆ ಕುಮಾರಯ್ಯನು ದಳವಾಯಿಯಾದರೂ ಆತನ ಮಗ ದೊಡ್ಡಯ್ಯನು ತಂದೆಯು ತಿರುಚನಾಪಳ್ಳಿಯನ್ನು ಜಯಿಸಲು ಸೈನ್ಯವನ್ನು ತಮಿಳುನಾಡಿಗೆ ಕೊಂಡೊಯ್ದಾಗ ದಳವಾಯಿಯು ರಾಜ್ಯದಲ್ಲಿ ಇಲ್ಲವೆಂದು ತಿಳಿದು ಮರಾಠರು ದಾದಾಜಿ, ಜೈತಾಜಿ, ನಿಂಬಾಜಿ ಎಂಬ ದಂಡನಾಯಕರ ನೇತೃತ್ವದಲ್ಲಿ ಮೈಸೂರನ್ನು ಮುತ್ತಿದರು. ಕೂಡಲೇ ಚಿಕ್ಕದೇವರಾಜ ಒಡೆಯರ ಆಜ್ಞೆಯ ಮೇರೆಗೆ ದೊಡ್ಡಯ್ಯನು ಸೈನ್ಯದ ತುಕಡಿಯೊಂದನ್ನು ಕಳಿಸಬೇಕೆಂದು ಹೇಳಿದಾಗ, ದೊಡ್ಡಯ್ಯನು ತನ್ನಲ್ಲಿದ್ದ ಸ್ವಲ್ಪಭಾಗದ ಸೈನ್ಯವನ್ನು ತೆಗೆದುಕೊಂಡು ಬಂದು ಅಪಾರವಾದ ಶತ್ರುಸೈನ್ಯವನ್ನು ಕಂಡು ರಾತ್ರಿ ವೇಳೆಯಲ್ಲಿ ಸೈನ್ಯದಲ್ಲಿದ್ದ ಆವಿನ ದನಗಳ ಕೊಂಬಿಗೆ ಪಂಜುಗಳನ್ನು ಕಟ್ಟಿ ಶತ್ರುಗಳ ಬಿಡಾರದ ಕಡೆಗೆ ಓಡಿಸಿದನು. ಅಲ್ಲದೆ ತಾನು ವಿರುದ್ಧ ದಿಕ್ಕಿನಲ್ಲಿ ಹೋಗಿ ಶತ್ರುಗಳ ಮೇಲೆರಗಿದನು. ಮರಾಠ ಸೈನಿಕರು ಏಕಾಏಕಿಯಾಗಿ ಅಪಾರವಾದ ಬೆಳಕನ್ನು ಕಂಡು ದಿಗ್ಭ್ರಮೆಯಿಂದ ಶತ್ರುಗಳನ್ನು ಎದುರಿಸಲು ಸಿದ್ಧರಾದರು. ಆದರೆ ಅಷ್ಟರಲ್ಲಾಗಲೇ ಶತ್ರುಗಳಾದ ಮರಾಠರು ಅವಕಾಶ ವಂಚಿತರಾಗಿ ಗಡಿಬಿಡಿಯಿಂದ ಏನುಮಾಡಬೇಕೆಂದು ದಿಕ್ಕುತೋಚದೆ ಸೋಲನ್ನೊಪ್ಪಿಕೊಳ್ಳಬೇಕಾಯಿತು.[೪೦] ದೊಡ್ಡಯ್ಯನ ಈ ಸಮಯ ಪ್ರಜ್ಞೆಯಿಂದ ಅವನಿಗೆ ಚಿಕ್ಕದೇವರಾಜ ಒಡೆಯರು **'ಅರಿರಾಜಗಜ ಕಂಠೀರವ'** ಎಂಬ ಬಿರುದನ್ನು ನೀಡಿದರು. ಈ ವೇಳೆಗಾಗಲೇ ಇನ್ನೊಂದು ಕಡೆ ದಳವಾಯಿ ಕುಮಾರಯ್ಯನು ಸಾಮಂತ ಅರಸರಿಂದ ಕಪ್ಪಕಾಣಿಕೆಯನ್ನು ವಸೂಲಿ ಮಾಡಿದ್ದನು. ಇದರಿಂದ ದಳವಾಯಿ ಕುಮಾರಯ್ಯನ ಕಾಲದಲ್ಲಿ ಮೈಸೂರು ದಕ್ಷಿಣದಲ್ಲೇ ಅತ್ಯಂತ ಪ್ರಬಲ ರಾಜ್ಯವಾಗಿ ರೂಪುಗೊಂಡಿತು.

ಚಿಕ್ಕದೇವರಾಜ ಒಡೆಯರ ತರುವಾಯ ಸಿಂಹಾಸನವೇರಿದ ಇಮ್ಮಡಿ ಕಂಠೀರವ ನರಸರಾಜ ಒಡೆಯರು ಅಧಿಕಾರದ ಅವಧಿಯಲ್ಲಿ ಬಸವರಾಜಯ್ಯ(ಕ್ರಿ.ಶ.೧೭೦೫–೧೭೦೮) ನಂತರ ಮೈಸೂರಿನ ದಳವಾಯಿಗಳಾಗಿ ಅಧಿಕಾರವನ್ನು ನಿರ್ವಹಿಸಿದ ವಹಿಸಿಕೊಂಡ ಎರಡನೇ ನಂಜರಾಜಯ್ಯ(ಕ್ರಿ.ಶ.೧೭೦೮–೧೭೧೪)ನು ಹುಟ್ಟಿನಿಂದಲೇ ಕಿವುಡು ಮತ್ತು ಮೂಕನಾಗಿ ದೈಹಿಕ ದೌರ್ಬಲ್ಯವನ್ನು ಹೊಂದಿದ್ದ ಇಮ್ಮಡಿ ಕಂಠೀರವ ನರಸರಾಜ ಒಡೆಯರ ಆಡಳಿತಾವಧಿಯಲ್ಲಿ ಹೈದರಾಬಾದಿನ ನಿಜಾಮ ಮತ್ತು ಮರಾಠರು ಮೈಸೂರಿನ ಮೇಲೆ ದಾಳಿಮಾಡಲು ಪ್ರಯತ್ನಿಸುತ್ತಿದ್ದರು. ಈ ರೀತಿಯಾದ ಪ್ರಕ್ಷುಬ್ದ ರಾಜಕೀಯ ವಾತಾವರಣದಲ್ಲಿ ಬಸವರಾಜಯ್ಯ ಮತ್ತು ಅವನ ಮಗ ನಂಜರಾಜಯ್ಯ ಸಂಸ್ಥಾನದ ಆಡಳಿತವನ್ನು ನೋಡಿಕೊಂಡರು. ಒಂದನೇ ಕೃಷ್ಣರಾಜ ಒಡೆಯರು ಅಧಿಕಾರಕ್ಕೆ ಬಂದಾಗ ವೀರರಾಜಯ್ಯನು ದಳವಾಯಿಯಾಗಿ ನೇಮಕವಾದನು.[೪೧] ಅಂದಿನ ಪರಿಸ್ಥಿತಿಯಲ್ಲಿ ವೀರರಾಜ ಹೊಸದಾಗಿ ಯಾವ ಪ್ರದೇಶಗಳನ್ನು ಸೇರಿಸದಿದ್ದರೂ ಸಹ ಮೈಸೂರು ರಾಜ್ಯದಿಂದ ಯಾವ ಪ್ರದೇಶಗಳೂ ಬಿಟ್ಟು ಹೋಗದಂತೆ ಸಂಸ್ಥಾನವನ್ನು ರಕ್ಷಿಸಿದ್ದು ಆತನ ಮಹತ್ತರವಾದ ಸಾಧನೆಯಾಗಿದೆ.

ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಲಿಂಗಣ್ಣಯ್ಯನ ಮಗನು ಪ್ರಧಾನಿಯಾದರೆ, ಮುಂದಿನ ಅವಧಿಗೆ ಕಂಠೀರವ ಮಹಾರಾಜ ಒಡೆಯರ ಕಾಲಾವಧಿಯಲ್ಲಿಯೂ ಸಹ ದೇವರಾಯನದುರ್ಗದ ದಾಸರಾಜಯ್ಯನ ಅಧಿಕಾರವನ್ನು ಕಲ್ಲಹಳ್ಳಿಯ ಕಾಂತರಾಜಯ್ಯನಿಗೆ ವಹಿಸಿದರು. ಚಿಕ್ಕಬಳ್ಳಾಪುರದ ಯುದ್ಧದಲ್ಲಿ ಆತ ತೀರಿಹೋದ ನಂತರ ಅವನ ಮಗ ನಂಜರಾಜಯ್ಯನನ್ನು ದಳವಾಯಿಯಾಗಿ ನೇಮಿಸಿದರು. ಆದರೆ ನಂಜರಾಜಯ್ಯನ ಆತನ ಮಗನಾದ ಬಸವರಾಜಯ್ಯನು ಕೆಲಸದಲ್ಲಿ ಚತುರನೂ, ಕ್ರಿಯಾಶೀಲನೂ ಆಗಿದ್ದರಿಂದ ಆತನನ್ನು ದಳವಾಯಿಯಾಗಿ ನೇಮಿಸಿದರು. ಇದೊಂದು ರೀತಿಯಲ್ಲಿ ಅಧಿಕಾರವು ಒಬ್ಬರಿಂದ ಒಬ್ಬರಿಗೆ ಹಸ್ತಾಂತರವಾಗುತ್ತಿತ್ತು. ನಂಜರಾಜಯ್ಯನ ಅಧಿಕಾರವನ್ನು ತೆಗೆದು ಕಳಲೆಯ ದೊಡ್ಡಯ್ಯನ ಮಗ ವೀರರಾಜಯ್ಯನನ್ನು ನೇಮಕ ಮಾಡಿದರು.[೪೨] ಇದು ಅಂದಿನ ದಳವಾಯಿಗಳ ಕಾಲದ ಅಧಿಕಾರವನ್ನು ಪರಬಾರೆ ಮಾಡುವ ಕೆಲಸವು ತುಂಬಾ ಬೇಗನೆ ಕೈಗೂಡುತ್ತಿತ್ತು. ಈ ಪರಬಾರೆಯೇ ಮೈಸೂರಿನ ತದನಂತರದ ದಳವಾಯಿಗಳು ಅಂದರೆ ಕಳಲೆ ವಂಶದವರು ಅಧಿಕಾರಕ್ಕೆ ಬರಲು ಸಾಧ್ಯವಾಯಿತು. ಇವರು ತಮ್ಮ ಅಧಿಕಾರವು ತಮ್ಮಿಂದ ಬೇರೆಯವರಿಗೆ ಹಸ್ತಾಂತರವಾಗದಂತೆ ತಡೆಯಲು ತಾವೇ ರಾಜರನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಅರಸರನ್ನೇ ಬದಲಾಯಿಸುವ ಹಂತಕ್ಕೆ ಬೆಳೆದು ಸರ್ವಾಧಿಕಾರಿಗಳಂತೆ ವರ್ತಿಸತೊಡಗಿದರು.

ಮೈಸೂರು ರಾಜ್ಯದಲ್ಲಿ ಪ್ರಬಲ ಹಾಗೂ ಸಮರ್ಥ ಕಳಲೆಯ ದೇವರಾಜಯ್ಯನ ತಂದೆ ವೀರರಾಜಯ್ಯ ದಳವಾಯಿಯಾಗಿ ಅಧಿಕಾರವನ್ನು ನಡೆಸಿದ್ದು ನಮಗೆ ಶ್ರೀಮನ್ಮಹಾರಾಜರ ವಂಶಾವಳಿ ಕೃತಿಯಿಂದ ತಿಳಿದುಬರುತ್ತದೆ. ಈತನು ೧೦ವರ್ಷ, ಎರಡು ತಿಂಗಳು, ೧೮ದಿನಗಳು ದಳವಾಯಿತನವನ್ನು ಯಶಸ್ವಿಯಾಗಿ ನಿರ್ವಹಿಸಿದನು. ದೊಡ್ಡಕೃಷ್ಣರಾಜ ಒಡೆಯರ ಕಾಲದಲ್ಲಿ (ಕ್ರಿ.ಶ.೧೭೧೪–೩೨) ಅಧಿಕಾರಕ್ಕೆ ಬಂದ ಈತ ಮೈಸೂರಿನ ಸಮಸ್ತ ಅಧಿಕಾರವನ್ನು ತನ್ನಲ್ಲೇ

ಕೇಂದ್ರೀಕರಿಸಿಕೊಳ್ಳುವ ಪ್ರಯತ್ನವನ್ನು ಮಾಡಿದನು. ಅಲ್ಲದೆ ಈತ ದೊಡ್ಡಕೃಷ್ಣರಾಜ ಒಡೆಯರ ಕಾಲದಲ್ಲಿ ಹಲವಾರು ಕಾಳಗಗಳಲ್ಲಿ ಭಾಗವಹಿಸಿ ತನ್ನ ಬಗ್ಗೆ ಒಡೆಯರು ಗಮನಹರಿವಂತೆ ಮಾಡುವಲ್ಲಿ ಸಫಲನಾದನು. ಕ್ರಿ.ಶ.೧೭೨೪ರಲ್ಲಿ ಆರ್ಕಾಟಿನ ನವಾಬನಾದ ಸಾದುಲ್ಲಾಖಾನನ ದಿವಾನ ಶಿದ್ದೋಜಿ ಘೋರ್ಪಡೆಯು ಶ್ರೀರಂಗಪಟ್ಟಣದ ಮೇಲೆ ದಾಳಿಮಾಡಿದಾಗ ಆ ದಾಳಿಯನ್ನು ಹಿಮ್ಮೆಟ್ಟಿಸಲು ದೊಡ್ಡಕೃಷ್ಣರಾಜ ಒಡೆಯರು  ಫಿರಂಗಿಗಳಿಂದ ಯುದ್ಧಮಾಡಿ ಸೋಲಿಸಿ, ಮತ್ತೆ ಅವರನ್ನು ಬೆನ್ನಟ್ಟಿ ಹೋಗಿ ಅವರ ಕಿವಿ, ಮೂಗುಗಳನ್ನು ಕೊಯ್ಯಿಸಿದರು. ಕ್ರಿ.ಶ.೧೭೩೨ರಲ್ಲಿ ಮೈಸೂರಿನ ಅರಸರಾಗಿ ಆಯ್ಕೆಯಾದ ಚಾಮರಾಜ ಒಡೆಯರು. ಅಧಿಕಾರದಲ್ಲಿದ್ದರೂ ಕೇವಲ ನಾಮಮಾತ್ರ ಅರಸರಾಗಿ ಇರಬೇಕಾಯಿತು. ಇವರ ಪಟ್ಟಾಭಿಷೇಕ ಸಮಯದಲ್ಲಿ ದಳವಾಯಿಯು ಪಶ್ಚಿಮವಾಹಿನಿಯ ಹತ್ತಿರ ಕರೆದುಕೊಂಡು ಹೋಗಿ ಮಾತುಕತೆಯನ್ನು ಮಾಡಿದರು. ಅದರಂತೆ 'ನಿಮಗೆ ಪಟ್ಟವನ್ನು ಕಟ್ಟಿಸುತ್ತೇವೆ. ನೀವು ಮಹಾಮಾತೃ ಶ್ರೀ ದೇವರಾಜಮ್ಮಣ್ಣಿಯವರ ಆಜ್ಞಾನುಸಾರವಾಗಿ ಇರಬೇಕು. ಇಲ್ಲದಿದ್ದರೆ ಅಧಿಕಾರವು ನಿಮಗೆ ಸಲ್ಲದು' ಎಂದು ದಳವಾಯಿಯು ಪ್ರಮಾಣವನ್ನು ಮಾಡಿಸಿದನು.[೪೩] ಹೀಗೆ ಪ್ರಮಾಣ ಮಾಡಿಸಿ ಅಧಿಕಾರಕ್ಕೆ ತಂದು ಅವರನ್ನು ನಾಮಮಾತ್ರ ಅರಸನನ್ನಾಗಿ ಕಂಡಿದ್ದು ತಿಳಿದ ವಿಷಯ ತಾನೇ ಅರಸನೆಂದು ತಿಳಿದು. ತನ್ನ ತಮ್ಮನಾದ ಕರಚೂರಿ ನಂಜರಾಜಯ್ಯನೆಂಬುವನ ಜೊತೆ ಸೇರಿ ಗಡಿಯಲ್ಲಿ ಉತ್ಪತ್ತಿಯಾಗುತ್ತಿದ್ದ ಕಂದಾಯದಲ್ಲಿ ದಳವಾಯಿ ದೇವರಾಜಯ್ಯನಿಗೆ ೨,೦೦೦ ವರಹಗಳು ಹಾಗೂ ನಂಜರಾಜಯ್ಯನಿಗೆ ೧,೦೦೦ ವರಹಗಳನ್ನು ನೀಡುವಂತೆ ಒಪ್ಪಂದ ಮಾಡಿಕೊಂಡರು. ಈ ಒಪ್ಪಂದದಲ್ಲಿ ಇದಕ್ಕೆ ಶಾಮೀಲಾದ ಸಹಾಯಕರಿಗೂ ಅಂದರೆ ಅಧಿಕಾರವರ್ಗಕ್ಕೂ ಕೂಡ ಲಂಚದ ಆಮಿಷವೊಡ್ಡಿದರು. ಅವರು ಈ ಸಹೋದರರ ಕಾರ್ಯಸಾಧನೆಯ ಸಲುವಾಗಿ ಲಂಚ ಮತ್ತು ಭ್ರಷ್ಟಾಚಾರದಲ್ಲಿ ಭಾಗಿಯಾಗಿ ಅರಸರಿಗೆ ದ್ರೋಹವೆಸಗಲು ಮುಂದಾದರು.[೪೪] ಈ ರೀತಿ ಎಂಟು ತಿಂಗಳುಗಳ ಕಾಲ ಅಧಿಕಾರದಲ್ಲಿದ್ದಾಗ ತಮ್ಮ ಅರಸರಿಗೆ ದ್ರೋಹವೆಸಗಿ ಖಜಾನೆ ಹಾಗೂ ಉಗ್ರಾಣಗಳನ್ನು ಬರಿದುಮಾಡಿದರು. ಈ ಮೋಸದ ಜಾಲವನ್ನು ಪತ್ತೆಹಚ್ಚಿ ಅದನ್ನು ಬಯಲು ಮಾಡುವಲ್ಲಿ ಮುಂದಾಗಿ ಸಮಸ್ತ ಅಧಿಕಾರವನ್ನು ತಮ್ಮ ವಶಮಾಡಿಕೊಂಡು ಸ್ವತಂತ್ರವಾಗಿ ಆಳ್ವಿಕೆ ಮಾಡಲು ಯೋಜನೆಯನ್ನು ಚಾಮರಾಜ ಒಡೆಯರು ಮುಂದಾದರು. ಆದರೆ ಈ ಯೋಜನೆಯ ರಹಸ್ಯವನ್ನು ತಮ್ಮ ಕಡೆಯ ಸೇವಕರಿಂದ ತಿಳಿದ ದೇವರಾಜಯ್ಯನು ಅರಸನ ತಾಯಿಯಾದ ದೇವರಾಜಮ್ಮಣ್ಣಿಯವರ ಬಳಿ ಚಾಡಿಹೇಳಿ ಅವರು ಮುಂದೆ ಇದೇ ರೀತಿ ನಡೆದುಕೊಂಡರೆ ತಕ್ಕ ಶಿಕ್ಷೆಯನ್ನು ಅನುಭವಿಸಲು ಸಿದ್ಧವಾಗಿರುವಂತೆ ತಿಳಿಸಿದ್ದರಿಂದ ಅರಸನ ತಾಯಿಗೆ ತಮ್ಮ ಮಗನ ಮೇಲೆ ಇರಬೇಕಾದ ಮಮತೆಯು ಕಡಿಮೆಯಾಗಿ ಅಸೂಯೆ ಹೆಚ್ಚಾಗುವಂತೆ ಮಾಡಿದನು. ಅಲ್ಲದೆ ಅರಮನೆಯ ಉಗ್ರಾಣದಲ್ಲಿದ್ದ ಸಂಪತ್ತನ್ನು ತಮ್ಮ ಸ್ವಂತ ಖರ್ಚುಗಳಿಗೆ ಬಳಸಿಕೊಂಡರು. ಅರಮನೆಯ ಸಂಪತ್ತನ್ನು ಬಳಸಿಕೊಂಡು ದಳವಾಯಿ ದೇವರಾಜಯ್ಯನು ತನ್ನ ಕಡೆಗೆ ಅಧಿಕಾರಿಗಳನ್ನು ಸೆಳೆಯಲು ಸಫಲನಾದನು. ಈ ಭ್ರಷ್ಟಾಚಾರದಿಂದ ಅಧಿಕಾರಿಗಳು ಹಣದ ಆಸೆಗೆ ಬಲಿಯಾಗಿ

ತಮಗೆ ಅನ್ನ ಹಾಕುತ್ತಿದ್ದ ಮನೆಗೆ ಕನ್ನ ಹಾಕುವಂತಹ ಕಾರ್ಯಗಳಲ್ಲಿ ತೊಡಗಿಕೊಂಡು ದ್ರೋಹವೆಸಗುವಂತಹ ದಳವಾಯಿ ದೇವರಾಜಯ್ಯನ ಕಾರ್ಯಗಳಿಗೆ ಬೆಂಬಲಿಸಿ ಖಜಾನೆಯನ್ನು ಬರಿದುಮಾಡಿದರು. ದಳವಾಯಿ ದೇವರಾಜಯ್ಯನ ಈ ಭ್ರಷ್ಟಾಚಾರವನ್ನು ಅರಿತಂತಹ ಚಾಮರಾಜ ಒಡೆಯರು ದಳವಾಯಿಯ ಬದಲಿಗೆ ದೇವಯ್ಯ ಎಂಬುವನನ್ನು, ನಂಜರಾಜಯ್ಯನ ಬದಲಿಗೆ ವೀರಶೆಟ್ಟಿ ಎಂಬುವನನ್ನು ನೇಮಕಮಾಡಿದರು. ಗೋಪಿನಾಥಯ್ಯ ಎಂಬಾತನನ್ನು ಪ್ರಧಾನಿಯಾಗಿಸಿ ಮಂತ್ರಾಲೋಚನಾ ಸಭೆಯನ್ನು ನೇಮಿಸಿದರು. ಈ ಮಂತ್ರಾಲೋಚನಾ ಸಭೆಯಲ್ಲಿ ಕೇವಲ ನಾಲ್ಕು ಸದಸ್ಯರಿದ್ದರು. ಕಂಠೀರವಯ್ಯ, ಕಡೂರು ಚಿಕ್ಕಯ್ಯ, ನಾರಣಪ್ಪ, ಶಿವನಪ್ಪ ಎಂಬ ನಾಲ್ವರೇ ದಳವಾಯಿ ದೇವರಾಯ್ಯನು ಒಂದು ಯೋಜನೆಯನ್ನು ಹಾಕಿಕೊಂಡನು. ಈ ಯೋಜನೆಯ ಪ್ರಕಾರ ಅರಮನೆಯ ಒಳಗೆ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಅವ್ವೆಯರು, ಗುರಿಕಾರರು, ಕರಣಿಕರು, ಗೊಲ್ಲರು ಮತ್ತು ಉಳಿದ ಸೇವೆಗಳಲ್ಲಿದ್ದವರೂ ಸಹ ಅರಮನೆಯ ಉಗ್ರಾಣದಲ್ಲಿದ್ದಂತಹ ಆಹಾರ ಪದಾರ್ಥಗಳನ್ನು ಅರಸರು, ಅರಸನ ತಾಯಿ ಮತ್ತು ಕುಟುಂಬದವರಿಗೆ ಯಾವ ಸುಳಿವೂ ಬಾರದಂತೆ ಕಳ್ಳತನ ಮಾಡಿಸುವುದು. ಈ ವಿಧವಾದ ಮತ್ತೊಂದು ಯೋಜನೆಗೆ ಮುಂದಾಗಿ ದೊರೆಗಳಿಗೂ ಮತ್ತು ಅವರ ತಾಯಿಗೂ ವೈಮನಸ್ಸು ಉಂಟಾಗುವಂತೆ ಮಾಡಿದರು.

ದಳವಾಯಿ ದೇವರಾಜಯ್ಯನು ಚಾಮರಾಜ ಒಡೆಯರ ಸೇವೆಯಲ್ಲಿದ್ದ ಅನೇಕ ಜನರನ್ನು ತನ್ನತ್ತ ಸೆಳೆಯುವ ಪ್ರಯತ್ನವನ್ನು ಮಾಡಿ ಅದರಲ್ಲಿ ಯಶಸ್ವಿಯಾದನು. ಸೈನ್ಯದಲ್ಲಿದ್ದ ಸೈನಿಕರಿಗೆ ತನ್ನ ಪಕ್ಷವಹಿಸಿ ರಾಜ ವಿರೋಧಿಯಾದರೆ ಅಥವಾ ರಾಜ್ಯದ ವಿರೋಧಿ ಕಾರ್ಯಗಳಲ್ಲಿ ತೊಡಗಿದರೆ ಅಧಿಕಾರ ಹಾಗೂ ಸಂಪತ್ತಿನ ಗಳಿಕೆಗೆ ಅವಕಾಶ ನೀಡಲಾಗುವುದೆಂದು ತಿಳಿಸಿ ಅದರಲ್ಲಿ ಸಫಲನಾದನು. ಅದರಲ್ಲಿ ಸೇನಾಧಿಕಾರಿಗಳನ್ನು ರಾತ್ರಿಯ ವೇಳೆಯಲ್ಲಿ ಯಾರಿಗೂ ಅರಿಯದಂತೆ ಕೋಟೆಯ ಹೊರಕ್ಕೆ ಕರೆದುಕೊಂಡು ಹೋಗಿ ಸೈನ್ಯದ ಮುಖ್ಯಸ್ಥನಾಗಿದ್ದ ಮದ್ದಗಿರಿಯ ಮಲ್ಲರಾಜಯ್ಯನ ಬಳಿ ಅಧಿಕಾರದಲ್ಲಿದ್ದ ಗುಲಾಂ ಹೈದರನನ್ನು ಸಂಪತ್ತಿನ ಆಮಿಷದಿಂದ ಗುಲಾಂ ಹೈದರ್ ಮತ್ತು ದಳವಾಯಿ ದೇವರಾಜಯ್ಯನಿಗೂ ಮಾತುಕತೆಯಾಯಿತು. ದೇವರಾಜಯ್ಯನು ನೀವು ಮಹಾಶೂರರು ನಮ್ಮ ಪರಾಕ್ರಮವು ನಿಮಗೆ ತಿಳಿದಿದೆ. ನೀವು ಪೂರ್ವದಿಂದ ನಮ್ಮ ತಾಬೇದಾರಿಯಲ್ಲೇ ಇದ್ದೀರಿ. ನಿಮಗೆ ನಾವು ಬಹಳ ಉಪಕಾರವನ್ನು ಮಾಡಿದ್ದೇವೆ. ಇನ್ನೂ ನಿಮಗೆ ಉಪಕಾರಗಳನ್ನು ಮಾಡುವೆವು. ಈಗ ಅರಮನೆಯಿಂದ ಬರುವ ಸಂಬಳವನ್ನು ತೆಗೆದುಕೊಂಡು ದೊರೆಗಳ ಬಳಿಯಲ್ಲಿ ಇನ್ನು ಮೇಲೆ ಚಾಕರಿ ಮಾಡುವುದಿಲ್ಲವೆಂದು ಹೊರಟುಬಂದರೆ ನಿಮಗೆ ಪೂರ್ವದಂತೆ ಸಂಬಳವನ್ನು ನಾವೇ ಕೊಡುವೆವು ಎಂದು ಆಸೆಯನ್ನು ತೋರಿಸಿದನು. ಈ ಮಾತುಕತೆಯ ಫಲವಾಗಿ ಗುಲಾಂ ಹೈದರನು ತನ್ನ ಸುಪರ್ದಿಯಲ್ಲಿದ್ದ ೨ ಸಾವಿರ ಅಶ್ವದಳ, ೬ಸಾವಿರ ಬಾರಿನವರೊಂದಿಗೆ ಸಂಬಳವನ್ನು ತೆಗೆದುಕೊಂಡು ಸೇವೆಯಿಂದ ಹೊರಬಂದು ಶ್ರೀರಂಗಪಟ್ಟಣದ ಕೋಟೆಯ ಹೊರಗೆ ಒಂದು ಹರದಾರಿ ದೂರದಲ್ಲಿ ಇಳಿದುಕೊಂಡರು. ಈ ವಿಷಯವನ್ನು ತಿಳಿದ ದೇವರಾಜಯ್ಯನು ಜಗನ್ನಾಥದಾಸ ಎಂಬ

ರಾಜಕೀಯ ಮುಖಂಡನಾದ ಸಾಹುಕಾರನ ಮೂಲಕ ಎರಡುಲಕ್ಷ ರೂಪಾಯಿಗಳನ್ನು ಆ ದಂಡಿನ ಜನಗಳಿಗೆ ವೇತನವಾಗಿ ಕೊಟ್ಟು ನೀವುಗಳು ನಾವು ಯಾವಾಗ ಬರಹೇಳಿದರೂ ಆ ವೇಳೆಗೆ ಯುದ್ಧಸನ್ನದ್ಧರಾಗಿ ಬರಬೇಕೆಂದು ತಿಳಿಸಿದನು. ಪ್ರತಿ ಶುಕ್ರವಾರದಲ್ಲೂ ಸಹ ಕೋಟೆಯ ಹೊರಗೆ ಎರಡು ಹರದಾರಿ ಪರ್ಯಂತಕ್ಕೂ ಹೋಗಿ ಅಲ್ಲಿರುವ ಮೈದಾನದಲ್ಲಿ ಕವಾಯಿತು ಮಾಡಿಕೊಂಡು ಬರುವ ಪದ್ಧತಿಯಂತೆ ಒಂದು ಶುಕ್ರವಾರದ ದಿನ ದಳವಾಯಿ ದೇವಯ್ಯನು ಸಕಲ ಸೈನ್ಯವನ್ನೂ ಕರೆದುಕೊಂಡು ಕವಾಯತಿಗೆ ಕೋಟೆಯ ಹೊರಗಿರುವ ಸಮಯವನ್ನು ನಿರೀಕ್ಷಿಸಿದ್ದ ದಳವಾಯಿ ದೇವರಾಯ್ಯನು ತನ್ನ ಕಡೆಯ ಸೇವಕರಿಂದ ಕವಾಯತಿಗೆ ಹೋಗಿದ್ದ ಸೈನ್ಯವು ಕೋಟೆಯ ಒಳಗೆ ಪ್ರವೇಶಿಸದಂತೆ ಬಾಗಿಲನ್ನು ಭದ್ರಪಡಿಸಿದನು. ಈ ವಿಷಯವನ್ನು ತಿಳಿದ ಚಾಮರಾಜ ಒಡೆಯರು ಮತ್ತು ದೇವರಾಜಯ್ಯನಿಗೂ ಸಂಧಾನದ ಯತ್ನವು ವಿಫಲವಾಯಿತು. ಜೊತೆಗೆ ದೇವರಾಜಯ್ಯನು ರಾಮಬಾಣ ಎಂಬ ಆನೆಯ ಸಹಾಯದಿಂದ ಅರಮನೆಯ ಬಾಗಿಲನ್ನು ಮುರಿಸಿ ತನ್ನ ಕಡೆಯ ಸೈನಿಕರಿಂದ ಅರಮನೆಗೆ ಕಾವಲನ್ನು ಹಾಕಿ ನಾಗೋಜಿರಾಯನೆಂಬ ಜಮಾದಾರನನ್ನು ಅರಮನೆಗೆ ಕಳುಹಿಸಿದನು. ನಾಗೋಜಿರಾಯನು ಕೂಡಲೇ ಅರಸರಲ್ಲಿದ್ದ ಶಿಖಾ ಮೊಹರು ಮತ್ತು ಪಟ್ಟದ ಕತ್ತಿಯನ್ನು ಸಿಂಹಾಸನದ ಮೇಲಿರಿಸಿ ಕೂಡಲೇ ಅರಸನನ್ನು ಬಂಧಿಸಿದ ದೇವರಾಜಯ್ಯನು ಅವರನ್ನು ಕಬ್ಬಾಳುದುರ್ಗಕ್ಕೆ ಕಳುಹಿಸಿದನು.[೪೬]

ಕ್ರಿ.ಶ.೧೭೩೪ರಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರ್ ಎಂಬ ೬ವರ್ಷದ ಮಗುವನ್ನು ದತ್ತು ತೆಗೆದುಕೊಂಡು ಮೈಸೂರಿನ ಸಿಂಹಾಸನದ ಮೇಲೆ ಕೂರಿಸಲಾಯಿತು. ಇದರ ಉದ್ದೇಶವೇನೆಂದರೆ ವಯಸ್ಸಿಗೆ ಬಂದವರು ಬಲಶಾಲಿಗಳಾಗಿ ಮತ್ತು ಪ್ರಶ್ನಿಸುವ ಮನೋಭಾವವನ್ನು ಹೊಂದಿರುತ್ತಾರೆ. ಆದರೆ ಏನೂ ಅರಿಯದ ಚಿಕ್ಕವಯಸ್ಸಿನ ಮಕ್ಕಳು ಯಾವುದನ್ನೂ ಪ್ರಶ್ನಿಸುವ ಮತ್ತು ಲೋಕಜ್ಞಾನವೇ ಇಲ್ಲದವರಾಗಿ ಹೇಳಿದಂತೆ ಕೇಳುತ್ತಾರೆ. ಅವರ ಪರವಾಗಿ ಅಧಿಕಾರವನ್ನು ನಾವು ಚಲಾಯಿಸಬಹುದೆಂಬ ಹೆಬ್ಬಯಕೆಯಾಗಿತ್ತು. ಈ ಹೆಬ್ಬಯಕೆಯು ಅವರ ದುರಾಸೆಯನ್ನು ಬಿಂಬಿಸುತ್ತದೆ. ಅಲ್ಲದೆ ಸುಲಭವಾಗಿ ಪ್ರತಿಸ್ಪರ್ಧಿಗಳಿಲ್ಲದೆ ನಮ್ಮ ವಂಶದವರಿಗೆ ಅಧಿಕಾರವನ್ನು ಹಸ್ತಾಂತರಿಸಬಹುದೆಂದು ಆಲೋಚಿಸಿರಬೇಕು. ಆದ್ದರಿಂದ ದಳವಾಯಿ ದೇವರಾಜಯ್ಯನು ಚಿಕ್ಕವಯಸ್ಸಿನ ಮಗುವನ್ನೇ ಅಧಿಕಾರಕ್ಕೆ ತಂದನು. ಅಲ್ಲದೆ ಅರಸರಿಗೆ ಮತ್ತು ಅರಮನೆಯ ಖಜಾನೆಗೆ ಸೇರಬೇಕಾಗಿದ್ದ ೨-೩ಸಾವಿರ ವರಹಗಳನ್ನು ಗಡಿಯೊಂದರಂತೆ ನಿಗಧಿ ಮಾಡಿಕೊಂಡಿದ್ದರು. ಈ ಹಣಕ್ಕೆ **'ದಳವಾಯಿ ಪಣ್ಯ'**ವೆಂದು ಹೆಸರಿಟ್ಟಿದ್ದರು. ದಳವಾಯಿ ದೇವರಾಜಯ್ಯನು ಕ್ರಿ.ಶ. ೧೭೩೯ರಲ್ಲಿ ಸಾಯುವ ವೇಳೆಗೆ ಒಂದು ವಿಜ್ಞಾಪನೆಯನ್ನು ಬರೆಸಿದ್ದನು. ಅದರ ಸಾರಾಂಶವು ಹೀಗಿದೆ. 'ಮರಾಠರು ಮೋಸಗಾರರಾಗಿದ್ದಿರುವುದರಿಂದ ಅವರನ್ನು ನಂಬಲಾಗದು. ಕನ್ನಂಬಾಡಿಯ ವೆಂಕಪತಯ್ಯನಿಗೆ ಉಭಯ ವಿಚಾರದ ಚಾವಡಿಯಲ್ಲಿ ಕರಣಿಕತನವನ್ನು ಕೊಡುವುದೇ ಹೊರತು ಪ್ರಧಾನತನದಲ್ಲಿ ನಿಲ್ಲಿಸಲಾಗದು ಮೊಗಲರ ಸಂಗಡ

ದ್ವೇಷ ಮಾಡತಕ್ಕುದಲ್ಲ. ಮದ್ದಗಿರಿಯ ಮಲ್ಲರಾಜಯ್ಯನು ದೊರೆಗಳವರ ಅಪ್ಪಣೆಯ ಮೇರೆಗೆ ಅರಮನೆಯಿಂದ ೧೦ ಸಾವಿರ ವರಹ ಕೊಟ್ಟು ಕ್ರಯಕ್ಕೆ ತೆಗೆದುಕೊಂಡು ಬೆಂಗಳೂರಿನಲ್ಲಿ ಕತ್ತಿಗೋಪಾಲ ರಾಜಯ್ಯನವರ ತೈನಾತಿಗೆ ಕೊಟ್ಟಿರುವ ಮಹಮ್ಮದ್ ಶಾಹಸ್ಸಾಭಿ, ಇವನ ತಮ್ಮ ಹೈದರ್ ಅಲಿಖಾನ್‌ನನ್ನೂ ಇದ್ದಾರೆ. ಅದರಲ್ಲಿಯೂ ಹೈದರ್ ಅಲಿ ಎಂಬುವವನ ಬಳಿ ೫೦ ಕುದುರೆಗಳೂ ೧೦೦ ಜನ ಸೈನಿಕರನ್ನು ಕೊಡುವುದನ್ನು ಬಿಟ್ಟು ಹೆಚ್ಚು ಅಧಿಕಾರವನ್ನು ಕೊಡುವಂತಿಲ್ಲ. ಅವನಿಗೆ ಹೆಚ್ಚು ಅಧಿಕಾರವನ್ನು ನೀಡಿದರೆ ಮುಂದೆ ಅವನ ಮಗನ ಕಾಲಕ್ಕಾದರೂ ರಾಜ್ಯಕ್ಕೆ ತೊಂದರೆ ಸಂಭವಿಸಬಹುದೆಂದು ಹೇಳಿ ದಳವಾಯಿತನವನ್ನು ತನ್ನ ತಮ್ಮ ನಂಜರಾಜಯ್ಯನಿಗೆ ಕೊಡಿಸಿದನು.[೪೭] ನಂಜರಾಜಯ್ಯನ ಮುಖಾಂತರವಾಗಿ ದೇವರಾಜಯ್ಯನು ಹೈದರನ ಸಾಮರ್ಥ್ಯವನ್ನು ದೇವನಹಳ್ಳಿಯ ಕದನದಲ್ಲಿ ಗುರುತಿಸಿದ್ದನು. ಆದರೆ ಆತ ಹೈದರನ ಶಕ್ತಿಸಾಮರ್ಥ್ಯಗಳನ್ನು ಕಂಡು, ಮುಂದೊಂದು ದಿನ ಇವನು ಮೈಸೂರಿನ ಅಧಿಕಾರವನ್ನು ವಹಿಸಿಕೊಳ್ಳುತ್ತಾನೆಂಬ ಭಯವಿದ್ದಿತು. ತನ್ನ ಕೊನೆಗಾಲದಲ್ಲಿ ದಳವಾಯಿ ದೇವರಾಜಯ್ಯನು ಪ್ರಧಾನ ವೆಂಕಟಪಯ್ಯನ ಕೈಯಲ್ಲಿ ಮೂರುಲಕ್ಷ ವರಹಗಳನ್ನು ದಂಡವನ್ನು ತೆಗೆದುಕೊಂಡು ತನ್ನ ಮನೆಗೆ ಹಾಕಿಕೊಂಡನು. ಅವನ ಪ್ರಧಾನಿ ಹುದ್ದೆಯಿಂದ ತೆಗೆದು ಅದನ್ನು ಬಾಗಿಲ ಕಂದಾಚಾರದ ಚಾವಡಿಯಲ್ಲಿದ್ದ ೮೦ ವರ್ಷ ವಯಸ್ಸಿನ ಚನ್ನಪ್ಪಯ್ಯನಿಗೆ ಕೊಟ್ಟನು.

ಕ್ರಿ.ಶ. ೧೭೩೮ರಲ್ಲಿ ಶ್ರೀರಂಗಪಟ್ಟಣದ ದಳವಾಯಿಯಾಗಿ ಅಧಿಕಾರವನ್ನು ವಹಿಸಿಕೊಂಡ ದಳವಾಯಿ ನಂಜರಾಜಯ್ಯನು. ಮೈಸೂರು ಅರಸರನ್ನು ತನ್ನ ಅಣ್ಣ ದೇವರಾಜಯ್ಯನು ಉಪಚರಿಸಿದಂತೆ ತಾನೂ ಕೂಡ ಅರಸರನ್ನು ಕೇವಲ ನಾಮಮಾತ್ರವಾಗಿ ಉಪಚರಿಸತೊಡಗಿದನು. ಅಲ್ಲದೆ ಕೆಲವೊಂದು ಯುದ್ಧಗಳಲ್ಲಿ ಭಾಗವಹಿಸಿ ಅತಿಯಾದ ಸಂಪತ್ತಿನ ದುರಾಸೆಗೆ ಬಲಿಯಾಗಿ ಆಪತ್ತುಗಳನ್ನು ತಂದೊಡ್ಡಿಕೊಳ್ಳುತ್ತಿದ್ದನು. ನಂಜರಾಜಯ್ಯನು ದಕ್ಷಿಣ ಭಾರತದ ಪ್ರಖ್ಯಾತ ಮತ್ತು ಆಯಕಟ್ಟಿನ ಸ್ಥಳವಾಗಿದ್ದ ಆರ್ಕಾಟಿನ ಮೇಲೆ ಗಮನವನ್ನು ಹರಿಸಿದನು. ಆರ್ಕಾಟಿನ ಮೇಲೆ ನಾಸಿರ್‌ಜಂಗನು ದಾಳಿಯನ್ನು ಮಾಡಿದಾಗ ಆರ್ಕಾಟಿನ ನವಾಬನಾಗಿದ್ದ ಮಹಮದ್ ಅಲಿಯು ತನ್ನ ಮತ್ತು ನಾಸಿರ್‌ಜಂಗನ ನಡುವೆ ನಡೆದಂತಹ ಒಳಜಗಳದಲ್ಲಿ ಸೈನ್ಯದ ಸಹಾಯವನ್ನು ಮಾಡಿದರೆ ಮಹಮದ್ ಅಲಿಯು ವಿಜಯಿಯಾದ ಪಕ್ಷದಲ್ಲಿ ನಂಜರಾಜಯ್ಯನ ಸಹಾಯಕ್ಕೆ ಪ್ರತಿಫಲವಾಗಿ ತಿರುಚನಾಪಳ್ಳಿ, ಮಧುರೈ, ತಿರುನಲ್ವೇಲಿ ಪ್ರದೇಶಗಳನ್ನು ನೀಡುವುದಾಗಿ ತಿಳಿಸಿ ಒಪ್ಪಂದ ಮಾಡಿಕೊಂಡನು. ಈ ಒಪ್ಪಂದದ ಅಂಶಗಳು ಬ್ರಿಟಿಷರಿಗೂ ಅರಿಯದಷ್ಟು ಗುಪ್ತವಾಗಿದ್ದವು. ತಿರುಚನಾಪಳ್ಳಿಯ ಕೋಟೆಯನ್ನು ಮೈಸೂರಿನ ನಿಯಂತ್ರಣದಲ್ಲಿಡಲು ನಂಜರಾಜಯ್ಯನು ಮಹತ್ವಾಕಾಂಕ್ಷೆಯನ್ನು ಹೊಂದಿದ್ದನು. ಆದ್ದರಿಂದ ಮಹಮದ್ ಅಲಿಯ ಆಹ್ವಾನಕ್ಕೆ ಸಮ್ಮತಿಸಿ ಆತನ ಪರವಾಗಿ ಹೋರಾಡಲು ತೀರ್ಮಾನಿಸಿದನು.

ದಳವಾಯಿ ನಂಜರಾಜಯ್ಯನು ಒಪ್ಪಂದದ ಪ್ರಕಾರ ೧೭೫೧ರ ಅಕ್ಟೋಬರ್‌ನಲ್ಲಿ ಮಾಹೆಯಲ್ಲಿ ಸುಸಜ್ಜಿತ ಮೈಸೂರು ಸೈನ್ಯದ ದಂಡನಾಯಕತ್ವವನ್ನು ವಹಿಸಿಕೊಂಡು, ಶ್ರೀರಂಗಂನಲ್ಲಿ ಮುರಾರಿರಾವ್ ನೇತೃತ್ವದ ಮರಾಠರ ಸೈನ್ಯವನ್ನು ಜೊತೆಗೂಡಿ ತಿರುಚನಾಪಳ್ಳಿಯ ಕಡೆಗೆ ಪ್ರಯಾಣವನ್ನು ಬೆಳೆಸಿದನು. ಈ ಯುದ್ಧದಲ್ಲಿ ಆರ್ಕಾಟ್, ಮದ್ರಾಸ್ ಮತ್ತು ಯೂರೋಪಿಯನ್ ಸೈನಿಕರೊಂದಿಗೆ ಯುದ್ಧಮಾಡುವ ಹಾಗೂ ಹೊಸಹೊಸ ತಂತ್ರಗಾರಿಕೆಯನ್ನೂ ಅಳವಡಿಸಿಕೊಳ್ಳುವ ಪ್ರಯತ್ನಗಳಿಗೆ ತನ್ನ ಸೈನ್ಯವು ಒಗ್ಗಿಕೊಳ್ಳುವಂತೆ ಮಾಡಿದನು. ಈ ಯುದ್ಧದಲ್ಲಿ ಚಂದಾಸಾಹೇಬನ ಕೊಲೆಯಾಗಿ ಮಹಮದ್ ಅಲಿಯು ವಿಜಯವನ್ನು ಪಡೆದನು.[೪೭] ಆದರೆ ಮಹಮದಾಲಿಯು ಕೊಟ್ಟಮಾತಿನಂತೆ ತನ್ನ ಪ್ರದೇಶಗಳನ್ನು ನಂಜರಾಜಯ್ಯನಿಗೆ ಬಿಟ್ಟುಕೊಡಲಿಲ್ಲ. ಅಲ್ಲದೆ ಯೂರೋಪಿಯನ್ನರೊಂದಿಗಿನ ಹೋರಾಟವು ಮೈಸೂರಿನ ಸೈನಿಕರು ಮಾನಸಿಕವಾಗಿ ಸದೃಢರಾಗಿರುವಂತೆ ಮಾಡಿತು. ಅಷ್ಟೇ ಅಲ್ಲದೆ ಹೈದರ್‌ನು ಮೈಸೂರಿನ ಸೈನ್ಯಕ್ಕೆ ಯೂರೋಪಿಯನ್ ಮಾದರಿಯ ತರಬೇತಿಯನ್ನು ನೀಡುವ ಯೋಜನೆಯನ್ನು ಹಾಕಿಕೊಂಡನು.

ಮಹಮದ್ ಅಲಿಯು ಉಪಾಯವಾಗಿ ನಂಜರಾಜಯ್ಯನನ್ನು ತಿರುಚನಾಪಳ್ಳಿಯ ಕೋಟೆಯೊಳಗೆ ಕರೆಸಿ ಕೋಟೆಯ ಬಾಗಿಲನ್ನು ಭದ್ರಪಡಿಸಿ ಆತನ ಮೇಲೆರಗಿದನು. ಈ ಘಟನೆಯನ್ನು ನಂಜರಾಜಯ್ಯನು ಊಹಿಸಿಕೊಳ್ಳುವುದು ಅಸಾಧ್ಯವಾಗಿತ್ತು. ಏಕೆಂದರೆ ಹೇಗಾದರೂ ಮಾಡಿ ಯುದ್ಧಪೂರ್ವದ ಒಪ್ಪಂದದಿಂದ ಬಿಟ್ಟುಕೊಡಬಹುದಾದ ಪ್ರದೇಶಗಳ ರಕ್ಷಣೆ ಹಾಗೂ ದಳವಾಯಿಯ ಕೊಲೆಯೇ ಇದರ ಉದ್ದೇಶವಾಗಿತ್ತು. ಈ ಸಂದರ್ಭದಲ್ಲಿ ಮೊದಲೇ ಅಪಾಯವನ್ನು ಊಹಿಸಿದ್ದ ಹೈದರನು ಕೋಟೆಯ ಬಾಗಿಲನ್ನು ಹೊಡೆದು ನಂಜರಾಜಯ್ಯನನ್ನು ರಕ್ಷಿಸಿ ಹೊರಗೆ ಕರೆದುಕೊಂಡು ಬಂದನು.

ದಳವಾಯಿ ನಂಜರಾಜಯ್ಯನು ತಿರುಚನಾಪಳ್ಳಿಯ ಕದನದ ನಂತರ ತನ್ನ ಸೈನಿಕರ ವಿರೋಧವನ್ನು ಎದುರಿಸಬೇಕಾಯಿತು. ಏಕೆಂದರೆ ತಿರುಚನಾಪಳ್ಳಿಯ ಕದನವು ಮೂರು ವರ್ಷಗಳ ದೀರ್ಘ ಅವಧಿಯವರೆಗೆ ನಡೆದಿದ್ದರಿಂದ ಸೈನಿಕರಿಗೆ ದಳವಾಯಿಯು ವೇತನವನ್ನೇ ನೀಡಿರಲಿಲ್ಲ,. ಸೈನಿಕರು ತನ್ನ ವಿರುದ್ಧ ತಿರುಗಿಬಿದ್ದಾಗ ದಳವಾಯಿಯು ತನ್ನನ್ನು ಕಾಪಾಡುವಂತೆ ಹೈದರನ ಮೊರೆಹೋದನು. ಹೈದರನು ತಾನು ಮಹಮದಲಿಯಿಂದ ಕೊಳ್ಳೆ ಹೊಡೆದು ತನ್ನಲ್ಲಿಯೇ ರಕ್ಷಿಸಿಕೊಂಡಿದ್ದ ಸಂಪತ್ತನ್ನು ಸೈನಿಕರಿಗೆ ವೇತನ ನೀಡಲು ಉಪಯೋಗಿಸಿದನು. ಈ ಸಮಸ್ಯೆಯನ್ನು ಸುಲಭವಾಗಿ ಬಗೆಹರಿಸಿದ್ದರಿಂದ ಹೈದರಾಲಿಗೆ ಇಮ್ಮಡಿ ಕೃಷ್ಣರಾಜ ಒಡೆಯರ್ **'ಬಹದ್ದೂರ್'**[೪೮] ಎಂಬ ಬಿರುದನ್ನು ನೀಡಿದರು. ಇದೇ ಸಮಯದಲ್ಲಿ ದಳವಾಯಿಯು ತನ್ನ ಅಳಿಯನಾಗಿದ್ದ ಇಮ್ಮಡಿ ಕೃಷ್ಣರಾಜ ಒಡೆಯರ್ ಸಕಲ ಆಡಳಿತವನ್ನು ನಾನೇ ನೋಡಿಕೊಳ್ಳಬೇಕೆಂಬ ದುರಾಸೆಯಿಂದ ಹೈದರಾಲಿಯು ದಿಂಡಿಗಲ್ಲಿಗೆ ಹೋಗಿರುವ ಸಂದರ್ಭದಲ್ಲಿ ದಳವಾಯಿಯು ತನ್ನ ವಿರೋಧಿಗಳಿಂದ ಅರಸನು ಬಿಡುಗಡೆಗೊಳಿಸಬೇಕೆಂದು ಅರಮನೆಯ ಬಾಗಿಲಿಗೆ ೪ ಫಿರಂಗಿಗಳಿಂದ ಗುಂಡುಗಳನ್ನು ಹೊಡೆಸಿದನು.[೪೯] ಇದು ದಳವಾಯಿಯ ತಿಂದ ಮನೆಗೆ ಕನ್ನ ಹಾಕುವಂತಹ ನಿಕೃಷ್ಟವಾದ

ಮನಸ್ಥಿತಿಯನ್ನು ತಿಳಿಸುತ್ತದೆ. ಅರಸನು ತನ್ನವನು ಅವನಲ್ಲಿ ಯಾರೂ ಅತ್ಯಂತ ಸಲುಗೆಯಿಂದ ಮಾತನಾಡಿಸುವಂತಾಗಲೀ ಅಥವಾ ವರ್ತಿಸುವುದಾಗಲೀ ಮಾಡುವಂತಿಲ್ಲ. ಅಲ್ಲದೆ ಅಧಿಕಾರದಲ್ಲಿ ಅರಸನಿಗೆ ನನ್ನನ್ನು ಬಿಟ್ಟು ಯಾರೂ ಹಸ್ತಕ್ಷೇಪ ಮಾಡುವಂತಿಲ್ಲ ಎಂಬ ಅಹಂಕಾರದಿಂದ ಈ ಕೃತ್ಯವನ್ನು ನಡೆಸಿರಬೇಕು. ಸೈನ್ಯದಲ್ಲಿ ಸೇವೆಸಲ್ಲಿಸುತ್ತಿದ್ದ ಸೈನಿಕರಿಗೆ ಆ ವೇಳೆಗೆ ವೇತನವನ್ನು ನೀಡದೆ ಸತಾಯಿಸಲಾಗುತ್ತಿತ್ತು. ಇದರಿಂದ ಸೈನಿಕರು ಮತ್ತೆ ದಳವಾಯಿಯ ವಿರುದ್ಧ ದಂಗೆಯೆದ್ದರು. ಇದು ನಿಜಕ್ಕೂ ದಳವಾಯಿ ಮತ್ತು ಸೈನಿಕರ ನಡುವಿನ ಆಡಳಿತಾತ್ಮಕ ಅಂತರವನ್ನು ಎತ್ತಿ ಹಿಡಿಯುತ್ತದೆ. ಏಕೆಂದರೆ ತನ್ನ ಸ್ವಾರ್ಥ ಸಾಧನೆಗಾಗಿಯೇ ದಳವಾಯಿಯು ರಾಜ್ಯದ ಕಂದಾಯ ರೂಪದಲ್ಲಿ ಸಂದಾಯವಾಗುತ್ತಿದ್ದ ಕಂದಾಯವನ್ನು ಬಳಸಿಕೊಂಡಿದ್ದನು. ಅಲ್ಲದೆ ಅನಾವಶ್ಯಕವಾಗಿ ದಳವಾಯಿಯು ತಿರುಚನಾಪಳ್ಳಿಯ ಮೇಲೆ ದಂಡೆತ್ತಿ ಹೋಗಿದ್ದು ಪ್ರಮುಖವಾದ ಕಾರಣಗಳಾಗಿವೆ. ದಳವಾಯಿ ದೇವರಾಜಯ್ಯನು ಈ ವೇಳೆಗಾಗಲೇ ಅರಸರೊಂದಿಗೆ ಮನಸ್ತಾಪವನ್ನು ಹೊಂದಿದ್ದನು. ಏಕೆಂದರೆ ದಳವಾಯಿ ದೇವರಾಜಯ್ಯನು ತಾನು ಹೈದರನಿಗೆ ಅಧಿಕಾರವನ್ನು ವಹಿಸಿಕೊಡದಂತೆ ಕೇಳಿಕೊಂಡರೂ ಸಹ ನಂಜರಾಜಯ್ಯ ಮತ್ತು ಇಮ್ಮಡಿ ಕೃಷ್ಣರಾಜ ಒಡೆಯರು ಸೈನಿಕ ಅಧಿಕಾರವನ್ನು ಹೈದರನಿಗೆ ವಹಿಸಿಕೊಟ್ಟಿದ್ದು ದಳವಾಯಿ ದೇವರಾಜಯ್ಯನಿಗೆ ಅಸಮಧಾನವನ್ನು ಉಂಟುಮಾಡಿತ್ತು. ಇದರಿಂದ ದೊರೆಗಳೊಂದಿಗೆ ಮನಸ್ತಾಪ ಹೊಂದಿದ್ದ ದೇವರಾಜಯ್ಯನು ದೊರೆಗಳ ಅಪ್ಪಣೆಯಿಲ್ಲದೆ ೧,೦೦೦ ಕುದುರೆಗಳು ಮತ್ತು ೫,೦೦೦ ಬಾರ್‌ಇಲಾಖೆಯ ಸೈನಿಕರೊಂದಿಗೆ ತನ್ನ ಆಪ್ತನಾಗಿದ್ದ ಚನ್ನಪ್ಪಯ್ಯನನ್ನು ಕರೆದುಕೊಂಡು ಸತ್ಯಮಂಗಲಕ್ಕೆ ಹೊರಟು ಹೋದನು. ಆದರೆ ಹೈದರನು ಇವರಿಬ್ಬರ ಮನಸ್ಥಾಪವನ್ನು ಬಗೆಹರಿಸಲು ಪ್ರಯತ್ನಿಸಲಿಲ್ಲ. ನಂಜರಾಜಯ್ಯನು ಹೈದರನಿಗೆ ಬಿಟ್ಟಿದ್ದ ಈರೋಡು, ಧಾರಾಪುರ, ಸತ್ಯಮಂಗಲ ಮುಂತಾದ ಪ್ರದೇಶಗಳ ಕಂದಾಯವನ್ನು ಹೈದರನಿಗೆ ಕೊಡುವಂತಿಲ್ಲ ಎಂದು ನಿರೂಪವನ್ನು ಬರೆಸಿದನು. ಇದನ್ನು ತಿಳಿದ ಹೈದರನು ತನಗೆ ಹಿಂದಿನ ರೀತಿಯಲ್ಲೇ ಎಲ್ಲಾ ಕಂದಾಯವು ಸರಾಗವಾಗಿ ಹರಿದುಬರುವಂತೆ ಏರ್ಪಾಟು ಮಾಡಿಕೊಂಡನು. ಕ್ರಿ.ಶ.೧೭೫೭ರಲ್ಲಿ ಮತ್ತೆ ದಂಡಿನ ಜನರಲ್ಲಿ ವೇತನದ ಸಮಸ್ಯೆಯು ತಲೆದೋರಿತು. ದೇವರಾಜಯ್ಯ ಮತ್ತು ನಂಜರಾಜಯ್ಯರು ತಮ್ಮ ಸ್ವಾರ್ಥಕ್ಕೋಸ್ಕರ ರಾಜ್ಯದ ಆದಾಯ ಮತ್ತು ಬೊಕ್ಕಸವನ್ನು ಬಳಸಿಕೊಂಡರು. ಅರಸರು ಹೈದರನನ್ನು ತಮಗೆ ಸಹಾಯಮಾಡುವಂತೆ ಕೇಳಿಕೊಂಡರೆ ಹೈದರನುದೇವರಾಜಯ್ಯ ಮತ್ತು ನಂಜರಾಜಯ್ಯನವರ ಪ್ರಬಲವಾದ ವಿರೋಧವನ್ನು ಎದುರಿಸಬೇಕೆಂಬ ಹಿಂಜರಿತದಿಂದ ನಯವಾಗಿ ಆ ಮನವಿಯನ್ನು ತಿರಸ್ಕರಿಸಿದನು. ಆದರೂ ಈ ಕಾಲದಲ್ಲಿ ದಳವಾಯಿಗಳಾದದೇವರಾಜಯ್ಯ ಮತ್ತು ನಂಜರಾಜಯ್ಯರು ತಮ್ಮ ಪ್ರಬಲ ಸೈನ್ಯದಿಂದ ಸುತ್ತಮುತ್ತಲಿನ ಪ್ರದೇಶಗಳ ಮೇಲೆ ದಾಳಿಮಾಡಿ, ಶತ್ರುಗಳನ್ನು ಯಶಸ್ವಿಯಾಗಿ ಹಿಮ್ಮೆಟ್ಟಿಸಿ ಮೈಸೂರು ಒಡೆಯರ ಸೈನ್ಯವೆಂದರೆ ಭಯ ಹಾಗೂ ಕ್ರೌರ್ಯದ ಪ್ರತಿಬಿಂಬ ಎಂಬಂತೆ ತೋರಿಸಲು ಪ್ರಯತ್ನಿಸಿದರು.

ಇಮ್ಮಡಿ ಕೃಷ್ಣರಾಜ ಒಡೆಯರು ದಳವಾಯಿ ದೇವರಾಜಯ್ಯನ ಕೃಪೆಯಿಂದ ಮೈಸೂರು ಸಿಂಹಾಸನವನ್ನು ಅಲಂಕರಿಸಿದರೆ, ಅದೇ ವೇಳೆಗೆ ನಂಜರಾಜಯ್ಯನು ಹೈದರ್ ಅಲಿಯ ಪರಾಕ್ರಮವನ್ನು ಇಮ್ಮಡಿ ಕೃಷ್ಣರಾಜ ಒಡೆಯರಿಗೆ ಪರಿಚಯಿಸಿದನು. ಇಮ್ಮಡಿ ಕೃಷ್ಣರಾಜ ಒಡೆಯರ್ ದಳವಾಯಿಗಳ ಕೈಗೊಂಬೆಯಾಗಿದ್ದರೂ ಹೈದರನ ದೂರದೃಷ್ಟಿತ್ವ, ಕಾರ್ಯನಿಷ್ಠೆ, ಶ್ರಮ ಮತ್ತು ಆಡಳಿತದಲ್ಲಿದ್ದ ದಕ್ಷತೆಯನ್ನು ಸೂಕ್ಷ್ಮವಾಗಿ ಗಮನಿಸಿ ಮುಖ್ಯವಾಹಿನಿಗೆ ತರುವ ಪ್ರಯತ್ನವನ್ನು ಮಾಡಿದರು. ತಿರುಚನಾಪಳ್ಳಿ ಮತ್ತು ಆರ್ಕಾಟುಗಳ ಮುತ್ತಿಗೆಯಲ್ಲಿ ಹಾಗೂ ದಳವಾಯಿಗಳು ರಾಜನಿಗೆ ಮಾಡುತ್ತಿದ್ದ ದ್ರೋಹಗಳನ್ನು ಬಯಲಿಗೆಳೆಯುವ ಪ್ರಯತ್ನಗಳಲ್ಲಿ ಹೈದರನ ಶಕ್ತಿಸಾಮರ್ಥ್ಯಗಳು ಪ್ರದರ್ಶಿತವಾಗಿದ್ದವು. ದಳವಾಯಿ ದೇವರಾಜಯ್ಯನು ತನ್ನ ಮರಣದ ಸಂದರ್ಭದಲ್ಲಿ ಹೈದರಾಲಿಗೆ ಉನ್ನತ ಅಧಿಕಾರದಲ್ಲಿ ಅವಕಾಶವನ್ನು ನೀಡದಂತೆ ಅವಕಾಶ ತಪ್ಪಿಸಲು ಅರಮನೆಯಲ್ಲಿ ಒಂದು ನಿಬಂಧನೆಯನ್ನು ಮಾಡಿಸಿದ್ದನು. ಆದರೂ ಹೈದರನು ಸೈನಿಕರು ವೇತನಕ್ಕಾಗಿ ಬಂಡೆದ್ದಾಗ ಅವರನ್ನು ತನ್ನಲ್ಲಿದ್ದ ಸಂಪತ್ತಿನಿಂದ ಅವರಿಗೆ ವೇತನ ನೀಡಿದ್ದಂತಹ ಅಂಶಗಳನ್ನು ಗಮನಿಸಿ ಕ್ರಿ.ಶ. ೧೭೫೮ರಲ್ಲಿ ಮೈಸೂರಿನ ದಳವಾಯಿಯನ್ನಾಗಿ ಇಮ್ಮಡಿ ಕೃಷ್ಣರಾಜ ಒಡೆಯರು ಒಂದು ಶಾಸನವನ್ನು ಬರೆಸಿಕೊಟ್ಟರು. ಅದರ ಪ್ರಕಾರ ನೀನು ನಮ್ಮ ಅರಮನೆಯ ಜನರನ್ನು ಹೊರತುಪಡಿಸಿ ಹೊರಗಿನ ಯಾರಿಗೇ ದಂಡನೆಯನ್ನು ನೀಡಿದರೂ ನಾವು ಕೇಳುವುದಿಲ್ಲ. ಇನ್ನು ಮುಂದೆ ನಮಗೆ ಸರ್ಕಾರದ ಕೆಲಸ ಮುಖ್ಯವೇ ಹೊರತು ಜನರ ದಾಕ್ಷಿಣ್ಯವಲ್ಲ. ಪೂರ್ವದಲ್ಲಿ ನಾವು ನಮ್ಮ ಜನರು ಯಾರೂ ತಮಗೆ ಕೆಲಸ ಕಾರ್ಯಗಳಲ್ಲಿ ತೊಂದರೆ ಮಾಡುವುದಿಲ್ಲ. ನಮ್ಮವರೆಂದು ಅಧಿಕಾರವನ್ನು ನೀಡಿದರೆ ಅವರೇ ನಮಗೆ ಶತ್ರುಗಳಾದರು. ಈಗ ನೀನು ಸರ್ಕಾರದ ಕೆಲಸವೇ ಮುಖ್ಯವೆಂದು ಅರಮನೆಗೆ ಕೂಡಿಬರುವಂತೆ ಮಾಡುವುದು. ಈ ವಿಷಯದಲ್ಲಿ ನೀನೇನಾದರೂ ದಾಕ್ಷಿಣ್ಯದಿಂದ ನಿನ್ನ ಕಡೆಯ ಜನರಿಗೆ ನೇಮಕಾತಿಯಲ್ಲಿ ಹೆಚ್ಚು ಅವಕಾಶ ನೀಡಿದರೆ ನೀನೂ ಕೂಡ ಅಧಿಕಾರವನ್ನು ಕಳೆದುಕೊಳ್ಳುವೆ ಎಂದು ಕರಾರನ್ನು ಬರೆಸಿ ದಳವಾಯಿಯನ್ನಾಗಿ[೫೦] ನೇಮಕ ಮಾಡಿದರು.

ಹೈದರ್ ಅಲಿಯು ಆಡಳಿತದಲ್ಲಿ ಚತುರನೂ, ಬುದ್ಧಿವಂತನೂ ದೂರದೃಷ್ಟಿಯುಳ್ಳಂತಹ ಮಹಾನ್ ಆಡಳಿತ ತಂತ್ರಜ್ಞನಾಗಿದ್ದನು. ಈತನು ಮೈಸೂರು ಸೈನ್ಯವು ಕ್ರಿ.ಶ. ೧೭೪೯ರಲ್ಲಿ ನಡೆದ ದೇವನಹಳ್ಳಿ ಮುತ್ತಿಗೆಯಲ್ಲಿ ಬೆಳಕಿಗೆ ಬಂದನು. ಕತ್ತಿಗೋಪಾಲರಾಜೇ ಅರಸರು ಈ ದೇವನಹಳ್ಳಿ ಕೋಟೆಯ ಮುತ್ತಿಗೆಯ ನೇತೃತ್ವವನ್ನು ವಹಿಸಿದ್ದರು. ಪ್ರಾರಂಭದಲ್ಲಿ ೫೦ ಕುದುರೆಗಳು ಮತ್ತು ೧೦೦ ಕಾಲ್ದಳಕ್ಕೆ ಮುಖ್ಯಸ್ಥನಾಗಿದ್ದನು. ಕೇವಲ ಸಾಮಾನ್ಯ ಸೈನಿಕನಾಗಿದ್ದುಕೊಂಡು ಸ್ವಸಾಮರ್ಥ್ಯದಿಂದ ಉನ್ನತ ಅಧಿಕಾರವನ್ನು ಪಡೆದನು. ಕ್ರಿ.ಶ.೧೭೫೮ರಲ್ಲಿ ದಳವಾಯಿಗಳ ಅಸಮರ್ಥತೆಯನ್ನು ಬಳಸಿಕೊಂಡು ಅಧಿಕಾರದ ಚುಕ್ಕಾಣಿಯನ್ನು ಹಿಡಿದನು. ಅನಂತರ ಇಮ್ಮಡಿ ಕೃಷ್ಣರಾಜ ಒಡೆಯರು ತಮ್ಮ ಆಸ್ಥಾನಕ್ಕೆ ಕರೆಸಿಕೊಂಡರು. ಆರ್ಕಾಟಿನ ಮುತ್ತಿಗೆಯಲ್ಲಿ ನಾಸರ್‌ಜಂಗನನ್ನು ಯುದ್ಧದಲ್ಲಿ ಕೊಂದು ಅವನ ಖಜಾನೆಯಲ್ಲಿದ್ದ ಸಂಪತ್ತನ್ನು ೧೫ ಒಂಟೆಗಳ

ಮೇಲೆ ಶ್ರೀರಂಗಪಟ್ಟಣಕ್ಕೆ ಸಾಗಿಸಿ ೧೨ ಒಂಟೆಗಳ ಮೇಲಿದ್ದ ಸಂಪತ್ತನ್ನು ಅರಮನೆಯ ಖಜಾನೆಗೆ ನೀಡಿ ಉಳಿದ ೩ ಒಂಟೆಗಳ ಮೇಲಿನ ಸಂಪತ್ತನ್ನು ತನ್ನ ಸ್ವಂತಕ್ಕಾಗಿ ಬಳಸಿಕೊಂಡನು. ತಿರುಚನಾಪಳ್ಳಿಯನ್ನು ಚಂದಾಸಾಹೇಬನು ವಶಪಡಿಸಿಕೊಂಡನೆಂದು ತಿಳಿದು, ತಿರುಚನಾಪಳ್ಳಿಯ ಮೇಲೆ ದಾಳಿಮಾಡಿದ ದಳವಾಯಿ ನಂಜರಾಜಯ್ಯನನ್ನು ಮದ್ರಾಸಿನ ಮಹಮದ್ ಅಲಿಖಾನನು ಕೋಟೆಯೊಳಗಡೆ ಸೆರೆಸಿಕ್ಕಿಸಿ, ಆತನ ಮೋಸಕ್ಕೆ ಬಲಿಯಾಗುವ ಹಂತದಲ್ಲಿದ್ದಾಗ ಹೈದರನೇ ಆತನನ್ನು ಬಿಡುಗಡೆ ಮಾಡಿದನು. ಈ ಮೊದಲೆ ತಿಳಿಸಿದಂತೆ ತಿರುಚನಾಪಳ್ಳಿಯ ದಾಳಿಯ ಸಂದರ್ಭದಲ್ಲಿ ಹೋರಾಡಿ ಬಸವಳಿದು ವೇತನಕ್ಕಾಗಿ ಸೈನಿಕರು ದಂಗೆಯೆದ್ದಾಗ ಹೈದರನು ಬುದ್ಧಿವಂತಿಕೆಯಿಂದ ಸೈನಿಕರಿಗೆ ವೇತನವನ್ನು ಪಾವತಿ ಮಾಡಿದನು. ಈ ಸಂಪತ್ತು ಅವನು ಶತ್ರುಗಳ ಮೇಲೆ ದಾಳಿಮಾಡಿ ಲೂಟಿಮಾಡಿದ ಸಂಪತ್ತನ್ನು ಸರ್ಕಾರಕ್ಕೆ ಸಲ್ಲಿಸಿ ತನ್ನಲ್ಲಿ ಉಳಿಕೊಂಡಿದ್ದ ಅಂಶದಿಂದ ಸೈನಿಕರ ವೇತನವನ್ನು ನೀಡಿದನು. ಇದು ಹೈದರನು ಸೈನಿಕರನ್ನು ತನ್ನತ್ತ ಸೆಳೆಯಲು ಕಾರಣವಾಯಿತು. ಆದ್ದರಿಂದ ಹೈದರನು ದೂರದೃಷ್ಟಿತ್ವವುಳ್ಳವನೂ, ಮಹತ್ವಾಕಾಂಕ್ಷೆಯುಳ್ಳ ಚತುರ ಆಡಳಿತಗಾರನಾಗಿದ್ದನು ಎಂಬುದು ಅವನ ಈ ಕಾರ್ಯಗಳಿಂದಲೇ ತಿಳಿದುಬರುತ್ತದೆ. ದಳವಾಯಿ ದೇವರಾಜಯ್ಯನು ತನ್ನ ತಮ್ಮ ನಂಜರಾಜಯ್ಯನ ಜೊತೆಗಿನ ಮನಸ್ತಾಪದಿಂದ ಸತ್ತೆಗಾಲಕ್ಕೆ ಒಂದುಸಾವಿರ ಸೈನಿಕರೊಡನೆ ಹೊರಟು ಹೋಗಿದ್ದಾಗ ಅವನನ್ನು ಹಿಂತಿರುಗಿ ಕರೆತಂದನು. ಆದರೆ ಕರಾಚೂರಿ ನಂಜರಾಯ್ಯನು ೪ ಫಿರಂಗಿಗಳಿಂದ ಶ್ರೀರಂಗಪಟ್ಟಣದ ಅರಮನೆ ಬಾಗಿಲಿಗೆ ಗುಂಡುಗಳನ್ನು ಹೊಡೆಸಿದನು. ದಳವಾಯಿ ಸಹೋದರರು ಮತ್ತು ಇಮ್ಮಡಿ ಕೃಷ್ಣರಾಜ ಒಡೆಯರ ನಡುವೆ ಮಾತುಕತೆಗಳ ಮುಖಾಂತರ ಅವರ ಮನಸ್ತಾಪವನ್ನು ಪರಿಹರಿಸುವಲ್ಲಿ ಹೈದರನು ಮಹತ್ವದ ಪಾತ್ರವನ್ನು ವಹಿಸಿದನು. ಕ್ರಿ.ಶ. ೧೭೫೮ರಲ್ಲಿ ದಳವಾಯಿಯಾದ ಮೇಲೆ ಸೈನಿಕರಿಗೆ ವೇತನವನ್ನು ನೀಡಲು ಎಲ್ಲಾ ಪಣಕಟ್ಟಿನ ಅಧಿಕಾರಿಗಳನ್ನು ಕರೆಸಿ, ಅವರಿಂದ ವಿನಯ ಮತ್ತು ಭಯಭಕ್ತಿಗಳಿಂದ ಕಪ್ಪಕಾಣಿಕೆಗಳನ್ನು ಸ್ವೀಕರಿಸಿ ಸೈನಿಕರಿಗೆ ವೇತನವನ್ನು ನೀಡಿದನು. ಸೈನ್ಯದಲ್ಲಿ ೪ಸಾವಿರ ಅಶ್ವದಳವನ್ನು ಬಿಡುಗಡೆ ಮಾಡಿ ಮೂರುಸಾವಿರ ಅಶ್ವಗಳನ್ನು ಸರ್ಕಾರದಲ್ಲಿ ಖಾಯಂ ಆಗಿರಿಸಿಕೊಂಡು ಬಿಡುಗಡೆಯಾದ ಅಶ್ವದಳವನ್ನು ಖಾಯಂ ಅಶ್ವದಳದಿಂದ ಲೂಟಿಮಾಡಿಸಿದನು.[೫೧] ಈ ಲೂಟಿಯಾದ ಅಶ್ವದಳದವರು ಬೇಡಿಕೊಳ್ಳಲು ಅವರನ್ನು ತನ್ನ ಕೋಟೆಯ ರಕ್ಷಕರನ್ನಾಗಿ ನೇಮಕ ಮಾಡಿದನು.

ಮರಾಠರು ಕ್ರಿ.ಶ. ೧೭೬೦ರಲ್ಲಿ ಶ್ರೀರಂಗಪಟ್ಟಣದ ಮೇಲೆ ಆಕ್ರಮಣ ಮಾಡಿದಾಗ ಕರ್ನಾಟಕದ ಪರಿಸ್ಥಿತಿಯು ಅರಾಜಕತೆಯಿಂದ ಕೂಡಿತ್ತು. ಈ ಸಂದರ್ಭವನ್ನು ಪೇಶ್ವೆ ನಾನಾಸಾಹೇಬನು ತನ್ನ ಹಿತಾಸಕ್ತಿಗಳಿಂದ ಬಳಸಿಕೊಳ್ಳಲು ಪ್ರಾರಂಭಿಸಿದನು. ಮೊಗಲರ ಪ್ರಾಬಲ್ಯ ಕುಸಿಯಿತು. ಈ ಸಂದರ್ಭದಲ್ಲಿ ಶ್ರೀರಂಗಪಟ್ಟಣದಲ್ಲಿದ್ದ ದಿವಾನ್ ಖಂಡೇರಾಯ, ಪ್ರಧಾನಿ ವೆಂಕಪತಯ್ಯ ಮತ್ತು ಹಲವಾರು ಆಡಳಿತ ಅಧಿಕಾರಿಗಳು ತಮ್ಮ ಅಧಿಕಾರವನ್ನು ದುರುಪಯೋಗ ಪಡಿಸಿಕೊಳ್ಳಲು ನಂಜರಾಜಯ್ಯನ ಮೇಲೆ ಆರೋಪವನ್ನು ಹೊರಿಸಿದರು. ಗೋಪಾಲರಾವ್ ಪಟವರ್ಧನನು

ಮೈಸೂರಿನ ಮೇಲೆ ಆಕ್ರಮಣವನ್ನು ನಡೆಸಿದಾಗ ದಳವಾಯಿಯು ಅವರನ್ನು ಉಪೇಕ್ಷಿಸಿದನೆಂದು ದಳವಾಯಿಯನ್ನು ಆಡಳಿತದಿಂದ ತೆಗೆದುಹಾಕುವಂತೆ ಅರಸರ ಮೇಲೆ ಒತ್ತಡವನ್ನು ಹೇರಲಾಯಿತು. ಈ ವೇಳೆಗಾಗಲೇ ಮೈಸೂರು ರಾಜನಿಂದ ಹೈದರನಿಗೆ ನಾಮಕಲ್, ಸೇಲಂ, ಸತ್ಯಮಂಗಲಗಳನ್ನು ರಾಜನ ದುರ್ಬಲನೀತಿಗೆ ವಿರುದ್ಧವಾಗಿದ್ದ ಖಂಡೇರಾಯನ ಮಾತನ್ನು ಧಿಕ್ಕರಿಸಿ ಬಿಟ್ಟುಕೊಡಲಾಯಿತು. ಮರಾಠರೊಂದಿಗೆ ಒಪ್ಪಂದವನ್ನು ಮಾಡಿಕೊಂಡು ಹೈದರನನ್ನು ಸಂಚಿನಿಂದ ಮುಗಿಸುವುದಾಗಿತ್ತು. ಈ ಸಂದರ್ಭದಲ್ಲಿ ಹೈದರನು ಚಾಣಾಕ್ಷತೆಯಿಂದ ನಡೆದುಕೊಂಡು ವೀಸಾಜಿಯೊಂದಿಗೆ ಒಪ್ಪಂದವನ್ನು ಮಾಡಿಕೊಂಡನು.[೨೨] ಶ್ರೀರಂಗಪಟ್ಟಣದ ಕೋಟೆಯನ್ನು ಬಲಪಡಿಸಿ ಅದರ ಮೇಲ್ವಿಚಾರಣೆಯನ್ನು ಮೊಖದಂ ಸಾಬನಿಗೆ ವಹಿಸಿದನು. ಕೋಟೆಯನ್ನು ಜೀರ್ಣೋದ್ಧಾರ ಮಾಡಿಸಿದನು.

ಸೈನ್ಯವನ್ನು ಹೆಚ್ಚಿಸುವ ಉದ್ದೇಶದಿಂದ ಹೈದರಾಲಿಯು ಅಶ್ವದಳವನ್ನು ೨ ವಿಭಾಗ ಮಾಡಿದನು. ಒಂದು ಖಾಸಾತಬೇಲಿ ಎಂದೂ ಮತ್ತೊಂದು ಸಿಲೆದಾರರೆಂದೂ ಕರೆದನು. ಖಾಸ್‌ತಬೇಲಿಯಲ್ಲಿ ೨೦೦೦ ಹೆಣ್ಣು ಕುದುರೆಗಳು ಸೇರಿ ೧೪,೦೦೦ ಕುದುರೆಗಳಿದ್ದವು. ಸಿಲೇದಾರ ವಿಭಾಗದಲ್ಲಿ ೨೮,೦೦೦ ಕುದುರೆಗಳಿದ್ದವು. ವೇತನವನ್ನು ಖಾಸ್‌ತಬೇಲಿಯಲ್ಲಿ ಸರ್ಕಾರ ನೀಡಿದರೆ ಸಿಲಾದಾರರು ತಾವೇ ನಿರ್ವಹಿಸಬೇಕಿತ್ತು. ಹೈದರನು ಸವಣೂರು ನವಾಬನಿಂದ ೨೦೦೦ ಕುದುರೆಗಳು, ಚಿತ್ರದುರ್ಗ, ರಾಮದುರ್ಗಗಳ ಮೊದಲಾದ ಸ್ಥಳಗಳ ಪಾಳೆಯಗಾರರಿಂದ ೭೦೦೦ ಕುದುರೆಗಳನ್ನು ನೇಮಿಸಿದ್ದನು. ಫ್ರೆಂಚರ ಯುದ್ಧ ಮಾದರಿಯು ಸೈನಿಕರಿಗೆ ಅರಿವಾಗಲು ತನ್ನ ಸೈನ್ಯಕ್ಕೆ ಫ್ರೆಂಚ್ ಅಧಿಕಾರಿಗಳನ್ನು ತರಬೇತಿಗೆ ನೇಮಿಸಿದನು. ಸೈನ್ಯದಲ್ಲಿ ನೌಕಾಬಲದ ಅಗತ್ಯವನ್ನು ಕಂಡು ಮಂಗಳೂರು ಮತ್ತು ಬಂಟ್ವಾಳದಲ್ಲಿ ನೌಕಾ ನೆಲೆಗಳನ್ನು ನಿರ್ಮಿಸಿದನು. ಈ ನೌಕೆಗಳು ಅತ್ಯಂತ ಬಲಿಷ್ಠವಾಗಿದ್ದವು. ಅಲ್ಲದೆ ದಕ್ಷತೆಯಿಂದ ಕೂಡಿದ್ದು ಬ್ರಿಟಿಷರ ವಿರುದ್ಧದ ಹೋರಾಟಗಳಿಗೆ ಅಗತ್ಯವಾಗಿದ್ದವು. ಹೈದರನ ಕಾಲದಲ್ಲಿ ಅತಿಹೆಚ್ಚು ಯುದ್ಧಗಳು ನಡೆದದ್ದು ಬ್ರಿಟಿಷರೊಂದಿಗೆ ಇದರಿಂದ ಮೈಸೂರು ಸೈನ್ಯವು ಅತ್ಯಂತ ದೀರ್ಘಕಾಲ ಬ್ರಿಟಿಷರೊಂದಿಗಿನ ಯುದ್ಧಗಳಲ್ಲೇ ಕಾಲ ಕಳೆಯಬೇಕಾಯಿತು. ಇದು ಮುಂದುವರಿದು ಟಿಪ್ಪುವಿನ ಕಾಲದಲ್ಲಿ ೪ನೇ ಆಂಗ್ಲೋ-ಮೈಸೂರು ಯುದ್ಧದವರೆಗೂ ಮುಂದುವರೆಯಿತು. ಹೈದರನ ನಂತರ ಟಿಪ್ಪು ಸುಲ್ತಾನನನ್ನು ದಳವಾಯಿ ಎಂದು ಗುರುತಿಸಲು ಸಾಧ್ಯವಿಲ್ಲ. ಏಕೆಂದರೆ ಆತನ ಯೋಜನೆಗಳೆಲ್ಲವೂ ಕೂಡ ಸರ್ವಾಧಿಕಾರಿ ಧೋರಣೆಗಳಾಗಿದ್ದವು. ಒಟ್ಟಿನಲ್ಲಿ ದಳವಾಯಿಯು ದಂಡಾಧಿಕಾರಿ, ದಂಡನಾಯಕನಾಗಿದ್ದು ಸೈನ್ಯಾಡಳಿತ ಮತ್ತು ರಾಜ್ಯಾಡಳಿತವನ್ನು ನೋಡಿಕೊಳ್ಳುವುದಾಗಿತ್ತು. ಇದರ ಜೊತೆಗೆ ಸಾಮ್ರಾಜ್ಯವನ್ನು ವಿಸ್ತರಿಸುವ ಮತ್ತು ರಕ್ಷಿಸುವ ಕಾರ್ಯಗಳಲ್ಲೂ ತೊಡಗಿದ್ದರು. ಹೊಸಹೊಸ ಆವಿಷ್ಕಾರಗಳೊಂದಿಗೆ ಯೂರೋಪಿಯನ್ ಮಾದರಿಯ ಸೈನ್ಯದ ಮಾರ್ಪಾಡುಗಳು ಸೈನ್ಯವನ್ನು ಯಶಸ್ವಿಯತ್ತ ಕೊಂಡೊಯ್ದಿತ್ತು. ಮೈಸೂರಿನ ದಳವಾಯಿಗಳು ಆಡಳಿತ ಮಾತ್ರವಲ್ಲದೆ ಕೆರೆಕಟ್ಟೆ ಮತ್ತು ದೇವಾಲಯಗಳನ್ನು ಕಟ್ಟಿಸುವ ಮೂಲಕ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಕೂಡ

ತಮ್ಮನ್ನು ತೊಡಗಿಸಿಕೊಂಡಿದ್ದರು. ಒಟ್ಟಿನಲ್ಲಿ ದಳವಾಯಿಗಳು ಏಕಕಾಲದಲ್ಲಿ ಹಲವು ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು.

**೩.೩. ದಿವಾನರು**

ದಿವಾನ ಎಂಬ ಪದವು ಪರ್ಶಿಯನ್ ಮೂಲದ್ದಾಗಿದೆ. ದಿವಾನ ಎಂದರೆ ಪ್ರಧಾನ ಮಂತ್ರಿ[೫೩] ಅಥವಾ ಪ್ರಧಾನ ಆಡಳಿತಾಧಿಕಾರಿ ಎಂಬ ಅರ್ಥವನ್ನು ನೀಡುತ್ತದೆ. ಹೈದರಾಲಿಯು ದಳವಾಯಿಯಾಗಿ ನೇಮಕವಾಗಿ ರಾಜ್ಯದ ಆಡಳಿತವನ್ನು ಸಂಪೂರ್ಣವಾಗಿ ತನ್ನಲ್ಲಿ ಕೇಂದ್ರೀಕರಿಸಿಕೊಂಡಿದ್ದನು. ಹೈದರನು ಪೂರ್ಣಯ್ಯನವರನ್ನು ಕ್ರಿ.ಶ.೧೭೭೬ರಲ್ಲಿ ದಿವಾನನ್ನಾಗಿ ನೇಮಿಸಿದನು. ಈ ಮೊದಲು ಗುಮಾಸ್ತನಾಗಿದ್ದು ಅನಂತರ ಖಜಾನೆಯ ಅಧಿಕಾರಿಯಾಗಿ ಮುಂಬಡ್ತಿಯನ್ನು ಪಡೆದರು. ಪೂರ್ಣಯ್ಯನವರು ದಿವಾನನು ಸೈನ್ಯದ ದಂಡಾಧಿಕಾರಿಯಂತೆ, ಪ್ರಧಾನಿಯಾಗಿದ್ದುಕೊಂಡು ರಾಜ ಮತ್ತು ರಾಜ್ಯಕ್ಕೆ ಆಡಳಿತ ಸಲಹೆಗಳನ್ನು ನೀಡುವುದಾಗಿತ್ತು.’ ಈ ಅಧಿಕಾರವು ಕ್ರಿ.ಶ. ೧೮೧೨ರವರೆಗೆ ಮಾತ್ರ ದಿವಾನರ ಪಾತ್ರವು ಅವಶ್ಯಕವಾಗಿತ್ತು.[೫೪] ಅನಂತರ ಬ್ರಿಟಿಷರು ಈ ಹುದ್ದೆಯನ್ನು ಕೇವಲ ರಾಜ್ಯದ ಅಭಿವೃದ್ಧಿಗಾಗಿ ಶ್ರಮಿಸುವ ಹಣಕಾಸಿನ ಅಧಿಕಾರಕ್ಕಷ್ಟೇ ಸೀಮಿತಗೊಳಿಸಿದರು. ಹಾಗಾಗಿ ಹೈದರನ ಕಾಲದ ದಿವಾನರ ಸೈನಿಕ ಆಡಳಿತವು ಕೇವಲ ಪೂರ್ಣಯ್ಯನವರ ಸಾಧನೆಗಳನ್ನು ಕುರಿತು ತಿಳಿಸುವುದಾಗಿದೆ. ಕ್ರಿ.ಶ.೧೮೧೨ರ ನಂತರ ದಿವಾನರನ್ನು ಸೈನಿಕ ಆಡಳಿತದಿಂದ ದೂರಮಾಡಿ ಕೇವಲ ರಾಜ್ಯದ ಹಣಕಾಸಿನ ವಿಚಾರಗಳಿಗೆ ಸೀಮಿತ ಮಾಡಿದ್ದರಿಂದ ದಿವಾನರು ರಾಜ್ಯದ ಅಭಿವೃದ್ಧಿಗಾಗಿ ಶ್ರಮಿಸುವಂತಹ ಆಡಳಿತಾತ್ಮಕ ಯೋಜನೆಗಳಲ್ಲಿ ಪಾಲ್ಗೊಂಡರು.

ದಿವಾನ್ ಪೂರ್ಣಯ್ಯನು ಹೈದರ್‌ಅಲಿ, ಟಿಪ್ಪುಸುಲ್ತಾನ್ ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಆಡಳಿತದ ಅವಧಿಯಲ್ಲಿ ಕಾರ್ಯವನ್ನು ನಿರ್ವಹಿಸಿದರು. ಹೈದರ ಮತ್ತು ಟಿಪ್ಪುವಿನ ಕಾಲದಲ್ಲಿ ನಡೆದ ಅಧಿಕವಾದ ಯುದ್ಧಗಳಿಂದ ರಾಜ್ಯವು ಸೈನಿಕ ಮತ್ತು ಆರ್ಥಿಕತೆಯ ನಷ್ಟವನ್ನು ಅನುಭವಿಸಿತು. ಹೈದರನ ಕಾಲದಲ್ಲಿನ ಯುದ್ಧಗಳಲ್ಲಿ ಖರ್ಚುವೆಚ್ಚಗಳು, ಆರ್ಥಿಕ ಅಭಿವೃದ್ಧಿಯ ಸಮತೋಲನವನ್ನು ಕಾಪಾಡುವಲ್ಲಿ ದಿವಾನ್ ಪೂರ್ಣಯ್ಯನವರ ಪಾತ್ರ ಹಿರಿದಾದುದು. ದಿವಾನರು ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ನಡೆದ ದಿಗ್ವಿಜಯಗಳಲ್ಲಿ ಮಂಗಳೂರು, ಬಿದನೂರು, ನರಗುಂದ, ಧಾರವಾಡ, ಸಿರಾ, ಚಿತ್ರದುರ್ಗ, ಆರ್ಕಾಟುಗಳ ಮೇಲೆ ಹೋರಾಟಗಳು ನಡೆದಾಗ ದಳವಾಯಿಯ ಜೊತೆಯಲ್ಲಿಯೇ ದಿವಾನರು ಕೂಡ ಭಾಗವಹಿಸಬೇಕಿತ್ತು. ಸೈನ್ಯದ ಎರಡನೆಯ ಪೊಗದಿಯ ಹಣವನ್ನು ೭ಲಕ್ಷ ಕಂಠೀರವ ಪಗೋಡಾಗಳಲ್ಲಿ ಸಂಗ್ರಹಿಸಬೇಕು. ಎರಡನೆಯ ವರ್ಷದ ರಾಜ್ಯದ ಆದಾಯದ ಸ್ಥಿತಿಗತಿಗಳನ್ನು ಗಮನಿಸಿ ತೃಪ್ತಿಯೆನಿಸಿದರೆ ರಾಜ್ಯದ ಹಿತದೃಷ್ಟಿಯಿಂದ ಕಡಿಮೆ ಪೊಗದಿಯನ್ನು ಸಂಗ್ರಹಿಸಲು ಒಪ್ಪಬಹುದಾಗಿತ್ತು. ಮೂರನೆಯದಾಗಿ ದಿವಾನರ ಆಡಳಿತದ ಮೇಲೆ ಸದಾ ಸೂಕ್ಷ್ಮವಾಗಿ ಗಮನಿಸುವುದು. ಕಂದಾಯ ಮತ್ತು ವಾಣಿಜ್ಯ ವಿಭಾಗಗಳ ಬಗ್ಗೆ ನಿಗಾ ಇಡುವುದು, ನ್ಯಾಯಯುತವಾದ ಆಡಳಿತವನ್ನು ಸ್ಥಾಪಿಸಿ ಕೈಗಾರಿಕೆಗಳ

ಬೆಳವಣಿಗೆಗೆ ಆ ಮೂಲಕ ಪ್ರಜಾಸಂಖ್ಯೆ ಹೆಚ್ಚಿಸುವುದಾಗಿತ್ತು. ಕಂದಾಯದ ಆಡಳಿತದಲ್ಲಿ ಉತ್ತಮ ವ್ಯವಸ್ಥೆಯನ್ನು ಜಾರಿಮಾಡಲು ಸ್ಥಳೀಯ ಪದ್ಧತಿಗಳನ್ನು ಅಧ್ಯಯನ ಮಾಡಿ ಸುಧಾರಣೆ ಅಥವಾ ಬದಲಾವಣೆ ತರುವುದು. ಇದರ ನಡುವೆ ದೇಶದ ಆದಾಯದ ಮೇಲೆ ಹಾಗೆ ಜನರನ್ನು ಸಂತೋಷವಾಗಿಡಲು ಸಹಕಾರಿಯಾಗಿದೆ. ಮಹಾರಾಜರ ಸರ್ಕಾರದ ಮೇಲೆ ದುಷ್ಪರಿಣಾಮ ಉಂಟುಮಾಡುವ ಮಹಾರಾಜರ ಸರಕಾರದ ಅಧಿಕಾರಿಗಳ ಅಧಿಕಾರ ದುರುಪಯೋಗವಾಗದಂತೆ ಮತ್ತು ಭ್ರಷ್ಟಾಚಾರಗಳನ್ನು ತಡೆಗಟ್ಟುವಲ್ಲಿ ಪ್ರಮುಖ ಪಾತ್ರವಹಿಸುವುದಾಗಿತ್ತು. ಈಸ್ಟ್ ಇಂಡಿಯಾ ಕಂಪನಿ ಅಧೀನದಲ್ಲಿದ್ದ ಹಾಗೂ ಬಂಡವಾಳ ತೊಡಗಿಸಿದ್ದ ಆರ್ಥಿಕ ಚಟುವಟಿಕೆಗಳಲ್ಲಿ ರಹದಾರಿಯಂತಹ ತೆರಿಗೆಗಳು ತಡೆಯಾದರೆ ರದ್ದುಪಡಿಸುವುದು. ಧಾರ್ಮಿಕ ಉದ್ದೇಶಗಳಿಗಾಗಿ ಭೂಮಿಯನ್ನು ಪರಬಾರೆ ಮಾಡುವುದನ್ನು ತಡೆಗಟ್ಟುವುದು. ರಾಜ ಹಾಗೂ ದಿವಾನರ ಮಧ್ಯೆ ಸಮಸ್ಯೆಗಳೇನಾದರೂ ಉದ್ಭವಿಸಿದರೆ ಅವುಗಳನ್ನು ತುಂಬಾ ವ್ಯವಸ್ಥಿತವಾಗಿ ಮಾತುಕತೆಗಳ ಮುಖಾಂತರ ಬಗೆಹರಿಸಿಕೊಳ್ಳಬೇಕಿತ್ತು. ಆಕಸ್ಮಿಕವಾಗಿ ಹಾಗೇನಾದರೂ ಸಮಸ್ಯೆಗಳು ಉದ್ಭವಿಸಿದರೆ ಅವು ರಾಜಿನಾಮೆಗಳ ಮುಖಾಂತರವಾಗಿ ಕೊನೆಗೊಳ್ಳುತ್ತಿದ್ದವು. ದಿವಾನರು ಕೇವಲ ರಾಜಕೀಯ ಸ್ಥಿತಿಗತಿಗಳಿಗೆ ಹಾಗೂ ಆರ್ಥಿಕತೆಯ ಸಂರಕ್ಷಣೆಗೆ ಒತ್ತುಕೊಡದೆ ಕೈಗಾರಿಕೆ, ಕೃಷಿ, ಗ್ರಾಮೀಣ ಅಭಿವೃದ್ಧಿಗಳನ್ನು ಕುರಿತ ಒಂದು ಕರಡನ್ನು ಸಿದ್ಧಪಡಿಸಿ ಅವುಗಳನ್ನು ರಾಜನ ಅಂಕಿತಕ್ಕೆ ಕಳುಹಿಸಬೇಕಿತ್ತು.[೩೪] ದಿವಾನರಿಗೆ ಮಾಸಿಕ ಐದುನೂರು ರೂಪಾಯಿಗಳ ಕಂಠೀರಾಯ ಪಗೋಡಗಳು ಮತ್ತು ರಾಜ್ಯದ ನಿವ್ವಳ ಕಂದಾಯದಲ್ಲಿ ಶೇಕಡಾ ಒಂದೂವರೆಯಷ್ಟು ಕಮಿಷನ್ ನೀಡುವ ವಿಶೇಷ ಸೌಲಭ್ಯವಿತ್ತು. ಖರ್ಚು ವೆಚ್ಚಗಳು ಸಿಪಾಯಿಗಳ ವೇತನ ಸಾರಿಗೆ, ಸರಬರಾಜು ಮೊದಲಾದವುಗಳು ದಿವಾನರ ಹಿಡಿತದಲ್ಲಿದ್ದವು.[೩೫] ಹೈದರ್ ಅಲಿ ಮತ್ತು ಟಿಪ್ಪುವಿನ ಕಾಲದಲ್ಲಿ ದಿವಾನರಾಗಿದ್ದ ಇವರು ಟಿಪ್ಪುವಿನ ಮಗ ಫತ್ತೇಹೈದರನನ್ನು ಸಿಂಹಾಸನದಲ್ಲಿ ಕುಳ್ಳಿರಿಸಬೇಕೆಂದು ಕ್ರಿ.ಶ. ೧೭೯೯ರಲ್ಲಿ ಬ್ರಿಟಿಷರಿಗೆ ಸಲಹೆಯನ್ನು ನೀಡಿದರೆ ಬ್ರಿಟಿಷರು ಅದನ್ನು ಒಪ್ಪಲಿಲ್ಲ.[೩೬] ಟಿಪ್ಪುವಿನ ಮರಣಕ್ಕೂ ಮುಂಚೆ ಆದಂತಹ ಒಪ್ಪಂದದಿಂದ ಮೈಸೂರಿನ ಕೋಟೆಯು ಬ್ರಿಟಿಷರ ವಶವಾದಾಗ ೧ಲಕ್ಷ ಪಗೋಡಗಳು ಮತ್ತು ಶ್ರೀರಂಗಪಟ್ಟಣವು ಪತನವಾದಾಗ ಉಳಿದ ೫ಲಕ್ಷ ಪಗೋಡಗಳ ಮೊತ್ತವನ್ನು ಪಾವತಿಸುವುದು. ಮೈಸೂರಿನಲ್ಲಿ ಇಂಗ್ಲಿಷರು ಒಂದು ಸೈನ್ಯವನ್ನು ನಿಯೋಜಿಸುವುದು ಹಾಗೂ ಆ ಸೇನೆಯ ವೆಚ್ಚವನ್ನು ಮೈಸೂರು ಸರ್ಕಾರವೇ ಭರಿಸಬೇಕಿತ್ತು. ಈ ಸಂದರ್ಭದಲ್ಲಿ ಕಂಪನಿಯು ರಾಜ್ಯದ ಆಂತರಿಕ ವ್ಯವಹಾರಗಳಲ್ಲಿ ತಲೆಹಾಕುವುದಿಲ್ಲ ಎಂದು ಕಂಪನಿಯು ಒಪ್ಪಂದ ಮಾಡಿಕೊಂಡಿತು. ಈ ಒಪ್ಪಂದವು ದಿವಾನನ ಮಧ್ಯಸ್ಥಿಕೆಯಲ್ಲಿ ಆದದ್ದರಿಂದ ದಿವಾನರ ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ಮೂರನೆಯ ಕೃಷ್ಣರಾಜ ಒಡೆಯರ್ ಅವರ ಪಟ್ಟಾಭಿಷೇಕದ ಸಂದರ್ಭದಲ್ಲಿ ಬ್ರಿಟಿಷ್ ಸರ್ಕಾರದ ಅಧಿಕಾರಿಗಳು ಮತ್ತು ಪ್ರತಿನಿಧಿಗಳು ಭಾಗವಹಿಸಿದರೆ ಮೈಸೂರಿನ ಅಧಿಕಾರಿಗಳ ವರ್ಗವು ದಿವಾನರ ನೇತೃತ್ವದಲ್ಲಿ ಭಾಗವಹಿಸಿತ್ತು. ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ಬ್ರಿಟಿಷರಿಗೆ ಬರೆದ ಪತ್ರದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರನ್ನು ರಾಜನಾಗಿಯೂ ಪೂರ್ಣಯ್ಯನನ್ನು ದಿವಾನರನ್ನಾಗಿಯೂ ನೇಮಿಸಿದಕ್ಕೆ ಸಂತಸ ತಂದಿದೆ.[೩೭] ಸದಾಕಾಲ ನಾವು ನಿಮ್ಮ ಅಧಿಕಾರದ

ರಕ್ಷಣೆಯಲ್ಲಿದ್ದು, ನಿಮ್ಮ ಆಳ್ವಿಕೆಗೆ ಯಾವುದೇ ರೀತಿ ತೊಂದರೆಯಾಗದಂತೆ ಕಾಪಾಡಿಕೊಂಡು ಹೋಗುತ್ತೇವೆಂದು ಹೇಳಿದರು. ರಾಜ್ಯದ ಅಧಿಕಾರ ನಿರ್ವಹಿಸುವ ಯೂರೋಪಿಯನ್ ಪ್ರತಿನಿಧಿಯಾಗಿದ್ದ ರೆಸಿಡೆಂಟನ ಕಾರ್ಯಗಳನ್ನು ಕುರಿತಾದ ಟಿಪ್ಪಣಿಯೊಂದನ್ನು ರಾಜ ಮತ್ತು ದಿವಾನರಿಗೆ ವಿವರಿಸುವ ವರದಿಯಾಗಿತ್ತು. ಇದರ ಆಧಾರದ ಮೇಲೆಯೇ ದಿವಾನನು ಆಳ್ವಿಕೆಯನ್ನು ನಡೆಸಬೇಕಿತ್ತು. ದಿವಾನನು ಆಡಳಿತದ ಮೇಲೆ ಗಮನವನ್ನು ಹರಿಸಬೇಕು. ಇದರ ಪ್ರಕಾರ ಅರಸನ ರಾಜ್ಯದ ಗಡಿಗಳನ್ನು ಕಾಪಾಡಲು ಅಗತ್ಯವಾದ ಸೈನ್ಯವನ್ನು ಮೈಸೂರು ಅಥವಾ ಮದ್ರಾಸಿನಿಂದ ಕರೆಸಿಕೊಳ್ಳುವ ಅಧಿಕಾರವಿತ್ತು.[೫೮] ಸರ್ಕಾರದ ನಿರ್ದೇಶನದ ಮೇರೆಗೆ ರೆಸಿಡೆಂಟ್ ಕ್ಲೋಸ್ ಮುಖ್ಯಕಾರ್ಯ ನಿರ್ವಾಹಕ ಅಧಿಕಾರಿಯಾದರೆ ಪೂರ್ಣಯ್ಯನು ದಿವಾನರಾಗಿ ನೇಮಕವಾಗಿದ್ದು ಪ್ರಮುಖ ಆಯ್ಕೆಯಾಗಿತ್ತು. ಸೈನಿಕ ಇಲಾಖೆಯನ್ನು ಅಶ್ವದಳ ಮತ್ತು ಕಾಲ್ದಳಗಳೆಂದು ವಿಭಾಗಿಸಲಾಯಿತು. ಆದರೂ ನಾಗರೀಕ ಮತ್ತು ಆಡಳಿತ ಸೇವಾಕಾರ್ಯಗಳು ಎರಡನ್ನೂ ನಿಭಾಯಿಸಲು ಕಂದಾಚಾರ ಪಡೆ(ಪೋಲೀಸ್, ಅಂಚೆ ಮತ್ತು ಸೇನೆ) ಹೊಸದಾಗಿ ರೂಪುಗೊಂಡಿತು. ಅಲ್ಲದೆ ಬೊಕ್ಕಸ ಮತ್ತು ಹಣಕಾಸು, ಕಂದಾಯ ಇಲಾಖೆ, ಅರಮನೆಯ ಉಸ್ತುವಾರಿ ಮತ್ತು ನ್ಯಾಯಾಡಳಿತಕ್ಕೆ ಸಂಬಂಧಿಸಿದ ಇಲಾಖೆಗಳಿಗೆ ದಿವಾನನೇ ಮುಖ್ಯಸ್ಥನಾಗಿರುತ್ತಿದ್ದ. ದಿವಾನನೇ ರಾಜನಿಗೆ ವಿದೇಶಾಂಗ ವ್ಯವಹಾರಗಳಲ್ಲೂ ಉತ್ತಮ ಮಾರ್ಗದರ್ಶಕನಾಗಿ ಕಾರ್ಯನಿರ್ವಹಿಸುತ್ತಿದ್ದನು. ಕೆಲವೊಂದು ವಿಶೇಷ ಸಂದರ್ಭಗಳಲ್ಲಿ ಅರಸನಿಗೆ ಅಥವಾ ರಾಜ್ಯದ ದಳವಾಯಿಗಳಿಗೆ ತೊಂದರೆಯುಂಟಾದರೆ ಅಥವಾ ಮರಣವುಂಟಾದರೆ ಅದನ್ನು ಗೌಪ್ಯವಾಗಿ ಇರಿಸಬೇಕಿತ್ತು. ಇದಕ್ಕೆ ಉದಾಹರಣೆಯೆಂದರೆ ಹೈದರನು ಮರಣ ಹೊಂದಿದಾಗ ಆ ಸಂದರ್ಭದಲ್ಲಿ ಪೂರ್ಣಯ್ಯನವರು ನಡೆದುಕೊಂಡ ರೀತಿ ಶ್ಲಾಘನೀಯವಾದುದು. ಏಕೆಂದರೆ ಮಲಬಾರ್ ತೀರದಲ್ಲಿದ್ದ ಟಿಪ್ಪು ಸುಲ್ತಾನನಿಗೆ ಅತ್ಯಂತ ಗುಪ್ತವಾಗಿ ವಿಷಯವನ್ನು ಮುಟ್ಟಿಸಿ ಹೈದರನ ಸಾವು ಎಲ್ಲಿಯೂ ಸೋರಿಕೆಯಾಗದಂತೆ ರಹಸ್ಯವಾಗಿಟ್ಟಿದ್ದರು. ಹಾಗೆಯೇ ಇನ್ನೊಂದು ಪ್ರಮುಖವಾದಂತಹ ಘಟನೆಯೆಂದರೆ ಬ್ರಿಟಿಷರ ಗೌರ್ನರ್ ಜನರಲ್ ಲಾರ್ಡ್ ಮಾರ್ನಿಂಗ್‌ಟನ್ ಕಾಲದಲ್ಲಿ ಬೇಟಿನೀಡಿದ್ದ ಪರ್ಶಿಯಾದ ರಾಯಬಾರಿಯಾಗಿದ್ದ ಹಾಜಿ ದೌಲತ್‌ಖಾನ್ ಎಂಬಾತ ಮುಂಬೈ ತಲುಪಿ ಅಲ್ಲಿಂದ ಟಿಪ್ಪುವಿನ ಆಳ್ವಿಕೆಯನ್ನು ನೋಡಲು ಶ್ರೀರಂಗಪಟ್ಟಣಕ್ಕೆ ತೆರಳಿದನು. ಶ್ರೀರಂಗಪಟ್ಟಣಕ್ಕೆ ಆತ ತೆರಳಿದ್ದ ಉದ್ದೇಶ ಟಿಪ್ಪುವಿನ ಆಳ್ವಿಕೆಯನ್ನು ಕಾಣುವುದಾಗಿತ್ತು. ಆದರೆ ಆತ ಶ್ರೀರಂಗಪಟ್ಟಣವನ್ನು ತಲುಪಿದ ಕೂಡಲೇ ಕ್ರಿ.ಶ. ೧೮೦೨ರಲ್ಲಿ ಮರಣ ಹೊಂದಿದನು. ಬ್ರಿಟಿಷ್ ಸರ್ಕಾರಕ್ಕೆ ಈ ಘಟನೆ ಅನುಮಾನವನ್ನು ಮೂಡಿಸಿತು. ಆದರೆ ಪೂರ್ಣಯ್ಯನವರು ಚಾಣಾಕ್ಷತೆಯಿಂದ ರಾಜ್ಯದಾದ್ಯಂತ ಶೋಕಾಚರಣೆಯನ್ನು ಮಾಡುವ ಮುಖಾಂತರವಾಗಿ ಪ್ರಕರಣವನ್ನು ಇತ್ಯರ್ಥ ಮಾಡಿದರು.

### ೩.೪. ಪೌಜುದಾರರು

ಮೈಸೂರು ಒಡೆಯರ ಕಾಲಾವಧಿಯಲ್ಲಿ ಕ್ರಿ.ಶ. ೧೩೯೯ ರಿಂದ ೧೭೫೫ರವರೆಗೆ ಪೌಜುದಾರರ ಬಗೆಗಿನ ಯಾವುದೇ ಉಲ್ಲೇಖಗಳು ನಮಗೆ ದೊರೆಯುವುದಿಲ್ಲ. ಪೌಜುದಾರ ಎಂದರೆ ಪರ್ಶಿಯನ್ ಭಾಷೆಯಲ್ಲಿ ರಾಜ್ಯಪಾಲ ಅಥವಾ ಪ್ರಾಂತ್ಯಪಾಲ ಎಂದರ್ಥ.[೫೯] ವಿಜಯನಗರ ಕಾಲದ

ಮಹಾದಂಡನಾಯಕನ ಅಧೀನ ಅಧಿಕಾರಿಯಾದ ದಂಡನಾಯಕರು ಅಧಿಕಾರವನ್ನು ನೋಡಿಕೊಂಡಂತೆ ಕೇಂದ್ರದ ನೇರ ಹಿಡಿತದಲ್ಲಿದ್ದ ಪ್ರಾಂತೀಯ ಆಳ್ವಿಕೆಯನ್ನು ನೋಡಿಕೊಳ್ಳುತ್ತಿದ್ದಂತಹ ಪ್ರಾಂತ್ಯಾಧಿಕಾರಿಯಾಗಿದ್ದನು. ಇವನು ಅರಸ ಅಥವಾ ದಳವಾಯಿಗಳ ಅಧೀನದಲ್ಲಿಯೇ ಕಾರ್ಯನಿರ್ವಹಿಸಬೇಕಿತ್ತು. ದಳವಾಯಿಯು ಹೊಂದಿದ್ದ ಅಧಿಕಾರದ ಗುಣಲಕ್ಷಣಗಳೇ ಈತನ ಅರ್ಹತೆಗಳಾಗಿದ್ದವು. ಈತ ಪ್ರಾಂತ್ಯಗಳ ಮೇಲ್ವಿಚಾರಣೆಯನ್ನು ರಾಜನ ಪ್ರತಿನಿಧಿಯಾಗಿ ನಿರ್ವಹಿಸುತ್ತಿದ್ದನು. ಇವನು ರಾಜ್ಯದ ಒಂದು ಪ್ರಾಂತ್ಯದಿಂದ ಮತ್ತೊಂದು ಪ್ರಾಂತ್ಯಕ್ಕೆ ವರ್ಗಾವಣೆಯಾಗಬಹುದಿತ್ತು. ಅಲ್ಲದೆ ತನ್ನದೇ ಆದ ಖಾಸಗಿ ಸೈನ್ಯವನ್ನು ಕೂಡ ಹೊಂದಬಹುದಿತ್ತು. ಅರಸ ರಾಜ್ಯದ ಆಂತರಿಕ ಹಾಗೂ ಬಾಹ್ಯ ತುರ್ತು ಸಂದರ್ಭಗಳಲ್ಲಿ ಇವನನ್ನು ಕರೆಸಿಕೊಳ್ಳುವ ಸಂದರ್ಭಗಳು ಒದಗಿಬರುತ್ತಿದ್ದರಿಂದ ಈತನ ಸೈನಿಕ ನಿರ್ವಹಣೆಯು ಖಾಸಗಿ ಮತ್ತು ಕೇಂದ್ರಸರ್ಕಾರದ ವ್ಯಾಪ್ತಿಗೆ ಒಳಪಡುತ್ತಿದ್ದವು. ಮೈಸೂರು ಒಡೆಯರ ಕಾಲದಲ್ಲಿ ನಮಗೆ ಕೇವಲ ಹೈದರಾಲಿಯಷ್ಟೇ ಪೌಜುದಾರನಾಗಿ ಅಧಿಕಾರ ವಹಿಸಿಕೊಂಡಿದ್ದನ್ನು ನಾವು ಗಮನಿಸಬಹುದು.

ಕ್ರಿ.ಶ. ೧೬೮೭ರಲ್ಲಿ ಮೊಗಲರ ಸೇನಾನಿಯಾದ ಖಾಸಿಂಖಾನನು ದಕ್ಷಿಣ ಭಾರತದ ಮೇಲೆ ದಂಡೆತ್ತಿ ಬಂದನು. ಚಿಕ್ಕದೇವರಾಜ ಒಡೆಯರಿಂದ ಬೆಂಗಳೂರನ್ನು ವಶಪಡಿಸಿಕೊಂಡು ತನ್ನ ಆಡಳಿತ ಕೇಂದ್ರವನ್ನು ಬೆಂಗಳೂರಿನಿಂದ ಸಿರಾಗೆ ವರ್ಗಾವಣೆ ಮಾಡಿದನು. ಇದರಿಂದ ಬೆಂಗಳೂರು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು. ಅಂದಿನ ಕಾಲಕ್ಕೆ ದಕ್ಷಿಣ ಭಾರತದ ರಾಜಧಾನಿಯಾಗಿ ಸಿರಾ ಪ್ರಾಮುಖ್ಯತೆಯನ್ನು ಪಡೆಯಿತು. ಮೊಗಲರ ಈ ಕಾಲಾವಧಿಯ ಒಂದು ಪ್ರಮುಖವಾದ ಅಂಶವೆಂದರೆ ಸೇನಾನಿಗಳನ್ನೇ ಒಂದೊಂದು ಪ್ರಾಂತ್ಯಗಳಿಗೂ ಪೌಜುದಾರನನ್ನಾಗಿ ನೇಮಿಸುವುದಾಗಿತ್ತು. ಹೀಗೆ ಪ್ರತಿಯೊಂದು ಪ್ರಾಂತ್ಯಗಳಿಗೂ ಮೊಗಲ್ ಸುಲ್ತಾನನಿಂದ ನೇಮಕವಾದ ಪ್ರಾಂತ್ಯಪಾಲನೇ ಪೌಜುದಾರ. ಸಿರಾವನ್ನು ಪ್ರಮುಖ ಆಡಳಿತ ಕೇಂದ್ರವನ್ನಾಗಿ ಖಾಸಿಂಖಾನನು ರೂಪಿಸಿದನು. ಜೊತೆಗೆ ಎಲ್ಲಾ ಪ್ರದೇಶಗಳ ಆಳ್ವಿಕೆಯನ್ನು ಸುಲಭವಾಗಿ ನಿಯಂತ್ರಿಸುವ ಒಂದು ಪ್ರಬಲವಾದ ಆಯಕಟ್ಟಿನ ಕೇಂದ್ರವಾಗಿ ರೂಪುಗೊಂಡಿತು. ಅಂದಿನ ಮೊಗಲರ ಸಿರಾ ಪ್ರಾಂತ್ಯಕ್ಕೆ ಬಸವಾಪಟ್ಟಣ, ಪೆನುಗೊಂಡ, ಬೂದಿಹಾಳ್, ದೊಡ್ಡಬಳ್ಳಾಪುರ, ಹೊಸಕೋಟೆ, ಕೋಲಾರಗಳಂತಹ ಪ್ರದೇಶಗಳು ಸಿರಾದ ಪ್ರಾಂತ್ಯಕ್ಕೆ ಸೇರ್ಪಡೆಯಾಗಿದ್ದವು.[೬೦]

ಕ್ರಿ.ಶ.೧೭೫೫ರಲ್ಲಿ ಹೈದರನು ದಿಂಡಿಗಲ್ಲಿನ ಪೌಜುದಾರನಾದನು.[೬೧] ಇದಕ್ಕೂ ಮುಂಚೆ ಹೈದರನು ಕತ್ತಿಗೋಪಾಲರಾಜೇ ಅರಸರ ನೇತೃತ್ವದಲ್ಲಿ ದೇವನಹಳ್ಳಿ ಮುತ್ತಿಗೆಯಲ್ಲಿ(ಕ್ರಿ.ಶ.೧೭೪೮) ತನ್ನ ಸಾಮರ್ಥ್ಯವನ್ನು ಸಾಬೀತುಪಡಿಸಿದ್ದರಿಂದ ಹೈದರನ ಶಕ್ತಿಸಾಮರ್ಥ್ಯಗಳ ಮುಂದೆ ಚಿಕ್ಕಪ್ಪಗೌಡನು ಸೋತುಹೋದನು. ಅದೇ ರೀತಿ ಹೈದರನು ಆರ್ಕಾಟಿನ ಮುತ್ತಿಗೆಯಲ್ಲಿ ತೋರಿದ ಪರಾಕ್ರಮ ಹಾಗೂ ಕುಟಿಲ ನೀತಿಗಳು ನಾಸಿರ್‌ಜಂಗ್ ಮತ್ತು ಚಂದಾಸಾಹೇಬನ ನಡುವಿನ ವೈರತ್ವದಲ್ಲಿ ಮೈಸೂರು ಸೈನ್ಯ ಅಪಾರವಾದ ಸಂಪತ್ತನ್ನು ಕೊಳ್ಳೆಹೊಡೆಯಲು ಅವಕಾಶವನ್ನು ಮಾಡಿಕೊಟ್ಟಿತು. ಅಲ್ಲದೆ ಯುದ್ಧಗಳಲ್ಲಿ ಹೋರಾಡುವ ಹೊಸಹೊಸ ವಿಧಾನಗಳೊಂದಿಗೆ ಸೈನ್ಯದಲ್ಲಿನ ಹೊಂದಾಣಿಕೆಗೆ

ಅವಕಾಶವನ್ನು ಮಾಡಿಕೊಟ್ಟಿತು. ಆದರೆ ಹೈದರನು ರಣರಂಗದಲ್ಲಿ ಶತ್ರುಗಳೊಂದಿಗೆ ಮಿಂಚಿನ ವೇಗದಲ್ಲಿ ಹೋರಾಡುವ ಪರಿಣಿತಿಯನ್ನು ಪಡೆದನು. ಅದೇ ಸಂದರ್ಭದಲ್ಲಿ ಮೈಸೂರಿನ ಅರಮನೆಯಲ್ಲಿ ಉಂಟಾದ ಅಂತಃಕಲಹದಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರ ಪರವಾಗಿ ಸಹಾಯ ಮಾಡಿದನು. ಇದರಿಂದ ಆಂತರಿಕ ಕಲಹಗಳನ್ನು ನಿವಾರಿಸಿದನು ಮತ್ತು ಆಡಳಿತದಲ್ಲಿ ಪರಿಪೂರ್ಣತೆಯನ್ನೂ ಸಾಧಿಸಿದನು. ತಿರುಚನಾಪಳ್ಳಿಯ ಕದನದಲ್ಲಿ ದಳವಾಯಿ ನಂಜರಾಜಯ್ಯನನ್ನು ಅಪಾಯದಿಂದ ಪಾರುಮಾಡಿದ್ದನು. ಆ ವೇಳೆಗಾಗಲೇ ಸೈನಿಕರು ತಿರುಚನಾಪಳ್ಳಿಯ ಕದನದ ನಂತರ ದಂಗೆಯೆದ್ದಿದ್ದ ಸೈನಿಕರಿಗೆ ವೇತನವನ್ನು ನೀಡಿ ಅವರಿಂದ ನಂಬಿಕೆಯನ್ನು ಗಳಿಸಿಕೊಂಡನು. ದಳವಾಯಿ ದೇವರಾಜಯ್ಯನಿಗೂ ಅವನ ತಮ್ಮ ನಂಜರಾಜಯ್ಯನು ಒಂದು ಸಾವಿರ ಅಶ್ವದಳ ಮತ್ತು ಮೂರುಸಾವಿರ ಕಾಲ್ದಳದೊಂದಿಗೆ ಪ್ರಧಾನಿ ಚಿನ್ನಪ್ಪಯ್ಯನನ್ನು ಕರೆದುಕೊಂಡು ಸತ್ಯಮಂಗಲಕ್ಕೆ ಹೊರಟನು. ಆದರೆ ಹೈದರನಿಗೆ ಬರೆಸಿಕೊಟ್ಟಿದ್ದ ಈರೋಡು, ಧಾರಾಪುರ, ಸತ್ಯಮಂಗಲಗಳ ಕಂದಾಯ ವಸೂಲಿ ಮಾಡುವ ಅಧಿಕಾರವನ್ನು ಹೈದರನಿಂದ ಕಿತ್ತುಕೊಂಡನು. ಈ ಸಂದರ್ಭದಲ್ಲಿ ಆದ ಮರುಒಪ್ಪಂದದ ಫಲವಾಗಿ ಹೈದರನಿಗೆ ಇಮ್ಮಡಿ ಕೃಷ್ಣರಾಜ ಒಡೆಯರ ಮಧ್ಯಸ್ಥಿಕೆಯಿಂದ ಕಂದಾಯ ವಸೂಲಿಯ ಅಧಿಕಾರವನ್ನು ಹೈದರನಿಗೆ ವಹಿಸಿಕೊಟ್ಟರು.

ಕ್ರಿ.ಶ.೧೭೫೫ರಲ್ಲಿ ದಸರಾ ಉತ್ಸವವು ವೈಭವದಿಂದ ನಡೆಸಲು ದರ್ಬಾರಿನಲ್ಲಿ ಅರಮನೆಯ ಅಧಿಕಾರಿಗಳು ಅರಸನ ಬಂಧುಗಳು ಎಲ್ಲರೂ ಸೇರಿದ್ದ ಸಮಯದಲ್ಲಿ ದಳವಾಯಿ ನಂಜರಾಜಯ್ಯನು ಹೈದರನ ಪರವಾಗಿ ಅರಸನಲ್ಲಿ ಈ ಕೆಳಗಿನಂತೆ ಒಂದು ವಿನಂತಿಯನ್ನು ಮಾಡಿದನು. ಅದರ ಸಾರಾಂಶವು ಈ ಕೆಳಗಿನಂತಿದೆ.

'ಮಹಾಸ್ವಾಮಿ, ತಮ್ಮ ರಾಜ್ಯಭಾರದಲ್ಲಿ ದೇಶ ಮುಂದುವರೆಯುತ್ತಿದೆ ರಾಜ್ಯ ವಿಸ್ತಾರವಾಗುತ್ತಿದೆ. ದೇವನಹಳ್ಳಿ ಮತ್ತು ಆರ್ಕಾಟುಗಳ ಮುತ್ತಿಗೆಯಲ್ಲಿ ಹೈದರನು ತುಂಬಾ ಉತ್ಸಾಹದಿಂದ ತನ್ನ ಪರಾಕ್ರಮವನ್ನು ಪ್ರದರ್ಶಿಸಿ ನಮ್ಮ ರಾಜ್ಯಕ್ಕೆ ಕೀರ್ತಿಯನ್ನು ತಂದಿದ್ದಾನೆ. ತಿರುಚನಾಪಳ್ಳಿಯ ಮುತ್ತಿಗೆಯಲ್ಲೂ ತನ್ನ ಸ್ವಂತ ಹಣದಿಂದ ಶತ್ರುಗಳ ನಾಶಮಾಡಿ ಜಯಗಳಿಸಿದ್ದಾನೆ. ಇನ್ನು ನಮಗೆ ಶತ್ರುಗಳು ನಿವಾರಣೆಯಾದಂತೆಯೇ ಸರಿ. ಇಷ್ಟೆಲ್ಲಾ ವಿಚಾರಗಳನ್ನು ಗಮನಿಸಿ ಪ್ರಭುಗಳಾದ ತಾವು ಆತನ ಸೂಕ್ತ ರೀತಿಯಲ್ಲಿ ಸನ್ಮಾನ ಮಾಡಬಹುದು' ಎಂದು ಹೇಳಿದನು. ಈ ಮಾತಿಗೆ ದೊರೆಗಳು ಸಹ ಒಂದುಕ್ಷಣ ಆಲೋಚಿಸಿ, ಹೈದರನ ಸೇವೆಯನ್ನು ಪರಿಗಣಿಸಿ ಆತನಿಗೆ **'ಖಾನ್ ಬಹದ್ದೂರ್'** ಎಂಬ ಬಿರುದನ್ನು ನೀಡಿ ದಿಂಡಿಗಲ್‌ನ ಫೌಜುದಾರನನ್ನಾಗಿ ಮಾಡಲು ಆದೇಶವನ್ನು ಹೊರಡಿಸಿದರು.[೨] ಹೈದರನ ಈ ಹೊಸ ಜವಾಬ್ದಾರಿಯು ಅತ್ಯಂತ ಸಮಯೋಚಿತವಾಗಿತ್ತು. ಏಕೆಂದರೆ ತಿರುಚನಾಪಳ್ಳಿಯ ಕದನದಲ್ಲಿ ಪೂರ್ವಘಟ್ಟ ಪ್ರದೇಶಗಳಲ್ಲಿನ ವಾತಾವರಣವನ್ನು ಅರಿಯಲು ಸಹಾಯವಾಗಿತ್ತು. ಅದೇ ಯುದ್ಧದಲ್ಲಿ ಶತ್ರುಗಳಿಗೆ ಹೈದರನ ಶಕ್ತಿಸಾಮರ್ಥ್ಯಗಳು ಪರಿಚಯವಾಗಿದ್ದವು. ಇದರಿಂದ ಹೈದರನ ವಿರೋಧವನ್ನು ಎದುರಿಸುವುದು ಕಷ್ಟಕರವಾಗಿತ್ತು.

ಕ್ರಿ.ಶ.೧೭೫೮ರಲ್ಲಿ ಶ್ರೀರಂಗಪಟ್ಟಣದ ಅರಮನೆಯಲ್ಲಿ ಅಸಮಧಾನ, ಅಸೂಯೆ, ಮಾತ್ಸರ್ಯಗಳು ತಲೆಯೆತ್ತಲಾರಂಭಿಸಿದ್ದವು. ಈ ವೇಳೆಗಾಗಲೇ ಅರಸರಿಗೂ ಮತ್ತು ದಳವಾಯಿ ದೇವರಾಜಯ್ಯನಿಗೂ ಮನಸ್ತಾಪ ಆರಂಭವಾಯಿತು. ಇದೇ ಸಮಯದಲ್ಲಿ ಸೈನಿಕರಿಗೆ ಸರಿಯಾದ ವೇತನವು ಕೂಡ ಪಾವತಿಯಾಗಿರಲಿಲ್ಲ. ಇದರಿಂದ ಸೈನಿಕರೂ ಕೂಡ ಈ ಸಮಯವನ್ನು ಬಳಸಿಕೊಂಡು ದಂಗೆಯೇಳಲು ಪ್ರಾರಂಭಿಸಿದರು. ಸೈನಿಕರು ತಮ್ಮ ಸೈನ್ಯದ ಶಿಸ್ತು ಸಂಯಮವನ್ನು ಗಾಳಿಗೆ ತೂರಿ ತಮ್ಮ ಸ್ವೇಚ್ಛೆಯಂತೆ ವರ್ತಿಸತೊಡಗಿದರು. ಸೈನ್ಯದ ಆಡಳಿತವೆಲ್ಲವೂ ಕೂಡ ಸೈನ್ಯದ ಗುತ್ತಿಗೆದಾರರ ಹಿಡಿತದಲ್ಲಿತ್ತು. ಯಾವ ಗುತ್ತಿಗೆದಾರರು ಸೈನಿಕರನ್ನು ಸೈನ್ಯಪಡೆಗಳಿಗೆ ಸೇರಿಸುತ್ತಾರೋ, ವೇತನವನ್ನು ನಿಗದಿಪಡಿಸುತ್ತಾರೋ ಹಾಗೂ ವೇತನವನ್ನು ನೀಡುತ್ತಿದ್ದರೋ ಅಂತಹವರ ಮಾತುಗಳನ್ನು ಮಾತ್ರ ಸೈನಿಕರು ಕೇಳುತ್ತಿದ್ದರು. ಈ ರೀತಿಯ ಗುತ್ತಿಗೆದಾರನು ಜನರನ್ನು ಕಲೆಹಾಕಿ ಸೈನ್ಯಕ್ಕೆ ಒದಗಿಸುತ್ತಿದ್ದನು. ಅದರಲ್ಲಿ ಹೈದರನೂ ಕೂಡ ಒಬ್ಬ ಗುತ್ತಿಗೆದಾರನ ರೀತಿಯಲ್ಲೇ ಸೈನ್ಯವನ್ನು ಕಲೆಹಾಕಿ ವೇತನವನ್ನು ಸಹ ನೀಡುತ್ತಿದ್ದನು. ಆತನ ಮಾತಿಗೆ ಹೆಚ್ಚು ಬೆಲೆಯಿದ್ದಿತು. ಆದ್ದರಿಂದ ಇಮ್ಮಡಿ ಕೃಷ್ಣರಾಜ ಒಡೆಯರು ಹೈದರನಿಗೆ ದಿಂಡಿಗಲ್ಲಿನಿಂದ ಹೊರಟು ಬರುವಂತೆ ತುರ್ತುಕರೆಯನ್ನು ಕಳುಹಿಸಿದರು. ತಕ್ಷಣವೇ ಮೈಸೂರಿಗೆ ಹೊರಟುಬಂದ ಹೈದರನು ಕೂಡಲೇ ದಂಗೆಯನ್ನಡಗಿಸಲು ಪ್ರಾರಂಭಿಸಿದನು. ಅದರಂತೆ ತನ್ನ ಸ್ವಂತ ಹಣದಲ್ಲೇ ವೇತನವನ್ನು ನೀಡಿ ಒಂದು ತಿಂಗಳ ಮುಂಗಡ ಹಣವನ್ನು ಕೂಡ ನೀಡಿದನು. ಇದರಿಂದ ಸೈನಿಕರೆಲ್ಲರೂ ಹೈದರನ ಮಾತಿಗೆ ಮರುಳಾಗಿ ದಂಗೆಯನ್ನು ಕೈಬಿಟ್ಟರು.

ಸೈನಿಕರ ದಂಗೆಯನ್ನು ಹತ್ತಿಕ್ಕಿದ ಕೂಡಲೇ ಹೈದರನು ಸೈನಿಕರಲ್ಲಿ ಪುಂಡರು ಯಾರೆಂದು ಪತ್ತೆಹಚ್ಚಿ ಅವರನ್ನೆಲ್ಲಾ ಸೈನ್ಯದಿಂದ ತೆಗೆದು ಹಾಕಲು ದೊರೆಗಳಿಂದ ಅಪ್ಪಣೆಯನ್ನು ಪಡೆದನು. ಅಂತಹ ಸೈನಿಕರನ್ನು ಕೆಲಸದಿಂದಲೇ ವಜಾ ಮಾಡಲಾಯಿತು. ಇಷ್ಟೇ ಅಲ್ಲದೆ ಎಲ್ಲಾ ಸೈನಿಕರಿಂದಲೂ ರಾಜನ ವಿರುದ್ಧ ದಂಗೆಯೇಳುವುದಿಲ್ಲ ಎಂದು ಮುಚ್ಚಳಿಕೆಯನ್ನು ಬರೆಸಿಕೊಳ್ಳಲಾಯಿತು. ಹಾಗೇನಾದರೂ ಒಂದು ವೇಳೆ ಸೈನಿಕರು ದಂಗೆಯೆದ್ದರೆ ಅಥವಾ ಲಂಚ, ಭ್ರಷ್ಟಾಚಾರ, ವಂಚನೆ, ಮುಷ್ಕರಗಳಲ್ಲಿ ಭಾಗವಹಿಸಿದರೆ ಅವುಗಳಿಗೆ ಕಠಿಣ ಕಾನೂನುಗಳನ್ನು ಜಾರಿಗೊಳಿಸಿದ್ದರಿಂದ ದಂಗೆ, ಮುಷ್ಕರ, ವಂಚನೆಗಳು ಕೇವಲ ಕನಸಾಗಿಯೇ ಉಳಿದವು. ಇವುಗಳು ಪಾಂಡಿಚೇರಿಯ ಫ್ರೆಂಚ್ ಸೈನಿಕರಲ್ಲಿದ್ದ ಶಿಸ್ತುಗಳಾಗಿದ್ದವು. ಅದೇ ಮಾದರಿಯ ಶಿಸ್ತನ್ನು ತನ್ನ ಸೈನ್ಯದಲ್ಲಿ ಅಳವಡಿಸಿಕೊಳ್ಳಲು ಹೈದರನು ಮುಂದಾಗಿದ್ದರಿಂದ ಸಮಸ್ಯೆಗಳು ಬಗೆಹರಿದು ಫೌಜುದಾರನ ನೇರ ಹಿಡಿತಕ್ಕೆ ಸೈನ್ಯವನ್ನು ತೆಗೆದುಕೊಳ್ಳುವುದು ಅವಶ್ಯಕವಾಗಿತ್ತು. ಕ್ರಿ.ಶ.೧೭೫೭ರಲ್ಲಿ ಮರಾಠರು ಪುಣೆಯಿಂದ ಬಾಲಾಜಿರಾವ್ ಪೇಶ್ವೆಯು ದೊಡ್ಡ ಸೈನ್ಯದೊಂದಿಗೆ ಶ್ರೀರಂಗಪಟ್ಟಣದ ಮೇಲೆ ದಾಳಿಮಾಡಿದ್ದರಿಂದ ಅವರನ್ನು ನಿಯಂತ್ರಿಸುವ ಜವಾಬ್ದಾರಿಯು ಹೈದರನ ಹೆಗಲಿಗೆ ಬಿದ್ದಿತು. ಆದರೆ ದಳವಾಯಿ ನಂಜರಾಜಯ್ಯನು ಬಾಲಾಜಿರಾವ್ ಪೇಶ್ವೆಯನ್ನು ಎದುರಿಸಲಾರದೆ ಒಪ್ಪಂದ ಮಾಡಿಕೊಳ್ಳಲು ಪ್ರಯತ್ನಿಸಿದನು. ಈ ಒಪ್ಪಂದದ ಪರವಾಗಿ ೩೨ ಲಕ್ಷರೂಗಳನ್ನು ಕೊಡುವಂತೆ ತೀರ್ಮಾನವಾಯಿತು. ಆದರೆ ಅರಮನೆಯ

ಬೊಕ್ಕಸದಲ್ಲಿ ಹಣವಿರಲಿಲ್ಲ. ಆರುಲಕ್ಷ ಮೊತ್ತದ ಸಾಲದ ಬಾಕಿಯನ್ನು ಉಳಿಸಿಕೊಂಡು ಉಳಿದ ೨೬ ಲಕ್ಷರೂಪಾಯಿಗಳಿಗೆ ನಾಗಮಂಗಲ, ಬೇಲೂರು, ಕಡೂರು, ಕಿಕ್ಕೇರಿ, ಬಾಣಾವರ, ಹಾರ್ನಹಳ್ಳಿ, ಹೊನ್ನವಳ್ಳಿ, ತುರುವೆಕೆರೆ, ಕಂದಿಕೆರೆ, ಚಿಕ್ಕನಾಯಕನಹಳ್ಳಿ, ಕಲ್ಲೂರು, ಕಡಬ ಮತ್ತು ಹುಲಿಯೂರು ದುರ್ಗಗಳನ್ನು ಒಳಗೊಂಡ ಗಡಿಪ್ರದೇಶಗಳನ್ನು ಮರಾಠರಿಗೆ ವಹಿಸಿಕೊಟ್ಟನು. ಆದರೆ ಈ ಸಂದರ್ಭದಲ್ಲಿ ಹೈದರನು ದಿಂಡಿಗಲ್ಲಿನಲ್ಲಿಯೇ ಇದ್ದನು. ಪೇಶ್ವೆ ಬಾಲಾಜಿರಾಯನಿಗೆ ಗಡಿಪ್ರದೇಶಗಳನ್ನು ಬಿಟ್ಟುಕೊಟ್ಟ ವಿಚಾರವನ್ನು ತಿಳಿದು ದಿಂಡಿಗಲ್ಲಿನಿಂದ ವಾಪಸ್ಸಾಗಿ ಮರಾಠರಿಗೆ ಭೋಗ್ಯಮಾಡಿದ್ದ ನೆಲೆಗಳನ್ನೆಲ್ಲಾ ವಶಪಡಿಸಿಕೊಂಡನು. ಮಹಾರಾಜರು ನಂಜರಾಜಯ್ಯನನ್ನು ಸರ್ವಾಧಿಕಾರಿ ಸ್ಥಾನದಿಂದ ಕೆಳಗಿಳಿಸಲು ತೀರ್ಮಾನಿಸಿದರು. ಆದರೆ ನಂಜರಾಜಯ್ಯನು ಈ ಸಂದರ್ಭದಲ್ಲಿಯೂ ಸೈನಿಕರಿಗೆ ವೇತನವನ್ನು ನೀಡಿರಲಿಲ್ಲ. ಹೈದರನು ಸೈನಿಕರಿಗೆ ವೇತನವನ್ನು ಮತ್ತೆ ಪಾವತಿಮಾಡಲು ಅವಕಾಶವು ಒದಗಿಬಂದಿತು. ಇದಕ್ಕೆ ಕಾರಣ ಸೈನಿಕರ ಮುಷ್ಕರಗಳು. ನಂಜರಾಜಯ್ಯನು ಮತ್ತೆ ಪೌಜುದಾರನಾಗಿದ್ದ ಹೈದರನ ಸಹಾಯವನ್ನೇ ನಿರೀಕ್ಷಿಸಿ ಸೈನಿಕರಿಗೆ ವೇತನವನ್ನು ನೀಡುವಂತೆ ಕೇಳಿಕೊಂಡನು. ಹೈದರ್ ಮತ್ತು ಖಂಡೇರಾಯ ಒಟ್ಟಾಗಿ ಈ ದಂಗೆಯನ್ನು ಅಡಗಿಸಿದರು. ಹೈದರನಿಗೆ ಪೌಜುದಾರನಿಂದ ದಳವಾಯಿಯಾಗಿ ಮುಂಬಡ್ತಿಯನ್ನು ಪಡೆದನು. ಒಟ್ಟಿನಲ್ಲಿ ಪೌಜುದಾರನು ಸೈನಿಕರನ್ನು ಸೈನ್ಯಕ್ಕೆ ಸೇರಿಸಿಕೊಳ್ಳುವ, ಅವರಿಗೆ ವೇತನ ಪಾವತಿಸುವ, ಮತ್ತು ಸೈನಿಕರ ದಂಗೆಗಳನ್ನು ಸುಲಭವಾಗಿ ಹತ್ತಿಕ್ಕುವಂತಹ ಕೆಲಸಗಳನ್ನೂ ಸುಲಭವಾಗಿ ನಿರ್ವಹಿಸುತ್ತಿದ್ದನು. ಜೊತೆಗೆ ರಾಜಧಾನಿಯಲ್ಲಿ ಏನಾದರೂ ಸಮಸ್ಯೆಗಳು ಎದುರಾದರೆ ತಕ್ಷಣವೇ ತನ್ನ ಸೈನ್ಯದೊಂದಿಗೆ ಆಗಮಿಸಿ ಸಮಸ್ಯೆಗಳನ್ನು ಬಗೆಹರಿಸಬೇಕಾಗಿದ್ದಿತು.

ಮುಮ್ಮಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ರಾಜ್ಯವನ್ನು ಆರು ಪೌಜುಗಳನ್ನಾಗಿ ವಿಭಾಗ ಮಾಡಲಾಯಿತು.[೬೩] ಅವುಗಳನ್ನು ೧೨೩ ತಾಲ್ಲೂಕುಗಳನ್ನಾಗಿ ವಿಭಜಿಸಲಾಯಿತು. ಅವುಗಳೆಂದರೆ ಬೆಂಗಳೂರು, ಮಧುಗಿರಿ, ಚಿತ್ರದುರ್ಗ, ಅಷ್ಟಗ್ರಾಮ, ಮಂಜಿರಾಬಾದ್ ಮತ್ತು ನಗರಗಳು ಮಧುಗಿರಿಯ ಪೌಜುದಾರಿಗಳಲ್ಲಿ ಒಟ್ಟು ೪೭, ಚಿತ್ರದುರ್ಗ ೧೩, ಅಷ್ಟಗ್ರಾಮ ೨೫, ಮಂಜಿರಾಬಾದ್ ೧೧ ಹಾಗೂ ನಗರ ೨೫ ತಾಲ್ಲೂಕುಗಳನ್ನು ಹೊಂದಿದ್ದವು. ಒಟ್ಟಾರೆ ಮೈಸೂರಿನ ಪೌಜುದಾರರು ಈ ಪೌಜುಗಳ ಆಡಳಿತವನ್ನು ನಿರ್ವಹಿಸುತ್ತಿದ್ದರು. ಪ್ರತಿ ಪೌಜುಗಳ ಪೌಜುದಾರರ ಅಧೀನದಲ್ಲಿ ಶಿರಸ್ತೇದಾರ್, ಅಮಲ್ದಾರ್, ಕರಣಿಕ ಮತ್ತು ಮುನ್ಷಿಗಳು ಕಾರ್ಯವನ್ನು ನಿರ್ವಹಿಸುತ್ತಿದ್ದರು. ಪ್ರತಿಯೊಂದು ಪೌಜುದಾರಿಗಳಲ್ಲಿಯು ಅವರದೇ ಆದ ಪ್ರತ್ಯೇಕ ಸೈನಿಕ ತುಕಡಿಗಳಿದ್ದವು. ಪೌಜುದಾರರು ತಮ್ಮ ಹತೋಟಿಯಲ್ಲಿದ್ದ ಸೈನ್ಯದ ನಿರ್ವಹಣೆಯನ್ನು ನೋಡಿಕೊಳ್ಳುತ್ತಿದ್ದರು. ಪ್ರತಿಯೊಂದು ತಾಲ್ಲೂಕುಗಳಲ್ಲಿ ಸುಬೇದಾರರು, ದಫೇದಾರರು, ಇಬ್ಬರು ಶಿರಸ್ತೇದಾರರು, ಕಾರಕೂನರು, ಮುನ್ಷಿಗಳು, ಅಂಚೆಮುತ್ಸದ್ದಿಗಳು ಕೊತ್ವಾಲರು, ಚಾವಡಿಯವರು ಮತ್ತು ಇತರೆ ಅಧಿಕಾರಿಗಳಿದ್ದರು. ಗ್ರಾಮಾಡಳಿತವು ಪೌಜುದಾರಿಕೆಯ ಅತ್ಯಂತ ಕಡೆಯ ಅಂಗವಾಗಿದ್ದು ಇದನ್ನು ಪಾಟೀಲ, ಗೌಡ, ಶಾನುಬೋಗರನ್ನು ಒಳಗೊಂಡ ಗ್ರಾಮಪಂಚಾಯ್ತಿ ಮಾದರಿಯ ಪಂಚಪ್ರಧಾನ ವ್ಯವಸ್ಥೆಯು ಕಾರ್ಯವನ್ನು ನಿರ್ವಹಿಸುತ್ತಿತ್ತು.[೬೪]

## ೩.೫. ಪಾಳೆಯಗಾರರು

ಕ್ರಿ.ಶ.೧೩೯೯ರಲ್ಲಿ ಸ್ಥಾಪನೆಯಾದ ಮೈಸೂರು ಕಿರುಪಾಳೆಯಪಟ್ಟಿಗೆ ಯದುರಾಯನೇ ಅದರ ಮೊದಲ ಪಾಳೆಯಗಾರನಾಗಿದ್ದು ಆಡಳಿತವನ್ನು ನಿರ್ವಹಿಸಿದನು. ಚಾಮರಾಜನು ಹದಿನಾಡು ಎಂಬ ಸಣ್ಣಹಳ್ಳಿಗೆ ಪಾಳೆಯಗಾರನಾಗಿದ್ದು ಆತನ ಮರಣದ ನಂತರ ಕಾರುಗಳ್ಳಿಯ ಮಾರಪ್ಪನಾಯಕನೇ ಈ ಹದಿನಾಡಿಗೆ ಪಾಳೆಯಗಾರನಂತೆ ವರ್ತಿಸತೊಡಗಿದನು. ಆದರೆ ಯದುರಾಯನು ಅವನನ್ನು ಕೊಂದು ತಾನೇ ಮೈಸೂರಿನ ಪಾಳೆಯಗಾರನಾಗಿ ಸ್ವತಂತ್ರ ಆಳ್ವಿಕೆಯನ್ನು ಪ್ರಾರಂಭಿಸಿದನು. ವಿಜಯನಗರದ ಕಾಲದಿಂದ ಕ್ರಿ.ಶ.೧೬೧೦ರವರೆಗೂ ಕೂಡ ಮೈಸೂರಿನ ಅರಸರು ಪಾಳೆಯಗಾರರಾಗಿದ್ದರು.[೬೫] ವಿಜಯನಗರದ ಅವಧಿಯಲ್ಲಿ ಪಾಳೆಯಗಾರರನ್ನು ಅಮರನಾಯಕರೆಂದು ಕರೆಯುತ್ತಿದ್ದರು. ಅಮರನಾಯಕರೆಂದರೆ ತಮ್ಮನ್ನು ಸಲಹುತ್ತಿದ್ದ ಸಾಮ್ರಾಜ್ಯದಲ್ಲಿ ನಿರ್ದಿಷ್ಟಪಡಿಸಿದ ಸೈನಿಕ ಸೇವೆಯನ್ನು ಸಲ್ಲಿಸಬೇಕಾಗಿದ್ದ ಅಧಿಕಾರಿಗಳಾಗಿದ್ದು, ಸೈನ್ಯದಲ್ಲಿ ಸೇವೆಸಲ್ಲಿಸಲು ಇಂತಿಷ್ಟು ಪ್ರಮಾಣದ ಭೂಮಿಯನ್ನು ಉಂಬಳಿಯಾಗಿ ಪಡೆಯುತ್ತಿದ್ದರು. ಅಮರ ನಾಯಕರ ಬಗೆಗೆ ವಿಜಯನಗರಕ್ಕೆ ಭೇಟಿ ನೀಡಿದ್ದ ವಿದೇಶಿ ಪ್ರವಾಸಿಯಾದ ನ್ಯೂನಿಜ್ ಬಹಳ ವಿಸ್ತಾರವಾಗಿ ಹೇಳುತ್ತಾನೆ. ಇಡೀ ರಾಜ್ಯವನ್ನು ಪ್ರಾಂತ್ಯಾಧಿಪತ್ಯದಲ್ಲಿ ವಿಭಜಿಸಲಾಗಿತ್ತು. ಅಲ್ಲದೆ ಪ್ರತಿಯೊಬ್ಬ ಪ್ರಾಂತಾ್ಯಧಿಪತಿಯು ಅಶ್ವ, ಗಜ ಮತ್ತು ಕಾಲಾಳು ಪಡೆಗಳ ತನ್ನ ಪಾಲನ್ನು ಉಳಿಸಿಕೊಂಡು ತನ್ನ ಸಾರ್ವಭೌಮನಿಗೆ ವಾರ್ಷಿಕ ಕಪ್ಪವನ್ನು ಸಲ್ಲಿಸುವ ತನಕ ತನಗೆ ವಹಿಸಿಕೊಟ್ಟ ಪ್ರದೇಶದಲ್ಲಿ ಸ್ವತಂತ್ರನಾಗಿರುತ್ತಿದ್ದನು. ಕ್ಷಿಪ್ರಕಾರ್ಯಾಚರಣೆಗಾಗಿ ಪೂರ್ಣಸನ್ನದ್ಧತೆಯಲ್ಲಿರುವಂತೆ ಸೈನ್ಯವನ್ನು ಇಟ್ಟಿರುವುದೇ ಒಡೆತನದ ಬೆಲೆಯಾಗಿದ್ದಿತು. ಇವುಗಳಲ್ಲಿ ತಪ್ಪಿದರೆ ಅವನು ತಕ್ಷಣ ಅವರ ಒಡೆತನವನ್ನು ಅರಸನು ಕಿತ್ತುಕೊಳ್ಳಲು ಬದ್ಧನಾಗುತ್ತಾನೆ[೬೬] ಎಂದಿದ್ದಾನೆ.

ಇದೇ ವ್ಯವಸ್ಥೆಯನ್ನು ಮೈಸೂರು ಒಡೆಯರ ಕಾಲದಲ್ಲಿಯೂ ಕಾಣಬಹುದಾದರೂ ಕೂಡ ವಿಜಯನಗರಕ್ಕಿಂತ ಸ್ವಲ್ಪ ಭಿನ್ನವಾಗಿದ್ದಿತು. ಸೋತ ಅರಸನು ಕಪ್ಪಕಾಣಿಕೆಗಳನ್ನು ಸಲ್ಲಿಸುವ ಜೊತೆಗೆ ಸ್ವತಂತ್ರವಾಗಿ ಆಳ್ವಿಕೆ ಮಾಡುವ ಮತ್ತು ರಾಜನಿಗೆ ಅತಿ ತುರ್ತುಸಂದರ್ಭಗಳಲ್ಲಿ ಆಡಳಿತದಲ್ಲಿ ಸಲಹೆಗಳನ್ನು ನೀಡುವ ಹಾಗೂ ಪ್ರಜೆಗಳಿಗಾಗಿಯೇ ಕಪ್ಪದ ಮೊತ್ತವನ್ನು ಉಪಯೋಗಿಸುವ ಅಧಿಕಾರ ಪಾಳೆಯಗಾರರಿಗೆ ಇದ್ದಿತು. ಕ್ರಿ.ಶ.೧೮೮೪ ರಿಂದ ೧೬೧೬ರವರೆಗೆ ಹಲವಾರು ಪಾಳೆಯಗಾರರನ್ನು ಸೋಲಿಸಿದರು. ಅದರಲ್ಲಿ ಕ್ರಮವಾಗಿ ನರಸೀಪುರದ ನರಸಿಂಹನಾಯಕ, ರಂಗಸಮುದ್ರದ ತಿರುಮಲರಾಜಯ್ಯ, ನರನಳ್ಳಿಯ ಮಲ್ಲರಾಜಯ್ಯ, ಅರಕೆರೆಯ ಅದಾಟರಾಯ, ತಲಕಾಡಿನ ನಂಜರಾಜಯ್ಯ, ಕನ್ನಂಬಾಡಿಯ ಗೋಪಾಲರಾಜಯ್ಯ, ಬೇಲೂರು ವೀರರಾಜಯ್ಯ, ಪಿರಿಯಾಪಟ್ಟಣ, ಸರಗೂರು ಹದಿನಾಡು, ಕಳಲೆ, ಹೆಗ್ಗಡದೇವನಕೋಟೆ, ಚನ್ನಪಟ್ಟಣ ಮೊದಲಾದ ಪಾಳೆಯಗಾರರನ್ನು ಸೋಲಿಸಿದರು.

ಅಂದಿನ ಕಾಲಕ್ಕೆ ಈ ಪಾಳೆಯಗಾರರೆಲ್ಲರೂ ಕೇವಲ ಸಣ್ಣಪುಟ್ಟ ಪಾಳೆಯಪಟ್ಟುಗಳಿಗೆ ಮಾತ್ರ ಪಾಳೆಯಗಾರರಾಗಿದ್ದರು. ರಾಜಒಡೆಯರು ಇವರಿಂದ ವಶಮಾಡಿಕೊಂಡ ಪ್ರದೇಶಗಳಿಂದ

ಕಂದಾಯ, ಕಪ್ಪಕಾಣಿಕೆಗಳನ್ನು ವಸೂಲಿಮಾಡಿದರು.[೬೭] ಇವರು ಅರಸನಿಗೆ ನಿಷ್ಠೆಯಿಂದ ತಮ್ಮ ಸೇವೆಸಲ್ಲಿಸಬೇಕಾಗಿತ್ತು. ಏಕೆಂದರೆ ಆ ವೇಳೆಗಾಗಲೇ ರಾಜಒಡೆಯರು ತಮ್ಮ ಅಧಿಕಾರ ಬಲದಿಂದ ಮೈಸೂರಿನ ಗಡಿಗಳನ್ನು ಗೆದ್ದು ರಾಜ್ಯವನ್ನು ವಿಸ್ತರಿಸಿದ್ದರು. ಆದರೆ ಕೆಲವು ಪಾಳೆಯಗಾರರು ತಮ್ಮ ಪಾಳೆಯಪಟ್ಟಿನ ಕಳೆದುಕೊಂಡ ಭಾಗವನ್ನು ಹಿಂಪಡೆಯಲು ತಮ್ಮ ಆಳರಸನ ಮೇಲೆಯೇ ಆಕ್ರಮಣ ಮಾಡುವ ಕಾರ್ಯಗಳಿಗೆ ಕೈಹಾಕುತ್ತಿದ್ದರು. ಇದಕ್ಕೆ ಚನ್ನಪಟ್ಟಣದ ಜಗದೇವರಾಯನ ಮಿತ್ರನಾದ ದೊಡ್ಡಯ್ಯನು ಮೈಸೂರಿನ ದಳವಾಯಿಯ ಮೇಲೆ ನಾಗಮಂಗಲದಲ್ಲಿ ಆಕ್ರಮಣಮಾಡಿದ್ದೇ ಜಗದೇವರಾಯನಿಗಾಗಿ. ಕನ್ನಂಬಾಡಿಯ ಗೋಪಾಲರಾಜಯ್ಯನು ಅಂಕುಶರಾಯನೊಡನೆ ಹೊನ್ನೆಮಡುವೆಂಬ ಊರಿನ ಹತ್ತಿರ ದಳವಾಯಿಯ ಸೈನ್ಯದ ಮೇಲೆ ಆಕ್ರಮಣ ಮಾಡಿದವು. ಅಂದಿನ ಕಾಲಕ್ಕೆ ಚಿಕ್ಕಪಾಳೆಯಪಟ್ಟಿನ ಪಾಳೆಯಗಾರನಾದ ಚಿಕ್ಕಪ್ಪಸೆಟ್ಟಿಯು ಒಂದು ವರ್ಷಕ್ಕೆ ೧೨,೦೦೦ ವರಹಗಳ ಪೊಗದಿಯನ್ನು ನೀಡುವಂತೆ ಒಪ್ಪಿಕೊಂಡನು.

ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ಬಿಜಾಪುರದ ಸುಲ್ತಾನನ ಸೈನ್ಯವು ಶ್ರೀರಂಗಪಟ್ಟಣದ ಮೇಲೆ ದಾಳಿಮಾಡಿದಾಗ ಮದ್ದೂರು, ಚೆನ್ನಪಟ್ಟಣ, ಬೆಳ್ಳೂರು, ನಾಗಮಂಗಲ, ಹೊಸಹೊಳಲು, ತಿಪ್ಪೂರು, ಕನ್ನಂಬಾಡಿ, ಮಳಲವಾಡಿ, ತೆಂಕಣಾಂಬಿ, ಹರದನಹಳ್ಳಿ, ಸತ್ಯಗಾಲ ಮಳವಳ್ಳಿ, ತಲಕಾಡುಗಳ[೬೮] ಪಾಳೆಯಗಾರರು ಮೈಸೂರಿನ ಪಕ್ಷವಹಿಸಿದ್ದರು. ಬಸವಾಪಟ್ಟಣದ ಹನುಮಪ್ಪ ನಾಯನು ಬಿಜಾಪುರದ ಸೈನ್ಯ ಮೈಸೂರಿನ ಮೇಲೆ ದಾಳಿಮಾಡಲು ಕಾರಣನಾಗಿದ್ದಾನೆ. ಈತ ಕೆಳದಿ ಅರಸರೊಂದಿಗೆ ಹೊಂದಿದ್ದ ವೈಮನಸ್ಸುಗಳೇ ರಣದುಲ್ಲಾಖಾನನು ದಕ್ಷಿಣ ಕರ್ನಾಟಕದ ಮೇಲೆ ದಾಳಿಮಾಡುವಂತೆ ಆತನನ್ನು ಪ್ರೋತ್ಸಾಹಿಸಿತು. ರಣದುಲ್ಲಾಖಾನನ ಒಕ್ಕೂಟದಲ್ಲಿ ಬಸವಾಪಟ್ಟಣದ ಹನುಮಪ್ಪನಾಯಕ, ಹರಪನಹಳ್ಳಿ, ಕನಕಗಿರಿ, ಸಂಡೂರು, ರಾಯದುರ್ಗ, ದೊಡ್ಡೇರಿ, ಕುಂದುರುಪೆ, ಹಿರಿಯೂರು, ಚಿಕ್ಕನಾಯಕನಹಳ್ಳಿ, ತುರುವೆಕೆರೆ, ಬೇಲೂರು, ನರಸಿಂಹಪುರ, ಪಾಲುಪರೆಯ ಪಾಳೆಯಗಾರರಿದ್ದರು. ಇವರೆಲ್ಲರೂ ಹನುಮಪ್ಪನಾಯಕನ ಕೃತ್ಯಕ್ಕೆ ಬಲಿಯಾಗಿ ಬಿಜಾಪುರದ ಸೈನ್ಯದಿಂದ ಸೋಲನ್ನು ಅನುಭವಿಸಿದವರೇ ಆಗಿದ್ದರು. ಪಾಳೆಯಗಾರರು ತಮ್ಮತಮ್ಮಲ್ಲೇ ಹೋರಾಟಗಳಲ್ಲಿ ಭಾಗವಹಿಸುತ್ತಿದ್ದರಿಂದ, ಮೈಸೂರು ಅರಸರು ಈ ಅನೈಕ್ಯತೆಯ ಲಾಭವನ್ನು ಪಡೆದು ಕೆಲವು ಪ್ರದೇಶಗಳ ಮೇಲೆ ದಾಳಿಮಾಡಿದರು. ಪಾಳೆಯಗಾರರು ಮೈಸೂರು ಅರಸರ ಆಳ್ವಿಕೆಗೆ ಒಳಗಾದಾಗ ದಳವಾಯಿಯ ನಂತರದ ಸ್ಥಾನದಲ್ಲಿದ್ದ ರಾಜ್ಯಪಾಲ ಅಥವಾ ಪೌಜುದಾರನ ಅಧೀನದಲ್ಲಿ ತಮ್ಮ ಆಳ್ವಿಕೆಯನ್ನು ಒಳಪಡಿಸಬೇಕಾಯಿತು. ದೊಡ್ಡದೇವರಾಜ ಒಡೆಯರ (ಕ್ರಿ.ಶ.೧೬೫೯–೧೬೭೩) ಅಧಿಕಾರಾವಧಿಯಲ್ಲಿ ಚೇಳೂರು, ಮಧುರೆ, ಕುಣಿಗಲು ಮತ್ತು ಘಟ್ಟದ ಮೊದಲಿಯಾರು ಮೊದಲಾದ ಪಾಳೆಯಗಾರರಿಂದ ಕ್ರಮವಾಗಿ ಕೆಲವು ಪ್ರದೇಶಗಳನ್ನು ವಶಮಾಡಿಕೊಂಡರು. ಶ್ರೀರಂಗಪಟ್ಟಣದ ಮೇಲೆ ಆಕ್ರಮಣ ಮಾಡುವ ಉದ್ದೇಶದಿಂದ ನರಸೀಪುರದ ಲಕ್ಷ್ಮಣಪ್ಪನಾಯುಕನು ಕೆಲವೊಂದು ಪಾಳೆಯುಗಾರರ ಜೊತೆಸೇರಿ ಯೋಜನೆಯನ್ನು ರೂಪಿಸಿಕೊಂಡಿದ್ದನು. ಆದರೆ ದೊಡ್ಡದೇವರಾಜ ಒಡೆಯರು ಅವರನ್ನು ಮಾರ್ಗಮಧ್ಯದಲ್ಲಿ ತಡೆದು ಅವರ ಕಿವಿ, ಮೂಗುಗಳನ್ನು ಕತ್ತರಿಸಿದರು.[೬೯] ಕೆಳದಿಯ ಶಿವಪ್ಪನಾಯಕನ ಕಡೆಯ

ಪಾಳೆಯಗಾರರು ಸೋತು ಒಡೆಯರಿಗೆ ಕಪ್ಪಕಾಣಿಕೆಗಳನ್ನು ನೀಡಿ ಒಪ್ಪಂದವನ್ನು ಮಾಡಿಕೊಂಡರು. ಅಲ್ಲದೆ ಯುದ್ಧದಲ್ಲಿ ತಾವುಗೆದ್ದ ಪ್ರದೇಶಗಳನ್ನು ಅವರ ಸ್ವಭಾವ ಮತ್ತು ಮನಸ್ಥಿತಿಗೆ ತಕ್ಕಂತೆ ಪುನಃ ಅದೆ ಪಾಳೆಯಗಾರರಿಗೆ ಹಿಂದಿರುಗಿಸಿದರು. ಅಲ್ಲದೆ ಕೆಲವು ಪ್ರದೇಶಗಳನ್ನು ಉಂಬಳಿಗಳನ್ನಾಗಿ ಪಡೆಯುವ ಅಧಿಕಾರವು ಕೂಡ ಪಾಳೆಯಗಾರರಿಗಿತ್ತು.[೨೦] ಚಿಕ್ಕದೇವರಾಜ ಒಡೆಯರ ಕಾಲದಲ್ಲೂ ಕೂಡ ಇದೇ ರೀತಿಯಾದ ಉದಾಹರಣೆಯು ನಮಗೆ ತಿಳಿದುಬರುತ್ತದೆ. ಐಗೂರಿನ ಕೃಷ್ಣಪ್ಪನಾಯಕನು ತನ್ನ ಮಕ್ಕಳು ರಾಜ್ಯಭಾರಮಾಡಲು ಕೆಲವು ಪ್ರದೇಶಗಳನ್ನು ಬಿಟ್ಟುಕೊಡುವಂತೆ ಕೇಳಿಕೊಂಡಾಗ ಐಗೂರು, ಸಕಲೇಶಪುರಗಳನ್ನು ಹಿಂದಿರುಗಿಸಿದರು. ಇಕ್ಕೇರಿಯ ಶಿವಪ್ಪನಾಯಕನು ವಸ್ತಾರೆ ಪ್ರದೇಶವನ್ನು ಹಿಂದಿರುಗಿಸುವಂತೆ ಕೇಳಿಕೊಂಡಾಗ ಆತನ ಜೀವನ ನಿರ್ವಹಣೆಗಾಗಿ ವಸ್ತಾರೆಯನ್ನು ಬಿಟ್ಟುಕೊಟ್ಟರು.[೨೧] ಗಡಿಗಳನ್ನು ಬಲಗೊಳಿಸುವ ನಿಟ್ಟಿನಲ್ಲಿ ಗಡಿಗಳಿಗೆ ಸುಬೇದಾರ ಪಾರುಪತ್ಯೆಗಾರ, ಗುಮಾಸ್ತರು, ರಾಯಸದವರು, ಅಂಚೆಹರಿಕಾರ, ಕೋಲುಕಾರ ಜನಗಳು, ದಫೇದಾರ, ಹಸ್ತಾಂತ್ರಿ, ಗೊಲ್ಲ, ಚಾವಡಿಯ ಕಾವಲುಗಾರರು, ದೀವಟಿಗೆಯವರು, ಕಂದಾಚಾರದವರು ಮೊದಲಾದವರನ್ನು ಗಡಿಗಳ ರಕ್ಷಣೆಗೆಂದೇ ನೇಮಿಸಿದರು. ಅದಕ್ಕೆ ಕಾರಣವೆಂದರೆ ಹೊರಗಿನ ಪಾಳೆಯಗಾರರ ಆಕ್ರಮಣಗಳೆಂದೇ ಹೇಳಬಹುದು. ಗಡಿಗಳಲ್ಲಿ ಕಂದಾಚಾರಕ್ಕೆ ತಲಾ ಒಬ್ಬೊಬ್ಬ ಠಾಣದಾರ ಮತ್ತು ಗುರಿಕಾರರು, ತಲಾ ಮೂರರಂತೆ ಶಿರಸ್ತೆದಾರ, ಗುಮಾಸ್ತರು, ದಫೆದಾರ, ಓಲೆಕಾರರು, ಕೊಂಬಿನವನು, ತಮಟೆಯವನು ಮುಂತಾದವರು ಪಾಳೆಯಗಾರರ ಅಧೀನದಲ್ಲಿರತಕ್ಕದ್ದು. ಒಂದು ವೇಳೆ ಯಾರಾದರೂ ತಮ್ಮ ತಮ್ಮ ಕೆಲಸಗಳನ್ನು ಮರೆತು ಅನಾವಶ್ಯಕವಾಗಿ ವೇತನವನ್ನು ಪೋಲುಮಾಡಿದರೆ ಅಂತಹವರನ್ನು ಕೆಲಸದಿಂದ ವಜಾಮಾಡುವ ಅಧಿಕಾರವು ಪಾಳೆಯಗಾರನಿಗಿತ್ತು. ಕೆಲವೊಮ್ಮೆ ಅಬೇಧ್ಯವಾದ ಕೋಟೆಗಳನ್ನು ವಶಪಡಿಸಿಕೊಳ್ಳುವ ಸಂದರ್ಭಗಳಲ್ಲಿ ಪಾಳೆಯಗಾರರು ತಮ್ಮ ಆಳರಸರೊಂದಿಗೆ ಕೈಜೋಡಿಸಿದ್ದು ಉಂಟು. ಮುಖ್ಯವಾಗಿ ಇಮ್ಮಡಿ ಕೃಷ್ಣರಾಜ ಒಡೆಯರ ಕಾಲಾವಧಿಯಲ್ಲಿ ಹೈದರ್ ಅಲಿಯು ಚಿತ್ರದುರ್ಗದ ಪಾಳೆಯಗಾರನಾದ ಮದಕರಿನಾಯಕನ ಸಹಾಯವನ್ನು ಪಡೆದು ನಿಜಗಲ್‌ದುರ್ಗವನ್ನು ವಶಪಡಿಸಿಕೊಂಡನು. ಈ ನಿಜಗಲ್‌ದುರ್ಗವು ಒಂದು ಅಬೇಧ್ಯವಾದ ಕೋಟೆಯಾಗಿದ್ದು, ಮೈಸೂರಿನ ಸೈನಿಕರಿಗೆ ಅತ್ಯಂತ ಕಠಿಣ ಸವಾಲಾಗಿದ್ದರಿಂದ ಹೈದರಾಲಿಯು ಮದಕರಿನಾಯಕನ ಸಹಾಯವನ್ನು ಪಡೆದನು. ಚಿತ್ರದುರ್ಗದ ಸೈನಿಕರು ನಿಜಗಲ್‌ದುರ್ಗವನ್ನು ಉಡಗಳ ಸಹಾಯದಿಂದ ಬೆಟ್ಟದ ಮೇಲೇರಿ ಶತ್ರುಗಳನ್ನು ಕೊಲ್ಲುವಂತಹ ಕಾರ್ಯಕ್ಕೆ ಕೈಹಾಕಿದ್ದರಿಂದ ದುರ್ಗವು ಸುಲಭವಾಗಿ ಹೈದರ್ ಅಲಿಯ ಕೈವಶವಾಯಿತು. ಆದರೆ ಹೈದರ್ ಅಲಿಯು ಚಿತ್ರದುರ್ಗದ ಮದಕರಿನಾಯಕನ ಸಾಮರ್ಥ್ಯವನ್ನು ಅರಿತಿದ್ದರಿಂದ ಅವನು ತನಗೆ ಪ್ರಬಲವಾದ ಪೈಪೋಟಿಯಾಗಬಹುದೆಂದು ತಿಳಿದು, ಕುಟಿಲ ನೀತಿಯಿಂದ ಅವನ ಮೇಲೆಯೇ ದಾಳಿಮಾಡಿದನು. ಆತನ ಮೇಲಿನ ಮೊದಲ ದಾಳಿಯು ವಿಫಲವಾದರೆ ಎರಡನೆಯ ದಾಳಿಯಿಂದ ಚಿತ್ರದುರ್ಗವು ಮೈಸೂರು ಒಡೆಯರ ವಶವಾಗುವಂತೆ ಮಾಡಿತು. ಹೈದರನ ಚಾಣಾಕ್ಷ ಕುಟೀಲ ನೀತಿಗಳಿಗೆ ಪಾಳೆಯಗಾರರು ಬಲಿಯಾಗುತ್ತಿದ್ದರು. ಟಿಪ್ಪುವಿನ ಮರಣದ ನಂತರ ಕರ್ನಾಟಕದ ಪಾಳೆಯಗಾರರು ಬ್ರಿಟಿಷರ ಸಹಾಯಕ ಸೈನ್ಯಪದ್ಧತಿ ಮತ್ತು ಇತರೆ ನೀತಿಗಳಿಂದ ತೆರೆಮರೆಗೆ ಸರಿಯುವಂತೆ ಮಾಡಿದವು.

ಮೈಸೂರು ಒಡೆಯರ ಕಾಲದಲ್ಲಿ ರಾಜರ ಪಟ್ಟಾಭಿಷೇಕ, ದಸರಾ, ಪುತ್ರೋತ್ಸವ ಮೊದಲಾದ ಸಂದರ್ಭಗಳಲ್ಲಿ ಮೈಸೂರಿಗೆ ಪಾಳೆಯಗಾರರು ಆಗಮಿಸುತ್ತಿದ್ದರು. ಇವರಲ್ಲಿ ಪ್ರಮುಖವಾದವರಿಗೆ ಆಹ್ವಾನವನ್ನು ನೀಡುತ್ತಿದ್ದುದು ಕೂಡ ಅವರ ಮನಸ್ಸಿನಲ್ಲಿ ರಾಜ್ಯದ ಸಂರಕ್ಷಣೆಯ ಬಗ್ಗೆ ಕಾಳಜಿ ವಹಿಸುವಂತೆ ಮಾಡುವ ಒಂದು ಯೋಜನೆಯಾಗಿತ್ತು. ಆದರೆ ಇದಕ್ಕೆ ಅಪವಾದವೆಂಬಂತೆ ಮೂರನೆಯ ಕೆಂಪೇಗೌಡನನ್ನು(ಕೆಂಪವೀರಪ್ಪ)ನನ್ನು ಮಾತ್ರ ದಳವಾಯಿ ದೇವರಾಜಯ್ಯನು ಮಾಗಡಿಯ ಸಮೀಪದ ಸಾವನದುರ್ಗದಲ್ಲಿ ಸೆರೆಹಿಡಿದು ಅವನನ್ನು ಶ್ರೀರಂಗಪಟ್ಟಣದ ಸೆರಮನೆಗೆ ದೂಡಲಾಯಿತು. ಮೂರನೆಯ ಕೆಂಪೇಗೌಡನು ಶ್ರೀರಂಗಪಟ್ಟಣದ ಸೆರೆಮನೆಯಲ್ಲಿಯೇ ಮರಣ ಹೊಂದಿದನು. ಚಿಕ್ಕದೇವರಾಜ ಒಡೆಯರ ನಂತರ ಪಾಳೆಯಗಾರರು ಸ್ವತಂತ್ರವಾಗುವ ಮನೋಭಾವವನ್ನು ಹೊಂದಿದ್ದರು. ಆದರೆ ಅದನ್ನು ಕೊನೆಗಾಣಿಸಿದ್ದು ಮೈಸೂರಿನ ದಳವಾಯಿಗಳಾದ ದೇವರಾಜಯ್ಯ, ನಂಜರಾಜಯ್ಯ ಮತ್ತು ಹೈದರ್ ಅಲಿಯವರು. ಆದರೂ ಪಾಳೆಯಗಾರರು ನಿಷ್ಠೆಯಿಂದಲೇ ತಮ್ಮ ಪಾತ್ರವನ್ನು ನಿರ್ವಹಿಸುತ್ತಾ ಬಂದಿದ್ದರು. ಪಾಳೆಯಗಾರ ವ್ಯವಸ್ಥೆಯು ಕೇಂದ್ರದಲ್ಲಿ ರಾಜನ ಅಧೀನದಲ್ಲಿದ್ದರೂ ಸಹ ರಾಜ್ಯಪಾಲರ ರೀತಿ ತಮ್ಮದೇ ಆದ ಪ್ರತ್ಯೇಕ ಸೈನ್ಯವನ್ನು ಹೊಂದಿದ್ದು, ತುರ್ತುಸಂದರ್ಭಗಳಲ್ಲಿ ರಾಜ್ಯಕ್ಕೆ ಸೇವೆಯನ್ನು ಸಲ್ಲಿಸಲು ಅವಕಾಶವಿದ್ದಿತು. ಮೈಸೂರು ಒಡೆಯರ ಕಾಲದಲ್ಲಿ ಪಾಳೆಯಗಾರ ವ್ಯವಸ್ಥೆಯು ಅರಸನ ಬೊಕ್ಕಸಕ್ಕೆ ಸಂಪತ್ತು ರಕ್ಷಣೆಗೆ ಸೈನ್ಯವು ದೊರೆಯುತ್ತಿದ್ದುದು ನಿಜವಾದರೂ ಕೆಲವೊಂದು ನ್ಯೂನ್ಯತೆಗಳಿಂದ ಕೂಡಿದ್ದಿತು. ಅದರಲ್ಲಿ ಪ್ರಮುಖವಾಗಿ ಈ ಪಾಳೆಯಗಾರರ ಸ್ವತಂತ್ರರಾಗಲು ಸಹ ಹವಣಿಸಿದ್ದುಂಟು. ಅದರಲ್ಲಿ ಮಾಗಡಿಯ ಮುಮ್ಮಡಿ ಕೆಂಪೇಗೌಡ ಮತ್ತು ಚಿತ್ರದುರ್ಗದ ಮದಕರಿನಾಯಕರು ಪ್ರಮುಖರು. ಏಕೆಂದರೆ ಅವರು ದಳವಾಯಿಗಳ ಕುಟಿಲನೀತಿಯ ವಿರುದ್ಧ ಬಂಡೇಳುವಂತಹ ಪರಿಸ್ಥಿತಿಯಲ್ಲಿದ್ದರು. ಅಲ್ಲದೆ ಮೈಸೂರು ಅರಸರು ತಮ್ಮ ಅಧಿಕಾರದ ಅವಧಿಯಲ್ಲಿ ಪಾಳೆಯಗಾರರನ್ನು ಸೋಲಿಸಿ ಅವರನ್ನು ತಮಗೆ ವಿಧೇಯರಾಗಿರುವಂತೆ ಮಾಡಿದರು. ತಮ್ಮ ಅಧೀನದಲ್ಲಿರುವ ಪಾಳೆಯಗಾರರಿಗೆ ಪಿಂಚಣಿ ಹಣವನ್ನು ನೀಡಿ ತಮಗೆ ಸೈನ್ಯದ ಅವಶ್ಯಕತೆಯು ಒದಗಿಬಂದಾಗ ಪರಿಸ್ಥಿತಿಗೆ ಅನುಗುಣವಾಗಿ ಸೈನ್ಯವನ್ನು ಒದಗಿಸಲೇಬೇಕಿತ್ತು.[೮೧] ಆದ್ದರಿಂದ ಅವರವರ ಸೀಮೆಗಳನ್ನು ಅದೇ ಪಾಳೆಯಗಾರರಿಗೆ ಹಿಂದಿರುಗಿಸಲಾಗಿತ್ತು. ಆದರೆ ಆ ಸೀಮೆ ಅಥವಾ ಪಾಳೆಯಪಟ್ಟಿನ ನಿಯಂತ್ರಣವು ಮೈಸೂರು ಒಡೆಯರಿಗೆ ಸೇರಿತ್ತು.

**೩.೬. ಸೈನ್ಯಾಡಳಿತದ ಇಲಾಖೆಗಳು**

ಸೈನ್ಯವು ಕ್ರಮಾನುಗತವಾಗಿ ಅರಸ, ದಳವಾಯಿಗಳು ಅಥವಾ ದಿವಾನರು ಫೌಜುದಾರರು ಮತ್ತು ಪಾಳೆಯಗಾರರು ಅಧಿಕಾರದ ಶ್ರೇಣೀಕರಣದ ಉನ್ನತ ಹಂತಗಳಲ್ಲಿದ್ದರು. ಇವರ ಅಧೀನದಲ್ಲಿ ಕಂದಾಚಾರರು, ಕಿಲ್ಲೆದಾರರು ಮೊದಲಾದವರನ್ನು ಒಳಗೊಂಡ ಹಲವಾರು ವಿಭಾಗಗಳನ್ನು ಕಾಣಬಹುದು. ಮೈಸೂರು ಅರಸರು ತಮ್ಮ ಸೈನಿಕವ್ಯವಸ್ಥೆಗೆ ಅನುಗುಣವಾಗಿ ಸೈನಿಕರನ್ನು ಒಂದು ಆಡಳಿತಯಂತ್ರದ ಅಧೀನದಲ್ಲಿ ತರಲು ಬಹುವಾಗಿ ಶ್ರಮಿಸಿದ್ದಾರೆ. ಏಕೆಂದರೆ ರಾಜನು ರಾಜ್ಯದ

ಎಲ್ಲಾ ಆಡಳಿತ ವಿಭಾಗಗಳಲ್ಲದೆ ಸೈನ್ಯದ ಒಳಾಡಳಿತದಲ್ಲಿನ ಒತ್ತಡಗಳನ್ನು ಎದುರಿಸಬೇಕಾಗಿತ್ತು. ಆದ್ದರಿಂದ ರಾಜಒಡೆಯರು (ಕ್ರಿ.ಶ. ೧೫೭೮-೧೬೧೭) ಇಪ್ಪತ್ತುಮೂರು ಊಳಿಗ ಅಥವಾ ಸೇವೆಗಳನ್ನು ಪ್ರಾರಂಭಿಸಿದರು. ಈ ಊಳಿಗ ಅಥವಾ ಸೇವೆಗಳು ಅರಮನೆಗೆ ಸಂಬಂಧಿಸಿದ್ದವುಗಳು. ಅದರಲ್ಲಿ ಪ್ರಮುಖವಾಗಿ ಕತ್ತಿಯ ಊಳಿಗ, ಚಾವಡಿಯಕಾವಲು ಊಳಿಗಗಳು ಪ್ರಮುಖವಾಗಿದ್ದವು. ಇವು ಸೈನಿಕರ ಊಳಿಗಗಳಾಗಿ ಪ್ರತ್ಯೇಕವಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದವು. ಮುಂದೆ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ(ಕ್ರಿ.ಶ.೧೬೭೩-೧೭೦೪) ಕೆಲವೊಂದು ಮಾರ್ಪಾಡುಗಳನ್ನು ಮಾಡಿ, ಅವುಗಳನ್ನು ಚಾವಡಿಗಳೆಂಬ ಹೆಸರಿನಿಂದ ಕರೆಯಲಾಯಿತು. ಚಾವಡಿಗಳೆಂದರೆ ಇಲಾಖೆಗಳೆಂದು ಅರ್ಥ. ಸೈನ್ಯವನ್ನು ಪ್ರತಿ ಗಡಿಗಳಲ್ಲೂ ಸಹ ಪ್ರತ್ಯೇಕವಾದ ತುಕಡಿಗಳ ಆಧಾರದ ಮೇಲೆ ನೇಮಿಸಿ ಗಡಿಭಾಗಗಳಲ್ಲಿ ಶತ್ರುಗಳಿಂದಾಗುತ್ತಿದ್ದ ಆಕ್ರಮಣಗಳನ್ನು ತಡೆಯುವುದಾಗಿತ್ತು. ಈ ಪ್ರಕಾರವಾಗಿ ಪ್ರತಿ ಗಡಿಗಳಲ್ಲಿ ತಲಾ ಒಂದೊಂದು ಸುಬೇದಾರ, ಪಾರುಪತ್ಯೆಗಾರರು, ಅಠವಣೆಗೆ ಪ್ರತಿಮೂರು, ಆರು ಗುಮಾಸ್ತರು, ಒಬ್ಬ ರಾಯಸದವನು, ಕಾಗದಪತ್ರಗಳು ಮತ್ತು ವರ್ತಮಾನವನ್ನು ಸಾಗಿಸಲು ಒಬ್ಬ ಅಂಚೆಹರಿಕಾರ, ಕೋಲುಕಾರರು, ಗಡಿಗಳಿಗೆ ಅಗತ್ಯಕ್ಕನುಗುಣವಾಗಿ ದಫೇದಾರರು, ಕಾಲೂಳಿಗದವರು, ಒಬ್ಬ ಹಸ್ತಾಂತ್ರಿ, ಒಬ್ಬ ಗೊಲ್ಲ, ಇಬ್ಬರು ಚಾವಡಿಯ ಕಾವಲುಗಾರರು, ಒಬ್ಬ ಕೈದೀವಟಿಗೆಯವನು ಮೊದಲಾದವರು ಶತ್ರುಗಳು ಮತ್ತು ಕಳ್ಳಕಾಕರಿಂದ ರಾಜ್ಯವನ್ನು ರಕ್ಷಿಸುವ ಸಲುವಾಗಿ ನೇಮಕವಾದರು. ಗಡಿಯೊಂದಕ್ಕೆ ಒಬ್ಬ ಠಾಣಾದಾರನು ಕಂದಾಚಾರ ಅಥವಾ ಪೊಲೀಸ್ ಆಗಿ ನೇಮಕವಾಗುತ್ತಿದ್ದನು. ಅವನ ಅಧೀನದಲ್ಲಿ ಒಬ್ಬ ಗುರಿಕಾರ, ಇಬ್ಬರು ಶಿರಸ್ತೆದಾರರು, ಮೂರು ಗುಮಾಸ್ತರು, ಹೋಬಳಿದಾರರು, ದಫೇದಾರರು, ಓಲೆಕಾರರು, ಕೊಂಬಿನವರು, ತಮಟೆಯವರು ಮುಂತಾದ ಸೇವಕರನ್ನು ನೇಮಕ ಮಾಡಲಾಗುತ್ತಿತ್ತು. ಗಡಿಗಳ ಸೂಕ್ಷ್ಮತೆಯ ಆಧಾರದ ಮೇಲೆ ೧೦೦ ರಿಂದ ೪೦೦ ಜನವರೆಗೂ ಓಲೆಕಾರರನ್ನು ನೇಮಿಸಲಾಗುತ್ತಿತ್ತು. ಈ ಓಲೆಕಾರರ ಆರುಮಂದಿಯ ಗುಂಪಿಗೆ ಒಬ್ಬ ದಫೇದಾರನೆಂಬುದಾಗಿ ಮುಖ್ಯಸ್ಥನಿರುತ್ತಿದ್ದನು. ಐವತ್ತುಜನ ಧಫೇದಾರರಿಗೆ ಒಬ್ಬ ಹೋಬಳಿದಾರನು ಮುಖ್ಯಸ್ಥನಾಗಿರುತ್ತಿದ್ದನು. ಹೀಗೆ ನೇಮಕವಾದ ಎಲ್ಲಾ ಸಿಬ್ಬಂದಿಗಳು ಅಗತ್ಯ ಸಂದರ್ಭಗಳಲ್ಲಿ ಯುದ್ಧಮಾಡುವುದಕ್ಕೆ ಮದ್ದುಗುಂಡುಗಳು ಮುಂತಾದ ಸಾಮಾಗ್ರಿಗಳನ್ನು ಸಿದ್ಧಮಾಡಿಟ್ಟುಕೊಳ್ಳುವಂತೆ ಆದೇಶಿಸಲಾಗಿತ್ತು. ಅಲ್ಲದೆ ಗಡಿಗಳಲ್ಲಿ ಅರಮನೆಯ ಉಗ್ರಾಣಕ್ಕೆ ಹರಿದುಬರುತ್ತಿದ್ದ ದವಸಧಾನ್ಯ, ಹಣಕಾಸು ಮುಂತಾದವುಗಳ ಮೇಲ್ವಿಚಾರಣೆಯನ್ನು ವಹಿಸಿಕೊಳ್ಳಲು ಬುದ್ಧಿವಂತನಾದ ಸುಬೇದಾರನನ್ನು ನೇಮಿಸಿಕೊಳ್ಳಲಾಗುತ್ತಿತ್ತು. ಅಲ್ಲದೆ ಈ ಹಣಕಾಸು ಮತ್ತು ದವಸಧಾನ್ಯಗಳ ಲೆಕ್ಕವನ್ನು ಬರೆದಿಡಲು ಶಿರಸ್ತೆದಾರ, ಗುಮಾಸ್ತ, ರಾಯಸದವರು ಉಗ್ರಾಣದ ರಕ್ಷಣೆಗೆ ನೇಮಕವಾದರು. ಕಿಲ್ಲೆದಾರ, ಠಾಣಾದಾರ ಮೊದಲಾದವರು ಸುಬೇದಾರನಿಂದ ನೇಮಕವಾಗುತ್ತಿದ್ದರು. ಇನ್ನು ದವಸಧಾನ್ಯ ಸಗ್ರಹಣೆಯ ಉಗ್ರಾಣಗಳಿಗೆ ಕಿರಿಯ ಅಧಿಕಾರಿಗಳಾಗಿ, ಕಡಿಮೆ ಎಂದರೆ ಒಂದು, ಹೆಚ್ಚೆಂದರೆ ಇಬ್ಬರು ಗುರಿಕಾರರು, ಮೂರುಜನ ಕರಣಿಕರು, ಗುಮಾಸ್ತರು, ಸೇವಕರು, ಅಳತೆಮಾಡುವ ಸಹಾಯಕರು, ತೂಕಮಾಡುವವರು, ಹುಲ್ಲುಮೆದೆಗಳಿಗೆ ಒಬ್ಬ ಗುರಿಕಾರ, ಒಬ್ಬ ಶಾನುಭೋಗ, ೨ರಿಂದ ೪ಜನ ಸೇವಕರು ನೇಮಕವಾದರು. ಅರಮನೆಯಲ್ಲಿ ೨೨ ಸೇವೆಗಳನ್ನು

ಪ್ರಾರಂಭಿಸಿ ಅದರಲ್ಲಿ ಖಾಸಾಮೈಗಾವಲ ಜನಗಳು ಮತ್ತು ಸಾಮಂತರ ಖಾಸಾ ರಾವುತರನ್ನು ನೇಮಿಸಿದರು. ಚಿಕ್ಕದೇವರಾಜ ಒಡೆಯರ್ ಅವರ ಕಾಲದಲ್ಲಿ ಮೂಗೂರು ಮನೆತನದ ಸೋಮರಾಜಯ್ಯನನ್ನು ಗುರಿಕಾರರನ್ನಾಗಿ ನೇಮಿಸಿದರು. ಗಡಿಯಿಂದ ಅರಮನೆ ಒಳಾಡಳಿತದಲ್ಲಿ ಮೈಸೂರು ಒಡೆಯರು ತಮ್ಮ ಸಂಬಂಧಿಕರಿಗೇ ಉನ್ನತ ಅಧಿಕಾರವನ್ನು ನೀಡಿದ್ದನ್ನು ಇಲ್ಲಿ ಗುರ್ತಿಸಬಹುದು.

ಚಿಕ್ಕದೇವರಾಜ ಒಡೆಯರು ತಮ್ಮ ಅಧಿಕಾರದ ಅವಧಿಯಲ್ಲಿ ತಮ್ಮ ಮೇಲಿನ ಕೆಲಸದ ಒತ್ತಡಗಳನ್ನು ಕಡಿಮೆ ಮಾಡಿಕೊಳ್ಳುವ ದೃಷ್ಟಿಯಿಂದ ಹದಿನೆಂಟು ಚಾವಡಿ ಅಥವಾ ಕಛೇರಿಗಳನ್ನು ಮೊಗಲರ ಅಧಿಕಾರದ ಮಾದರಿಯಲ್ಲಿಯೇ ಸ್ಥಾಪಿಸಿದರು. ಇದು ಕರಣಿಕ ಲಿಂಗಣ್ಣಯ್ಯನು ಔರಂಗಜೇಬನ ಆಸ್ಥಾನಕ್ಕೆ ಭೇಟನೀಡಿ ಅಲ್ಲಿನ ಅಧಿಕಾರದ ಮಾದರಿಯನ್ನು ಸವಿಸ್ತಾರವಾಗಿ ಅಧ್ಯಯನ ಮಾಡಿದ್ದರಿಂದ ಮೈಸೂರಿನಲ್ಲೂ ಕೆಲವೊಂದು ಮಾರ್ಪಾಡುಗಳನ್ನು ಮಾಡಿಕೊಂಡು ಅದೇ ಮಾದರಿಯ ಆಡಳಿತವನ್ನು ಅಳವಡಿಸಿಕೊಳ್ಳಲಾಯಿತು. ಆ ಪ್ರಕಾರವಾಗಿ ಸೃಷ್ಟಿಸಿದ ಹದಿನೆಂಟು ಚಾವಡಿಗಳನ್ನು ಈ ಕೆಳಗಿನಂತೆ ತಿಳಿಸಬಹುದಾಗಿದೆ.

೧. **ನಿರೂಪದ ಚಾವಡಿಯು** ರಾಜ್ಯದ ಗಡಿಗಳಲ್ಲಿರುವ ಅಧಿಕಾರಿಗಳು ಮೊದಲಾದವರು ಅರ್ಜಿಗಳ ಮುಖಾಂತರವಾಗಿ ತಮ್ಮ ತಮ್ಮ ಅಹವಾಲುಗಳನ್ನು ನಿರೂಪದ ಮುಖಾಂತರವಾಗಿ ಎರಡು ಪ್ರತಿಗಳಲ್ಲಿ ಬರೆದುಕೊಂಡು ದೊರೆಗಳಿಗೆ ಕಳುಹಿಸಿ ಮೊಹರು ಮಾಡಿಸಿ ಆಯಾಯ ಜನಗಳಿಗೆ ಕಳುಹಿಸಿಕೊಡುವಂತೆ ನಿರ್ದೇಶಿಸಲಾಯಿತು.[೨] ಇದರಿಂದ ರಾಜನು ವಿಧಿಸಿದ ಕಾಯ್ದೆಕಾನೂನುಗಳು ರಾಜ್ಯದ ಪ್ರತಿಗಡಿಗಳಿಗೂ ತಲುಪುವುದು ಸರಾಗವಾಯಿತು.

೨. **ಆಯಕಟ್ಟಿನ ಚಾವಡಿಯು** ಮೈಸೂರು ರಾಜ್ಯದ ಅಂದಿನ ೮೪ ಗಡಿಗಳಿಗೂ ವಿಧಿಸಲಾಗಿದ್ದ ಆಯವ್ಯಯದ ಸೈನ್ಯ, ತೋಷಿಖಾನೆ, ಅರಸರ ಖಾಸಾ ಆಯವ್ಯಯವನ್ನು ಬರೆದಿಡುವಂತಹ ಕಾರ್ಯವನ್ನು ಮಾಡುತ್ತಿತ್ತು. ಇದರಿಂದ ಹಣವು ಸೋರಿಕೆಯಾಗುವುದನ್ನು ತಡೆಗಟ್ಟಲು ಕ್ರಮವಹಿಸುವಂತೆ ಮಾಡುವ ಅಧಿಕಾ ರವನ್ನು ಈ ಇಲಾಖೆಯು ಹೊಂದಿತ್ತು.

೩. ಕಾವೇರಿಗೆ ದಕ್ಷಿಣ ಪಾರ್ಶ್ವದಲ್ಲಿರುವ ಗಡಿಗಳಿಗೆ **ಮೈಸೂರ ಹೋಬಳಿಯ ವಿಚಾರದ ಚಾವಡಿ** ಎಂದು ನಿಬಂಧನೆ ಮಾಡಿದರು. ಇದು ಕೇವಲ ಕಾವೇರಿ ನದಿಯ ದಕ್ಷಿಣ ದಿಕ್ಕಿಗೆ ಮಾತ್ರ ಸೀಮಿತವಾಗಿದ್ದು ಶ್ರೀರಂಗಪಟ್ಟಣಕ್ಕೆ ಸಮೀಪದಲ್ಲಿಯೇ ಮೈಸೂರನ್ನು ಒಳಗೊಂಡಂತೆ ಇದ್ದಿತು.

೪. ಕಾವೇರಿಗೆ ಉತ್ತರ ಪಾರ್ಶ್ವದಲ್ಲಿರುವ ಗಡಿಗಳಿಗೆ **ಪಟ್ಟಣದ ಹೋಬಳಿಯ ವಿಚಾರ ಚಾವಡಿ** ಎಂದು ಕರೆಯಲಾಯಿತು.

೫. **ಸೀಮೆಯ ಕಂದಾಚಾರದ ಚಾವಡಿಯು** ಗಡಿಗಳಲ್ಲಿರುವ ಕಿಲ್ಲೆದಾರರು ಶಿರಸ್ತೆದಾರರು, ಹೋಬಳಿದಾರ, ಓಲೆಕಾರ ಮುಂತಾದ ಸಿಬ್ಬಂದಿಯ ಜನಗಳ ಲೆಕ್ಕವನ್ನು ಆಯಾ ಕಿಲ್ಲೆಯಲ್ಲಿರುವ ಫಿರಂಗಿ, ತುಪಾಕಿ, ಮದ್ದುಗುಂಡು ಮೊದಲಾದ ಯುದ್ಧಸಂಬಂಧಿ ವಸ್ತುಗಳನ್ನು ಬರೆದಿಡುವಂತೆ ಆಜ್ಞಾಪಿಸಲಾಯಿತು.

೬. **ಬಾಗಿಲ ಕಂದಾಚಾರದ ಚಾವಡಿಯಲ್ಲಿ** ಸವಾರರು ಬಾರಿನವರು ಬಾರ್ಗೀರ್‌ರು ಅರಸನ ಸೇವೆಯಲ್ಲಿರುವವರು ಪಾಳೆಯಗಾರರ ಲೆಕ್ಕವನ್ನು ಬರೆದಿಡುವ ಕಾರ್ಯವನ್ನು ನಿರ್ವಹಿಸುತ್ತಿದ್ದರು.

೭. **ಸುಂಕದ ಚಾವಡಿಯು** ರಾಜ್ಯದ ಎಲ್ಲಾ ಸೀಮೆಯ ಮಾರ್ಗಗಳಲ್ಲಿ ಹೋಗಿ ಬರುವ ಜವಳಿವಸ್ತು, ದಿನಸಿ ಪದಾರ್ಥಗಳು ಪೇಟೆಯ ಅಂಗಡಿಗಳಲ್ಲಿ ಮಾರಾಟವಾಗುವ ವಸ್ತುಗಳ ನಿಬಂಧನೆಯ ಮೇರೆಗೆ ಸುಂಕವನ್ನು ತೆಗೆದುಕೊಂಡು ಒಟ್ಟು ಲೆಕ್ಕದ ವಿಚಾರಣೆಯನ್ನು ಮಾಡುವುದು ಈ ಇಲಾಖೆಯ ಕರ್ತವ್ಯವಾಗಿತ್ತು.

೮. **ಪೊಮ್ಮಿನ ಚಾವಡಿಯಲ್ಲಿ** ಸೀಮೆಯಲ್ಲಿರುವ ತ್ಯಾಜಗಾರರು, ಮಾನ್ಯಗಾರರು, ಬ್ರಾಹ್ಮಣರು ಅಧಿಕಾರಸ್ಥರು, ಮುಸ್ಲಿಂರು ಮೊದಲಾದವರು ವಸ್ತುಗಳನ್ನು ಕೊಳ್ಳುವಾಗ ಅಥವಾ ಮಾರುವಾಗ ಸರ್ಕಾರದ ಆದೇಶದ ಮೇರೆಗೆ ಮಾರಾಟ ಮಾಡಬೇಕು. ಇಲ್ಲದಿದ್ದರೆ ವಸ್ತುಗಳನ್ನು ಕೊಳ್ಳುವಾಗ ಅರ್ಧಸುಂಕವನ್ನು ಸರ್ಕಾರಕ್ಕೆ ಪಾವತಿಸಬೇಕಾಗಿತ್ತು. ಈ ಸುಂಕಗಳು ಸರ್ಕಾರದ ಆದಾಯವನ್ನು ಹೆಚ್ಚಿಸುವಲ್ಲಿ ಪ್ರಮುಖ ಆದಾಯದ ಮೂಲಗಳಾಗಿದ್ದವು.

೯. **ತೋಡಾಯದ ಚಾವಡಿಯು** ಪೊಮ್ಮಿನ ಚಾವಡಿಯಲ್ಲಿದ್ದಂತೆ ತೆರಿಗೆಯನ್ನು ವಸೂಲಿ ಮಾಡಿದರೂ ಸಹ ರಾಜಧಾನಿಯಾದ ಶ್ರೀರಂಗಪಟ್ಟಣದಲ್ಲಿ ಮಾತ್ರ ಅರ್ಧಶುಲ್ಕವನ್ನು ಕಂದಾಯದ ರೂಪದಲ್ಲಿ ತೆಗೆದುಕೊಳ್ಳುವಂತೆ ಆದೇಶವನ್ನು ಹೊರಡಿಸಲಾಗಿತ್ತು.

೧೦. **ಪಟ್ಟಣದ ಹೋಬಳಿಯ ಅಷ್ಟಗ್ರಾಮದ ಚಾವಡಿಯು** ಚಿಕ್ಕದೇವರಾಜ ಸಾಗರವೆಂಬ ಕಾಲುವೆಯ ವ್ಯಾಪ್ತಿಗೆ ೮ ಹೋಬಳಿಗಳನ್ನು ಸೇರಿಸಿ ಪಟ್ಟಣದ ಹೋಬಳಿಯ ಅಷ್ಟಗ್ರಾಮದ ಗಡಿ ಎಂಬುದಾಗಿ ನಿರ್ಧರಿಸಲಾಯಿತು.

೧೧. **ಮೈಸೂರು ಹೋಬಳಿಯ ಅಷ್ಟಗ್ರಾಮದ ಚಾವಡಿಯಲ್ಲಿ** ದೇವರಾಜ ಕಾಲುವೆಗೆ ೮ ಹೋಬಳಿಗಳನ್ನು ಸೇರಿಸಿ ಮೈಸೂರು ಹೋಬಳಿಯ ಅಷ್ಟಗ್ರಾಮದ ಗಡಿ ಎಂಬುದಾಗಿ ನಿಬಂಧನೆ ಮಾಡಿದರು. ಈ ಎರಡೂ ಅಷ್ಟಗ್ರಾಮದ ಗಡಿಗಳಲ್ಲಿಯೂ ಕಾವೇರಿ, ಹೇಮಾವತಿ ಮುಂತಾದ ನದಿಗಳಿಗೆ ಕಟ್ಟೆ, ಕಾಲುವೆಗಳ ಕಾಮಗಾರಿಯನ್ನು ಮಾಡಿಸಿ ಹುಟ್ಟುವಳಿಯ ಭತ್ತ, ಕಬ್ಬು ಮುಂತಾದವುಗಳ ಲೆಕ್ಕವನ್ನು ಬರೆಯುವಂತೆ ಆದೇಶಿಸಿದರು.

೧೨. **ಬೆಣ್ಣೆಯ ಚಾವಡಿಯಲ್ಲಿ** ಅರಮನೆಯ ದನಕರು, ಎಮ್ಮೆ, ಕುರಿ ಮುಂತಾದ ಪ್ರಾಣಿಗಳನ್ನು ನೋಡಿಕೊಂಡು ಹಸು, ಎಮ್ಮೆಗಳಿಂದ ಉತ್ಪಾದನೆಯಾದ ಹಾಲು ಮೊದಸು ಬೆಣ್ಣೆ ಮುಂತಾದವುಗಳಲ್ಲಿ ಕೆಲವು ಅರಮನೆಗಳಿಗೆ ಪ್ರತಿದಿನವೂ ಸರಬರಾಜಾಗುವಂತೆ ನೇಮಿಸಿದರು.

೧೩. **ಪಟ್ಟಣದ ಚಾವಡಿಯಲ್ಲಿ** ಶ್ರೀರಂಗಪಟ್ಟಣದ ಕೋಟೆಕೊತ್ತಲ ಜೀವಿ ಇವುಗಳನ್ನು ಬಂದೋಬಸ್ತು ಮಾಡುವುದಕ್ಕೂ ಅರಮನೆಯ ಕಾಮಗಾರಿಗೂ ಚಾವಡಿ, ಉಗ್ರಾಣ, ಸರ್ಕಾರಕ್ಕೆ ಸೇರಿದ ಮನೆ, ಮದ್ದಿನ ಮನೆ ಇವು ಮುಂತಾದವುಗಳ ಕಾಮಗಾರಿಗೂ, ಕಾಮಾಟಿ, ಚಂಗೋಲಿ, ಓಜರು, ಕಲ್ಲುಗೆಲಸದವರು, ಗಾರೆಯವರು ಮೊದಲಾದ ಕುಶಲಕರ್ಮಿಗಳು ಜನಗಳನ್ನು ನೇಮಿಸಿದರಲ್ಲದೆ ಕೋಟೆ ಪೇಟೆಗಳನ್ನು ಬಂದೋಬಸ್ತು ಮಾಡಲು ಕೊತ್ವಾಲ, ಶ್ಯಾನುಭೋಗ, ತಳವಾರ, ಕಳ್ಳಭಂಟರು ಮುಂತಾದ ಜನರು ಇರುವಂತೆ ನೇಮಕ ಮಾಡಿದರು.

೧೪. **ಬೇಹಿನ ಚಾವಡಿಯು** ೮೪ ಗಡಿಗಳಿಗೂ ಸಂಬಂಧಿಸಿದ್ದಾಗಿತ್ತು. ಇದು ರಾಜ್ಯದ ಎಲ್ಲಾ ಗಡಿಭಾಗಗಳಲ್ಲಿಯೂ ನಡೆದ ವರ್ತಮಾನಗಳಿಗೆ ತತ್‌ಕ್ಷಣದಲ್ಲಿಯೇ ಅಂಚೆಯ ಹರಿಕಾರನು ಬರೆದ ಅರ್ಜಿಯನ್ನು ಜಾಗ್ರತೆಯಾಗಿ ತಿಳಿಸುವಂತೆಯೂ ಅರಮನೆಯಿಂದ ಗಡಿಗಳಿಗೆ ಬರೆಸಿದ ನಿರೂಪವನ್ನು ಕಳಿಸುವಂತೆಯೂ ಕಾನೂನುಗಳನ್ನು ರೂಪಿಸಿದರು. ಮುಂದೆ ಇದೇ ಕಾನೂನುಗಳು ಹೆಚ್ಚು ಬಲಿಷ್ಠವಾಗಿ ರಾಜ್ಯದಲ್ಲಿ ಶಾಂತಿ ನೆಲೆಸುವಂತೆ ಮಾಡಿತು.

೧೫. **ಸಮುಖದ ಚಾವಡಿಯು** ಅರಸರ ಮಕ್ಕಳಿಗೆ ಅಧಿಕಾರಿ ವರ್ಗದವರು ಅರಮನೆಯ ಸೇವೆಯಲ್ಲಿರುವ ಸೇವಕರು, ಇಟ್ಟ ಊಳಿಗದವರು, ಹರಿಕಾರರು, ಗೊಲ್ಲರು, ಆನೆ, ಕುದುರೆ, ಒಂಟೆ ಕೋಟೆಯೆತ್ತು ಗುಡಾರ, ಕನಾಡು ಮುಂತಾದ ಅರಮನೆಯ ಎಲ್ಲಾ ಊಳಿಗಗಳಿಗೂ ಮೊದಲೇ ನಿರ್ಧರಿಸಿದ್ದ ಮೇರೆಗೆ ಕರ್ತವ್ಯ ನಿರ್ವಹಿಸಲು ಆಯಾಯ ಹೋಬಳಿಯ ಗುರಿಕಾರರು ಶ್ಯಾನುಬೋಗರು ಬರೆಸುವ ಲೆಕ್ಕಗಳನ್ನು ಬರೆದುಕೊಂಡು ಸಮುಖದ ಗುರಿಕಾರ ಸೋಮರಾಜಯ್ಯನಿಗೋ ಅಥವಾ ಅಪ್ಪಾಜಯ್ಯನಿಗೋ ತಿಳಿಸುವಂತೆಯೇ ಅರಸರ ಗಮನಕ್ಕೂ ತರುವಂತೆ ಆದೇಶಿಸಲಾಯಿತು.

೧೬. **ದೇವಾಲಯದ ಚಾವಡಿಯ** ಅಡಿಯಲ್ಲಿ ರಾಜ್ಯದ ಎಲ್ಲಾ ದೇವಾಲಯಗಳ ಆಯವ್ಯಯಗಳನ್ನು ಅಲ್ಲಿ ನಡೆಯುವಂತಹ ಆಯಕಟ್ಟುಗಳನ್ನು ನೋಡಿಕೊಳ್ಳುವಂತೆ ಮಾಡುವುದು. ಇದರಿಂದ ಪ್ರತಿದೇವಾಲಯಗಳ ಜಾತ್ರೆ ಉತ್ಸವಗಳಂತಹ ಆಚರಣೆಗಳು ಸರಾಗವಾಗಿ ನಡೆಯುವಂತೆ ನೋಡಿಕೊಳ್ಳಲು ಅವಕಾಶವಾಗುತ್ತಿತ್ತು.

೧೭. **ಕಬ್ಬಿಣದ ಚಾವಡಿಯು** ರಾಜ್ಯದ ಸೀಮೆಯಲ್ಲಿ ಸಿಗುವ ಎಲ್ಲಾ ಕಬ್ಬಿಣದ ಅದಿರನ್ನು ಸಂಸ್ಕರಿಸಿ ಅರಮನೆಯ ನೇರ ಆಳ್ವಿಕೆಯಿಂದಲೇ ಕಬ್ಬಿಣದ ಸರಕು ಸರಂಜಾಮುಗಳನ್ನು ತಯಾರಿಸಿ ಮಾರಾಟ ಮಾಡಲಾಗುತ್ತಿತ್ತು. ಅಲ್ಲದೆ ರಾಜ್ಯದ ರಕ್ಷಣೆಗೆ ಅಗತ್ಯವಾಗಿದ್ದ ಆಯುಧಗಳ ತಯಾರಿಕೆಗೆ ಅಗತ್ಯವಾದ ಕಚ್ಚಾವಸ್ತುಗಳನ್ನು ಪೂರೈಸಿ ಆಯುಧಗಳ ತಯಾರಿಕೆಯಿಂದ ಸೈನಿಕರಿಗೆ ಅಗತ್ಯವಾಗಿದ್ದ ಕತ್ತಿ, ಗುರಾಣಿ, ಫಿರಂಗಿಗಳು ಗುಂಡುಗಳಂತಹ ಆಯುಧ ತಯಾರಿಕೆಗೆ ಪ್ರೋತ್ಸಾಹವನ್ನು ನೀಡಲಾಗುತ್ತಿತ್ತು. ಅಲ್ಲದೆ ಸರ್ಕಾರ ಮಾತ್ರವೇ ಆಯುಧಗಳನ್ನು ತಯಾರಿಸಿಬೇಕಾಗಿದ್ದು ಸಾರ್ವಜನಿಕರಿಗೆ ಅವಕಾಶವಿರಲಿಲ್ಲ.

೧೮. **ಹೊಗೆಸೊಪ್ಪಿನ ಚಾವಡಿಯು** ರೈತರು ಬೆಳೆದರೂ ಸಹ ಆದಾಯದ ದೃಷ್ಟಿಯಿಂದ ರೈತರಿಂದ ಸರ್ಕಾರವೇ ತೆಗೆದುಕೊಂಡು ಮಾರಾಟ ಮಾಡುತ್ತಿತ್ತು. ಇದರಿಂದ ರೈತರಿಗೂ ಮತ್ತು ಸರ್ಕಾರಕ್ಕೂ ಆದಾಯ ಹೆಚ್ಚಾಗುವುದಲ್ಲದೆ ಸೈನಿಕರಿಗೆ ಅಗತ್ಯವಾಗಿದ್ದ ತಂಬಾಕನ್ನು ಸಹ ಒದಗಿಸಲಾಗುತ್ತಿತ್ತು.[೨೪]

ಈ ಪ್ರಕಾರವಾಗಿ ೧೮ ಚಾವಡಿಗಳನ್ನು ಸ್ಥಾಪಿಸಿ ಅವುಗಳನ್ನು ನೋಡಿಕೊಳ್ಳಲು ಪ್ರತಿ ಚಾವಡಿಗೆ ಒಬ್ಬನಂತೆ ಗೊತ್ತುಗಾರ, ಮೂರು ದಫೇದಾರರು, ಗುಮಾಸ್ತರು, ರಾಯಸದವರು, ಸೇವಕರು, ಗೊಲ್ಲರು, ಕಾವಲುಗಾರರು, ದೀವಟಿಗೆಯವರು ಮುಂತದ ಜನರನ್ನು ನೇಮಕಮಾಡಿ ಅವರಿಗೆ ಅಧಿಕಾರದ ಶ್ರೇಣಿವ್ಯವಸ್ಥೆಯ ನೌಕರಿಯ ಆಧಾರದ ಮೇಲೆ ವೇತನವನ್ನು ನೀಡಲಾಯಿತು.

ಪ್ರತಿದಿನವೂ ಕೂಡ ಈ ಅಧಿಕಾರಿಗಳು ಜಾಗರೂಕರಾಗಿ ತಮ್ಮ ಕೆಲಸ ಕಾರ್ಯಗಳನ್ನು ಮಾಡಬೇಕಿತ್ತು. ಅಲ್ಲದೆ ಅರಸನ ದಂತಧಾವನದ ಕಾಲದಲ್ಲಿ ಪ್ರತಿ ಚಾವಡಿಗಳ ಮುಖ್ಯಸ್ಥರುಗಳು ತಮ್ಮ ತಮ್ಮ ಕೆಲಸಗಳ ವರದಿಯನ್ನು ಒಪ್ಪಿಸಬೇಕಾಗಿತ್ತು. ಮುಂದೆ ಇದೇ ಕಛೇರಿಗಳೇ ವಿವಿಧ ಹೆಸರುಗಳಿಂದ ಕರೆಯಲ್ಪಟ್ಟವು. ಅದರಲ್ಲಿ ಪ್ರಮುಖವಾದವುಗಳು ಈ ಕೆಳಗಿನಂತಿವೆ.

**೩.೬.೧. ಕಿಲ್ಲೆ ಕಛೇರಿ**

ಮೈಸೂರು ರಾಜ್ಯದ ಸೀಮೆಯಲ್ಲಿ ನಿರ್ಮಾಣವಾದ ಹಲವಾರು ಕೋಟೆ ಕೊತ್ತಲುಗಳು ರಾಜಒಡೆಯರಿಂದ ಟಿಪ್ಪುಸುಲ್ತಾನನ ಮರಣದವರೆಗೂ ತಮ್ಮದೇ ಆದ ಸ್ಥಾನಮಾನವನ್ನು ಹೊಂದಿದ್ದವು. ಅದಕ್ಕೆ ಕಾರಣವೆಂದರೆ ಅಂದಿನ ಯುದ್ಧದ ಸ್ಥಿತಿಗತಿಗಳು ಕೋಟೆಕೊತ್ತಲಗಳನ್ನೇ ಅವಲಂಬಿಸಿದ್ದವು. ಕಿಲ್ಲೆಕಛೇರಿಯನ್ನು ಚಿಕ್ಕದೇವರಾಜ ಒಡೆಯರು ಸೀಮೆಯ ಕಂದಾಚಾರದ ಚಾವಡಿ ಎಂಬ ಹೆಸರಿನಲ್ಲಿ ಪ್ರಾರಂಭಿಸಿದ್ದರು. ಇದರಲ್ಲಿ ಗಡಿಗಳಲ್ಲಿರುವ ಕೋಟೆಗಳ ಮೇಲ್ವಿಚಾರಕರು ತಮ್ಮ ಅಧಿಕಾರವನ್ನು ನಿರ್ವಹಿಸಲು ಹಾಗೂ ಆದಾಯ ವ್ಯಯಗಳ ಲೆಕ್ಕವನ್ನು ಬರೆದಿಡಬೇಕಿತ್ತು. ಇದರಿಂದ ಪ್ರತಿಯೊಂದು ಕೋಟೆಗಳಲ್ಲಿಯೂ ತರಿಸಿಕೊಳ್ಳುತ್ತಿದ್ದ ಮದ್ದುಗುಂಡುಗಳು, ಸೇವೆಸಲ್ಲಿಸುತ್ತಿದ್ದ ಓಲೆಕಾರರು, ಶಿರಸ್ತೆದಾರರು, ಹೋಬಳಿದಾರರು, ಕಿಲ್ಲೆದಾರರ ಲೆಕ್ಕದ ಜೊತೆಗೆ ಫಿರಂಗಿ, ತುಪಾಕಿ, ಮದ್ದುಗುಂಡುಗಳ ಲೆಕ್ಕವನ್ನು ತಪ್ಪದೆ ಬರೆದಿಡಬೇಕಿದ್ದಿತು. ಏಕೆಂದರೆ ಒಂದು ಕೋಟೆಯಲ್ಲಿ ಎಷ್ಟು ಪ್ರಮಾಣದ ಮದ್ದುಗುಂಡುಗಳು ತುಪಾಕಿಗಳು ಮುಂತಾದ ಆಯುಧಗಳನ್ನು ಬಳಸುತ್ತೇವೆ. ಎಷ್ಟು ಆಯುಧಗಳು ರಿಪೇರಿಗೆ ಕಾದಿವೆ ಎಂದು ತಿಳಿಯುವುದು ಅಗತ್ಯವಾಗಿತ್ತು. ಅಂತೆಯೇ ಹೈದರ್ ಅಲಿಯು ಶ್ರೀರಂಗಪಟ್ಟಣದ ಕೋಟೆಯನ್ನು ಮೊಕದಂ ಸಾಬನ ಅಧೀನಕ್ಕೆ ವಹಿಸಿಕೊಟ್ಟನು. ಪ್ರತಿಯೊಂದು ಕೋಟೆಯನ್ನು ಸಂಪೂರ್ಣವಾಗಿ ರಕ್ಷಿಸುವ ಜವಾಬ್ದಾರಿಯು ಆಯಾಯ ಕಿಲ್ಲೆದಾರರಿಗೆ ಸೇರಿದ್ದಿತು. ಹೈದರನ ಕಡೆಯ ಸೈನಿಕರೇ ಕೋಟೆಯ ರಕ್ಷಣೆಗಾಗಿ ಬಹುಪಾಲಿನಲ್ಲಿ ನೇಮಕವಾಗುತ್ತಿದ್ದರು. ಇಬ್ರಾಹಿಂ ಸಾಹೇಬ್, ಹುಸೇನ್ ಸಾಹೇಬ್, ಮಿರ್ಜಾ ಇಸ್ಮಾಯಿಲ್ ಹುಸೇನ್ ಬೇಗ್, ಹೈದರ್ ಹುಸೇನ್ ಎಂಬುವವರು ಕಿಲ್ಲೆದಾರರಾಗಿ ವಿವಿಧ ಕಾಲಘಟ್ಟಗಳಲ್ಲಿ ಬೆಂಗಳೂರಿನ ಕೋಟೆಗೆ ಕಿಲ್ಲೆದಾರರಾಗಿ ಸೇವೆಯನ್ನು ಸಲ್ಲಿಸಿದರು.[೨೫] ಕಿಲ್ಲೆದಾರ್ ಇಬ್ರಾಹಿಂ ಸಾಹೇಬನು ಬೆಂಗಳೂರಿನ ಕೋಟೆಯನ್ನು ಕಲ್ಲುಗಳಿಂದ ಜೀರ್ಣೋದ್ಧಾರ ಮಾಡಿಸಿದನು. ಅಲ್ಲದೆ ಪಾರುಪತ್ತೆದಾರನ ಬದಲಾಗಿ ಕಿಲ್ಲೆದಾರನಾಗಿದ್ದ ಕಬೀರ್‌ಬೇಗ್‌ನನ್ನು ಅಮಲ್ದಾರನನ್ನಾಗಿ ನೇಮಿಸಲಾಯಿತು. ಟಿಪ್ಪುವಿನ ಕಾಲದಲ್ಲಿ ಅಮಲ್ದಾರರು ಕಿಲ್ಲೆದಾರರ ಬದಲಾಗಿ ನೇಮಕವಾಗುತ್ತಿದ್ದರು. ಹೈದರನು ಕಬೀರ್‌ಖಾನನನ್ನು ಬೆಂಗಳೂರಿನ ಕಿಲ್ಲೆದಾರನಾಗಿ ಅಧಿಕಾರವನ್ನು ವಹಿಸಿಕೊಂಡಾಗ ಕೋಟೆಯ ಕಾವಲಿಗೆ ನೇಮಕವಾಗಿದ್ದ ಹಿಂದೂ ಸೈನಿಕರನ್ನು ತೆಗೆದುಹಾಕಿ ಅವರ ಸ್ಥಾನದಲ್ಲಿ ಮುಸ್ಲಿಂ ಸಿಪಾಯಿಗಳನ್ನು ನೇಮಿಸಿದನು. ಆದರೆ ಈ ಮಧ್ಯೆ ದಿವಾನನಾಗಿದ್ದ ಖಂಡೇರಾಯನಿಂದ ಒಂದು ಆದೇಶವು ಜಾರಿಯಾಯಿತು. ಅದರ ಪ್ರಕಾರ ಬೆಂಗಳೂರಿನ ಪಾರುಪತ್ಯೆಗಾರರು ಕಿಲ್ಲೇದಾರ

ಕಬೀರ ಬೇಗನನ್ನು ಅಧಿಕಾರದಿಂದ ವಜಾಮಾಡಬೇಕಿತ್ತು. ಇಲ್ಲವೆ ದಸ್ತಗಿರಿ ಮಾಡಬೇಕಿತ್ತು. ಆದರೆ ಎಲ್ಲಾ ಸೈನಿಕರು ಕಿಲ್ಲೆದಾರನ ಕಡೆಯವರೇ ಆಗಿದ್ದರಿಂದ ಆ ಆದೇಶಕ್ಕೆ ಕಿಂಚಿತ್ತೂ ಕೂಡ ವಿದೇಯತೆಯನ್ನು ಸೈನಿಕರು ತೋರದಿದ್ದರಿಂದ ಆದೇಶವು ಮುರಿದುಬಿತ್ತು.[೨೬] ಕಬೀರ್‌ಬೇಗನೂ ಸಹ ಹೈದರನ ಸಲಹೆಗಳನ್ನು ಪಡೆದು ಮುಂಜಾಗ್ರತೆಯ ಕ್ರಮಗಳನ್ನು ಅನುಸರಿಸಿ ಅದಕ್ಕೆ ತಕ್ಕ ಸಿದ್ಧತೆಗಳನ್ನು ಮಾಡಿಕೊಂಡನು. ಸಿರಾ ಪ್ರಾಂತ್ಯದಲ್ಲಿನ ಹೋರಾಟದಲ್ಲಿ ಹೈದರನ ಯುದ್ಧದ ಪ್ರತಿರೋಧವನ್ನು ತೋರಿದ ತ್ರಂಯಂಬಕ ಕೃಷ್ಣ ಎಂಬ ಕಿಲ್ಲೆದಾರನು ಪೇಶ್ವೆಗಳ ಪರವಾಗಿ ಹೋರಾಡಿದರೂ ಸಹ ಹೈದರನಿಗೆ ಆತನು ಶರಣಾಗಬೇಕಾಯಿತು.

ಹೈದರನು ಕಲ್ಲಿಕೋಟೆಯಲ್ಲಿ ವಿಜಯವನ್ನು ಸಾಧಿಸಿ ಶ್ರೀರಂಗಪಟ್ಟಣಕ್ಕೆ ಬರುವ ಸಂದರ್ಭದಲ್ಲಿ (ಕ್ರಿ.ಶ.೧೭೬೬) ಇಮ್ಮಡಿ ಕೃಷ್ಣರಾಜ ಒಡೆಯರು ತೀರಿಕೊಂಡಿದ್ದರು. ಅರಸರ ಮರಣದ ನಿಮಿತ್ತವಾಗಿ ತನ್ನ ಕೃತಜ್ಞತೆಯನ್ನು ಅರ್ಪಿಸಲು ಶ್ರೀರಂಗಪಟ್ಟಣದ ಕಿಲ್ಲೆದಾರನಾಗಿದ್ದ ಮುಕಂದದಾರ್ ಸೈಯ್ಯದ್ ಮೊಕದಂ ಸಾಹೇಬರೇ ತಕ್ಷಣ ತಾವು ಅರಮನೆಯ ಮಹಾಮಾತೃಶ್ರೀಯವರ ಸನ್ನಿಧಾನಕ್ಕೆ ಹೋಗಿ ಸಮಾಧಾನೋಕ್ತಿಗಳನ್ನು ಅರಿಕೆ ಮಾಡಿಸಿ. ದಿವಂಗತ ಇಮ್ಮಡಿ ಕೃಷ್ಣರಾಜ ಒಡೆಯರಿಗೆ ಅವರ ಮತಪದ್ಧತಿ ಸಂಪ್ರದಾಯದ ಮೇರೆಗೆ ಪರಲೋಕ ಸಾಧನವನ್ನು ಮಾಡಿಸಿ ಮಹಾಮಾತೃ ಚೆಲುವಾಜಮ್ಮಣ್ಣಿಯವರ ಅಪ್ಪಣೆಯ ಮೇರೆಗೆ ಚಿಕ್ಕದೊರೆಗಳಿಗೆ ಪಟ್ಟಾಭಿಷೇಕವನ್ನು ಮಾಡಿಸುವನಾಗು ಎಂದು ಪತ್ರದಲ್ಲಿ ಹೈದರನು ತಿಳಿಸಿದ್ದನು.[೨೭] ಮೊಕದಂ ಸಾಹೇಬನು ಅರಮನೆಗೆ ತೆರಳಿ ಇಮ್ಮಡಿ ಕೃಷ್ಣರಾಜ ಒಡೆಯರ ಪರಲೋಕ ಕಾರ್ಯವನ್ನು ಅದೇ ಪ್ರಕಾರವಾಗಿ ಮಾಡಿಸಿ ನಂಜರಾಜ ಒಡೆಯರಿಗೆ ಪಟ್ಟಾಭಿಷೇಕವನ್ನು ಮಾಡಿಸಿದನು. ಕ್ರಿ.ಶ.೧೭೯೧ರಲ್ಲಿ ಬೆಂಗಳೂರಿನ ಕೋಟೆಗೆ ಬ್ರಿಟಿಷರು ಆಕ್ರಮಣ ಮಾಡಿದಾಗ ಬ್ರಿಟಿಷರ ಕುಟಿಲನೀತಿಯಿಂದ ಬೆಂಗಳೂರು ಕೋಟೆಯಲ್ಲಿ ಮೈಸೂರು ಸೈನಿಕರು ಬಹುಸಂಖ್ಯೆಯಲ್ಲಿ ಪ್ರಮಾಣದಲ್ಲಿ ಮರಣ ಹೊಂದಿದರು. ಈ ಹೋರಾಟದಲ್ಲಿ ಕಿಲ್ಲೇದಾರನಾಗಿದ್ದ ಬಹದ್ದೂರ್‌ಖಾನನು ಹೋರಾಡುತ್ತಲೇ ಹಲಸೂರು ಬಾಗಿಲ ಬಳಿಯಲ್ಲಿಯೇ ಮರಣ ಹೊಂದಿದನು. ಕಿಲ್ಲೇದಾರನು ಸತ್ತ ಸುದ್ದಿಯನ್ನು ಟಿಪ್ಪು ಸುಲ್ತಾನನಿಗೆ ಕಾರ್ನ್‌ವಾಲೀಸನು ಪತ್ರದ ಮುಖಾಂತರವಾಗಿ ಮುಟ್ಟಿಸಿ ಈ ಮಹಮದೀಯ ಸೇನಾಪತಿಯನ್ನು ಎಲ್ಲಿ ಸಂಸ್ಕಾರ ಮಾಡಬೇಕು? ನಿಮ್ಮ ಶಾಸ್ತ್ರದ ಪ್ರಕಾರವೋ ಅಥವಾ ನಮ್ಮ ಮಿಲಿಟರಿ ಪದ್ಧತಿಯ ಪ್ರಕಾರವೋ? ಎಂದು ಕೇಳಿದಾಗ ಟಿಪ್ಪು ರಣರಂಗದಲ್ಲಿ ಮಡಿದವರಿಗೆ ಅವರು ಮಡಿದ ಸ್ಥಳದಲ್ಲಿಯೇ ಸಮಾಧಿ ಮಾಡುವುದು ಉಚಿತ. ಆ ಸ್ಥಳದಲ್ಲಿಯೇ ಸಮಾಧಿ ಮಾಡಿಸಿ ಎಂದು ಪ್ರತ್ಯುತ್ತರಿಸಿದನು.[೨೮] ಆದ್ದರಿಂದ ಬಹದೂರ್ ಖಾನನು ಸತ್ತಸ್ಥಳದಲ್ಲಿಯೇ ಸಮಾಧಿ ಮಾಡಿಸಿದನು.

ಕ್ರಿ.ಶ.೧೯೧೩ರಲ್ಲಿ ಕಿಲ್ಲೆಕಛೇರಿ ವಿಭಾಗದಿಂದ ಹೊರಡಿಸಿದ ಆದೇಶದ ಮೇರೆಗೆ ಮಹಮದ್ ಷರೀಪ್ ಮತ್ತು ಅಹ್ಮದ್‌ಬೇಗ್ ಎಂಬುವನ ಮಗನಾದ ರಸೂಲ್ ಬೇಗ್ ಎಂಬುವನಿಗೆ ಅರಮನೆಯ ಅಂಗರಕ್ಷಕ ಪಡೆಯಿಂದ ದ್ವಿತಿಯ ದರ್ಜೆಯ ಸವಾರನನ್ನಾಗಿ ನೇಮಿಸಲಾಯಿತು.[೨೯] ಕಿಲ್ಲೆಕಛೇರಿಯ

ಸೈನಿಕರನ್ನು ಸೈನ್ಯದಲ್ಲಿ ಬಳಸಿಕೊಳ್ಳುವಂತೆಯೇ ಭೂಮಾಪನ ಮಾಡಲು ಸಹ ನೇಮಿಸಿಕೊಳ್ಳಲಾಗುತ್ತಿತ್ತು. ಕ್ರಿ.ಶ.೧೯೧೦ರಲ್ಲಿ ತಂಬೂಚೆಟ್ಟಿಯವರು ಮೈಸೂರಿನ ದಿವಾನರಾಗಿದ್ದಾಗ ಅರಮನೆಯ ಬ್ರಿಟಿಷ್ ಕಂಟ್ರೋಲರ್ ಅವರು ಪತ್ರವನ್ನು ಬರೆದರು. ಮೈಸೂರು, ಬೆಂಗಳೂರು ರಸ್ತೆಯಲ್ಲಿರುವ ಕ್ಲೋಸ್‌ಪೇಟೆಯಲ್ಲಿ ಅಂಗರಕ್ಷಕ ದಳದವರಿಗೆ ವಸತಿ ಸಮುಚ್ಚಯವನ್ನು ನಿರ್ಮಿಸಲು ಟಿ.ಲಕ್ಷ್ಮಣರಾವ್ ಅವರಿಗೆ ಜಮೀನನ್ನು ಸ್ವಾದೀನಗೊಳಿಸಿಕೊಂಡು ಭೂಮಾಪನ ಮಾಡಲು ನೇಮಿಸಿಕೊಳ್ಳಲಾಯಿತು. ಇದು ನಗರಪಾಲಿಕೆಯ ಕೇಂದ್ರ ಕಛೇರಿಯಾಗಿದ್ದ ಮೈಸೂರು ವಿಭಾಗದಲ್ಲಿನ ಸಂವಹನದೊಂದಿಗೆ ಅರಮನೆಯ ಕಂಟ್ರೋಲರ್‌ನ ನೇತೃತ್ವದಲ್ಲಿ ವರದಿಯನ್ನು ಸಿದ್ಧಪಡಿಸಲಾಯಿತು. ಈ ವರದಿಯ ಪ್ರಕಾರ ಅರಮನೆಯ ನಿಯಂತ್ರಣಾಧಿಕಾರಿಯ ನೇತೃತ್ವದಲ್ಲಿ ೩೦,೦೦೦ರೂಗಳನ್ನು ಅರಸರ ಅಂಗರಕ್ಷಕ ಪಡೆಯ ಸೈನಿಕರ ವಸತಿ ಸಮುಚ್ಚಯದ ನಿರ್ಮಾಣಕ್ಕಾಗಿ ಬಳಸಿಕೊಳ್ಳಲಾಯಿತು.[೮೦] ಬಾರ್‌ಇಲಾಖೆಯ ವಸತಿಯು ಬೆಂಗಳೂರು ಮೈಸೂರು ರಸ್ತೆಯ ಬಾಡಿಗಾರ್ಡ್ ಲೈನ್‌ಗೆ ಮೈದಾನವನ್ನು ಒದಗಿಸುವುದ್ದಾಗಿತ್ತು. ಏಕೆಂದರೆ ಅರಸರ ಅಂಗರಕ್ಷಕ ಪಡೆಯ ಸೈನಿಕ ಕವಾಯತುಗಳಿಂದ ಸೈನಿಕರನ್ನು ದೈಹಿಕವಾಗಿ ಸದೃಡಗೊಳಿಸಲು ಅವಶ್ಯಕವಾಗಿತ್ತು. ಕಿಲ್ಲೆಕಛೇರಿಯಿಂದ ಅರಮನೆಯ ಅಂಗರಕ್ಷಕ ಪಡೆಗೆ ಸಮವಸ್ತ್ರವನ್ನು ಒದಗಿಸಲಾಗುತ್ತಿತ್ತು. ಅವುಗಳು ಈ ರೀತಿಯಾಗಿದ್ದವು. ಕಡನೀಲಿ, ಬಿಳಿ ಹಾಗೂ ಚಿನ್ನದಜರಿ ಹೊಂದಿರುವ ಟೋಪಿ, ಅಂಗಿಗಳನ್ನು ಒದಗಿಸಲು ವಿವಿಧ ಮೊತ್ತವನ್ನು ಪ್ರತ್ಯೇಕವಾದ ಸಮವಸ್ತ್ರಗಳಿಗೆ ಪ್ರತ್ಯೇಕವಾಗಿ ಬೆಲೆಯನ್ನು ನಿಗದಿಪಡಿಸಲಾಯಿತು. ಅದರಲ್ಲಿ ಪ್ರಮುಖವಾಗಿ ಇಬ್ಬರು ಅಧಿಕಾರಿಗಳು ಮತ್ತು ಒಬ್ಬ ಸವಾರರಿಗೆ ಪೂರ್ತಿತೋಳಿನ ಸಮವಸ್ತ್ರಗಳಿದ್ದರೆ, ಅದರಲ್ಲಿ ಇಬ್ಬರು ಕಮಾಂಡೆಂಟ್‌ಗಳು ಮತ್ತು ಒಬ್ಬ ಜಮಾದಾರನು ಈ ಸಮವಸ್ತ್ರಗಳನ್ನು ಬಳಸುತ್ತಿದ್ದರು. ಕಮಾಂಡೆಂಟ್‌ಗೆ ಒಂದು ಮುಕ್ಕಾಲುಗಜ ಕಡುನೀಲಿ ಬನಾತಿನ ಬಟ್ಟೆ, ಒಂದುಗಜ ಹಾಸುಬಟ್ಟೆ, ಉಣ್ಣೆಯ ಬಿಳಿಬಟ್ಟೆ, ಚಿನ್ನದ ಬಣ್ಣದ ಕಸೂತಿಗಳು, ಚಿನ್ನದ ಬಣ್ಣದ ಹೊಲಿಗೆಯ ದಾರ ಹಾಗೂ ನೂಲು, ಅರ್ಧಗಜ ಬಿಳಿಬಣ್ಣದ ಪಟ್ಟಿಗಳನ್ನು ಹೊಂದಿದ್ದ ಬಟ್ಟೆಯನ್ನು ನೀಡಲಾಗುತ್ತಿತ್ತು. ಇವುಗಳಿಗೆ ೧೯೯ರೂಪಾಯಿ, ಏಳುಪೈಸೆ, ಎಂಟು ಆಣೆಗಳಾಗುತ್ತಿದ್ದವು. ಚಳಿಗಾಲ ಮತ್ತು ಬೇಸಿಗೆ ಕಾಲದ ದ್ವಿತೀಯ ಸಮವಸ್ತ್ರವು ಅರಮನೆಯ ಅಂಗರಕ್ಷಕ ಅಧಿಕಾರಿಗಳಿಗೆ ೨೪೭ರೂ, ೧೮ಪೈಸೆಗಳಾದರೆ ಉಳಿದ ಸಿಬ್ಬಂದಿಗಳಿಗೆ ೮೯೨ರೂ, ಎಂಟು ಪೈಸೆಗಳಾಗಿದ್ದವು.[೮೧]

ಸವಾರರಿಗೆ ಕಿಲ್ಲೆಕಛೇರಿಯಿಂದ ಇನಾಂಗಳನ್ನು ಕೊಡಲಾಗುತ್ತಿತ್ತು. ಅತಿ ಚಿಕ್ಕವಯಸ್ಸಿನ ಶಿವರಾಂಸಿಂಗ್ ರಾಜಾರಾವ್(೨೧ವರ್ಷ), ಅಬ್ದುಲ್ ರಫೀಕ್(೨೨ ವರ್ಷ) ಸೇವೆಯನ್ನು ಸಲ್ಲಿಸುತ್ತಿದ್ದ ಅತಿ ಚಿಕ್ಕವಯಸ್ಸಿನ ಸಿಪಾಯಿಗಳು. ಹಾಗೆಯೇ ೬೨ವರ್ಷ ವಯಸ್ಸಿನ ಗಿರಿಯ ಅವರ ಮನೆಯ ಹೆಣ್ಣುಮಕ್ಕಳಿಗೆ ತಲಬಿನ(ವೃದ್ಧಾಪುವೇತನ) ಮೇರೆಗೆ ಇನಾಂ ಅನ್ನು ನೀಡಲಾಯಿತು. ದಫೇದಾರ್ ಮತ್ತು ಕಾವಲುಗಾರರಿಗೆ ವೇತನವನ್ನು ಒಂದು ಮತ್ತು ಎರಡು ರೂಗಳಂತೆ ಕ್ರಮವಾಗಿ

ಏರಿಸಲಾಯಿತು. ಸವಾರ ರಾಮರಾವ್ ಅವರನ್ನು ಸೇವೆಯಿಂದ ಬಿಡುಗಡೆಗೊಳಿಸುವಾಗ ಅವರಿಗೆ ಸಲ್ಲಬೇಕಿದ್ದ ಬಾಕಿವೇತನವನ್ನು ನೀಡಿ ಬೀಳ್ಕೊಡಲಾಯಿತು.[೮]

ಕ್ರಿ.ಶ.೧೯೧೬ರ ಜನವರಿಯಲ್ಲಿ ಹಿಂದೂ ಮತ್ತು ಮುಸ್ಲಿಂ ಸೈನಿಕರ ಸುಮಾರು ೧೨೦ ಕುಟುಂಬಗಳು ವಾಸವಿದ್ದ ಪ್ರದೇಶದಲ್ಲಿ ಎರಡು ಶಾಲೆಗಳನ್ನು ತೆರೆಯಲು ಪ್ರಸ್ತಾವನೆಯನ್ನು ಕಳುಹಿಸಲಾಯಿತು. ಅದರಲ್ಲಿ ಒಂದು ಆಂಗ್ಲೋ-ಇಂಡಿಯನ್ ಮತ್ತೊಂದು ಕನ್ನಡ ಬಾಲಕಿಯರ ಶಾಲೆಗಳು ಪ್ರಮುಖವಾಗಿದ್ದವು. ಆಂಗ್ಲೋ-ಇಂಡಿಯನ್ ದೇಶೀಯ ಶಾಲೆಗೆ ಮಾಸಿಕವಾಗಿ ೩೦ರೂಗಳಂತೆ ಒಬ್ಬ ಮುಖ್ಯ ಶಿಕ್ಷಕ. ತಲಾ ೧೫ರೂಗಳಂತೆ ಒಬ್ಬೊಬ್ಬ ಕನ್ನಡ ಮತ್ತು ಹಿಂದಿ ಶಿಕ್ಷಕರನ್ನು ನೇಮಿಸಲಾಯಿತು. ಬಾಲಕಿಯರ ಶಾಲೆಗಾಗಿ ೨೦ರೂ ಮಾಸಿಕ ವೇತನದಂತೆ ಒಬ್ಬ ಶಿಕ್ಷಕ ಮತ್ತು ೬ರೂಗಳ ಮಾಸಿಕ ವೇತನದಂತೆ ಒಬ್ಬ ನಿರ್ವಾಹಕನನ್ನು ನೇಮಿಸಲಾಯಿತು.[೯]

ಕ್ರಿ.ಶ.೧೯೧೮-೧೯೧೯ರ ಆಯವ್ಯಯ ಪಟ್ಟಿಯಲ್ಲಿ ಮೈಸೂರು ಒಡೆಯರು ವಾರ್ಷಿಕವಾಗಿ ಖರ್ಚುಮಾಡುತ್ತಿದ್ದ ಮೊತ್ತವು ಸೈನಿಕರ ಸಮವಸ್ತ್ರದ ವರ್ಣ, ವಿನ್ಯಾಸ, ಅಳತೆ ಮೊದಲಾದವುಗಳನ್ನು ಕುರಿತು ತಿಳಿಸುತ್ತದೆ. ಅಲ್ಲದೆ ಮೈಸೂರು ಅರಮನೆಯಲ್ಲಿ ಪ್ರತಿನಿತ್ಯದ ಕಾಲದ ಗಣನೆಗಾಗಿ ಘಂಟೆ ಬಾರಿಸುವ ಬದಲು ಪ್ರತಿ ಗಂಟೆಗೊಮ್ಮೆ ಬಂದೂಕಿನಿಂದ ಗುಂಡುಗಳು ಮತ್ತು ಕುಶಾಲ ತೋಪುಗಳನ್ನು ಹಾರಿಸುವ ಪರಿಪಾಠವಿದ್ದಿತು. ಆ ಪ್ರಕಾರವಾಗಿ ಬೆಳಗಿನ ಜಾವ ೫ ಗಂಟೆಗೆ, ಮಧ್ಯಾಹ್ನ ೧೨ ಗಂಟೆಗೆ, ರಾತ್ರಿ ೯ ಗಂಟೆಗೆ ಬಂದೂಕುಗಳಿಂದ ಗುಂಡುಗಳನ್ನು ಹಾರಿಸಲಾಗುತ್ತಿತ್ತು. ಮಹಾರಾಜರ ಹುಟ್ಟುಹಬ್ಬದ ದಿನ ವಂದನೆಗಳನ್ನು ಸಲ್ಲಿಸಲು ಮತ್ತು ದಸರಾ ಸಂದರ್ಭದಲ್ಲಿ ಸೈನ್ಯದ ಪರವಾಗಿ ರಾಜನು ಗೌರವ ಸ್ವೀಕರಿಸಲು ಈ ರೀತಿಯಾಗಿ ಗುಂಡುಗಳನ್ನು ಹಾರಿಸುವ ಪದ್ಧತಿಯಿದ್ದಿತು. ಈಗಲೂ ಕೂಡ ದಸರಾ ಹಬ್ಬದ ಸಂದರ್ಭದಲ್ಲಿ ಕುಶಾಲ ತೋಪುಗಳನ್ನು ಹಾರಿಸುವ ಮುಖಾಂತರವಾಗಿ ಗೌರವವನ್ನು ಸೂಚಿಸಲಾಗುತ್ತಿತ್ತು. ಕ್ರಿ.ಶ.೧೯೧೭ರಲ್ಲಿ ಮಹಾರಾಜರಿಗೆ ವಂದನೆ ಸಲ್ಲಿಸಲು ೨೧ಗನ್‌ಗಳನ್ನು ಬಳಸಲಾಯಿತು. ಆದರೆ ಕ್ರಿ.ಶ.೧೯೧೮ರ ಡಿಸೆಂಬರ್‌ನಲ್ಲಿ ಈ ಗನ್‌ಗಳ ಸಂಖ್ಯೆಯನ್ನು ೩೧ಕ್ಕೆ ಏರಿಸಿ ಇವುಗಳಿಗೆ ಗನ್‌ಪೌಡರನ್ನು ಮಾತ್ರ ಬಳಸಲಾಯಿತು. ಮರಾಮತ್ ಇಲಾಖೆಯವರು ಮದ್ದುಗುಂಡುಗಳನ್ನು ತಯಾರಿಸುವ ಹೊಣೆಹೊತ್ತಿದ್ದರು. ಕ್ರಿ.ಶ.೧೯೧೮ ಜೂನ್‌ನಿಂದ ೧೯೧೯ರ ಜುಲೈವರೆಗೆ ೨,೯೦೭ ರೂಪಾಯಿಗಳನ್ನು ತೆಗೆದಿಡಲಾಯಿತು. ಆದರೆ ಕ್ರಿ.ಶ.೧೯೧೯ರ ಜುಲೈವರೆಗೆ ಖರ್ಚಾದ ಒಟ್ಟು ಮೊತ್ತ ೩೦೪೧ ರೂಪಾಯಿ ೩೭ ಪೈಸೆಗಳಾಗಿದ್ದವು. ಅಲ್ಲದೆ ಸಿಡಿಮದ್ದುಗಳನ್ನು ಕೂಡ ಮೇಲಿನ ಸಮಾರಂಭಗಳಲ್ಲಿ ಸಿಡಿಸಲಾಗುತ್ತಿತ್ತು. ಸಿಡಿಮದ್ದುಗಳನ್ನು ವಾದ್ಯಮೇಳಗಳೊಂದಿಗೆ ಮೆರವಣಿಗೆಯ ಮುಖಾಂತರ ಹೊರಟ ಮೆರವಣಿಗೆಯಲ್ಲಿ ಸಿಡಿಸಲಾಗುತ್ತಿತ್ತು. ಸಿಡಿಮದ್ದುಗಳು ಮತ್ತು ಸಮವಸ್ತ್ರಗಳನ್ನು ಸಹ ಮಿಲಿಟರಿ ಇಲಾಖೆಯಿಂದ ಉಚಿತವಾಗಿ ನೀಡಲಾಗುತ್ತಿತ್ತು.

ಕಿಲ್ಲೆಕಛೇರಿಯ ಮಿಲಿಟರಿ ಸ್ಟೋರ್ಸ್‌ನಿಂದ ಒದಗಿಸಲ್ಪಡುತ್ತಿದ್ದ ಸಾಮಾಗ್ರಿಗಳ ಮಾಹಿತಿಯು ಈ ಕೆಳಗಿನಂತಿದೆ.

| ವಿಭಾಗ | ಪಿಡಿಮದ್ದುಗಳ ಸಂಖ್ಯೆ | ಮೊತ್ತ |
| --- | --- | --- |
| ಕಾಲ್ದಳ | ೮೬೪ | ೮೬೪ |
| ಗಜಶಾಲೆ | ೩೦೦ | ೩೦೦ |
| ಉದ್ಯಾನವನ ಮತ್ತು ತೋಟಗಳು | ೯೦೦ | ೯೦೦ |
| ಕಿಲ್ಲೆ ಕಛೇರಿ | ೮೦೮ | ೮೧೬ |
| ಒಟ್ಟು ಮೊತ್ತ | ೨೮೭೨ | ೨೮೮೦ |

ಮಹಾರಾಜರ ಹುಟ್ಟುಹಬ್ಬದ ದಿನದಂದು ಭಾಗವಹಿಸುತ್ತಿದ್ದ ಸೈನಿಕರು ಹಳೆಯ ಮಾದರಿಯ ಮಜ್ಜಲ್ ಲೋಡರ್‌ಗಳ ಬಂದೂಕುಗಳು, ಕಲೆರಹಿತ ಉಕ್ಕಿನ ಖಡ್ಗಗಳನ್ನು ಹಿಡಿದು ಮೊಣಕಾಲನ್ನು ಮುಚ್ಚುವ ಕರಿಬಣ್ಣದ ಬೂಟುಗಳು, ಹಸಿರು ಮತ್ತು ಹಳದಿ ಕೆಂಪು ರುಮಾಲು, ಹಸಿರು ಅಂಗಿ ಇವು ಅವರ ಸಮವಸ್ತ್ರದ ಮಾದರಿಗಳಾಗಿದ್ದವು.[೮೪] ನಾಯಕರುಗಳು ೧೪–೧೫ ರೂಗಳಂತೆ ವೇತನವನ್ನು ಒಂದು ವರ್ಷದ ಸೇವಾವಧಿಯು ಮುಗಿದ ಮೇಲೆ ಮುಂಬಡ್ತಿಗಳಿಂದ ಉನ್ನತ ಅಧಿಕಾರವನ್ನು ಪಡೆಯಲು ಅವಕಾಶವಿರುತ್ತಿತ್ತು. ಹವಾಲ್ದಾರರು ೧೬–೧೮ರೂ ವೇತನವನ್ನು ಪಡೆದು ಮುಂಬಡ್ತಿಯನ್ನು ಹೊಂದಬಹುದಿತ್ತು. ಸೈನ್ಯದಲ್ಲಿ ತಲಾ ಒಬ್ಬೊಬ್ಬ ಕಮಾಂಡೆಂಟ್, ಜಾಮದಾರ್, ತಲಾ ಎರಡು ಜಮದಾರ, ಹವಾಲ್ದಾರ, ೫ ನಾಯಕರು, ಒಂದು ಲ್ಯಾನ್ಸ್‌ನಾಯಕ, ಹದಿನೈದು ಪ್ರಥಮದರ್ಜೆ ಸವಾರರು, ಹದಿಮೂರು ದ್ವಿತೀಯದರ್ಜೆ ಸವಾರರು, ೨೫ ಜನ ತೃತೀಯದರ್ಜೆ ಸವಾರರು ಮೊದಲಾದವರನ್ನು ಹೊಂದಿತ್ತು.[೮೫] ಆ ಸೈನಿಕರಿಗಾಗಿ ಸೈನ್ಯದಲ್ಲಿ ಸಮವಸ್ತ್ರವನ್ನು ಹೊಲಿಸಿಕೊಳ್ಳಲು ಕೆಳಕಂಡ ಬಟ್ಟೆಗಳನ್ನು ನೀಡಲಾಗುತ್ತಿತ್ತು. ತಲಾ ಒಂದರಂತೆ ಮೇಲಂಗಿ, ಪೇಟಾ, ಕುಲಾವಿ, ಕೋಟು, ಪ್ಯಾಂಟು, ಉಕ್ಕಿನ ತೋಳ್ಸರ, ಹುರಿದಾರದ ಪಟ್ಟಿ, ಜಮಖಾನ, ಕಬ್ಬಿಣದಮೊಳೆ, ಅಡ್ಡಪಟ್ಟಿ, ಸೊಂಟಪಟ್ಟಿ, ಖಡ್ಗಪಟ್ಟಿಯ ಕತ್ತಿಗಂಟು(ಸೆರ್ಜಿಪಟ್ಟಿ) ಅಲ್ಲದೆ ತಲಾ ಒಂದೊಂದು ಜೊತೆ ಉದ್ದನೆಯ ಬೂಟುಗಳು, ಕಣಕಾಲಿನವರೆಗಿನ ಬೂಟುಗಳು, ಬಟ್ಟೆಗೆ ದೊಡ್ಡ ಮತ್ತು ಚಿಕ್ಕದಾದ ಗುಂಡಿಗಳು ಮೊದಲಾದವುಗಳನ್ನು ಒದಗಿಸಲಾಗುತ್ತಿತ್ತು. ಒಟ್ಟಾರೆ ಇವುಗಳ ಒಟ್ಟು ಮೊತ್ತ ೭೫ರೂಗಳು ೧೨ಆಣೆಗಳಾಗುತ್ತಿತ್ತು. ಈ ವಸ್ತುಗಳನ್ನು ಸರ್ಕಾರವೇ ಸೈನಿಕರಿಗೆ ಉಚಿತವಾಗಿ ಕೆಲವೊಮ್ಮೆ ಆರ್ಥಿಕ ಸಂಕಷ್ಟದಲ್ಲಿ ಹಣಪಡೆದು ಒದಗಿಸುತ್ತಿತ್ತು.[೮೬] ಸೈನಿಕರಿಗೆ ವಾಹನಚಾಲನಾ ತರಬೇತಿಯನ್ನು ನೀಡಲು ಕ್ರಿ.ಶ.೧೯೧೯ರ ಮೇನಲ್ಲಿ ಅನುಮೋದನೆಯನ್ನು ಪಡೆಯಲಾಯಿತು. ಈ ತರಬೇತಿಯನ್ನು ಪಡೆಯಲು ೬ಜನ ಸವಾರರು ಆಯ್ಕೆಯಾದರು. ಅವರಲ್ಲಿ ೪ ಹಿಂದೂ ಸೈನಿಕರು, ೨ ಮುಸ್ಲಿಂ ಸೈನಿಕರಿದ್ದರು. ಅರಸರ ಅಂಗರಕ್ಷಣಾ ಪಡೆಗೆ ಈ ಸವಾರರು ಸೇರಿದ್ದರು.[೮೭]

ಭಕ್ಷಿಯು ಕಿಲ್ಲೆಕಛೇರಿಯ ಮುಖ್ಯಸ್ಥನಾಗಿದ್ದನು. ಈತನಿಗೆ ಸಹಾಯಕ ಅಧಿಕಾರಿಗಳಾಗಿ ಕಛೇರಿಯಲ್ಲಿ ಶಿರಸ್ತೇದಾರ್, ಕಾರಕೂನರು ತಲಾ ಒಬ್ಬೊಬ್ಬರು, ತಲಾ ಇಬ್ಬರು ಗುಮಾಸ್ತರು,

ದಾರವನ್ನು ಹಾಕಲಾಗಿತ್ತು. ಚರ್ಮದ ಕಪ್ಪುಬಣ್ಣದ ಬೂಟುಗಳು ಮೊಣಕಾಲಿನವರೆಗಿದ್ದು ಕೈಗಳಿಗೆ ಬಿಳಿಯಬಣ್ಣದ ಕೈಗವಸ್ತುಗಳನ್ನು ಬಳಸಲಾಗುತ್ತಿತ್ತು.[೧೦]

**೩.೬.೨. ಜಿಲ್ಲಾ ಕಛೇರಿ**

ಜಿಲ್ಲಾ ಕಛೇರಿಯು ಮೈಸೂರಿನ ಸೈನ್ಯದಲ್ಲಿನ ಅಧಿಕಾರವನ್ನು ನಿರ್ವಹಿಸುವ ಮತ್ತೊಂದು ಪ್ರಮುಖ ಇಲಾಖೆಯಾಗಿತ್ತು. ಈ ಜಿಲ್ಲಾ ಕಛೇರಿಯ ಅಧೀನದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದ ಸೈನಿಕರು ಕಿಲ್ಲೆ ಕಛೇರಿಯ ಮಾದರಿಯಲ್ಲಿಯೇ ಕರ್ತವ್ಯವನ್ನು ನಿರ್ವಹಿಸುತ್ತಿದ್ದರು. ಇಲ್ಲಿ ಸೈನಿಕರ ಕರ್ತವ್ಯಗಳು ಮತ್ತು ಸೇವೆಯನ್ನು ಕುರಿತು ಕಾನೂನುಗಳನ್ನು ರೂಪಿಸಲಾಗುತ್ತಿತ್ತು. ಈ ಕಾನೂನುಗಳನ್ನು ಸೈನ್ಯಕ್ಕೆ ಸೇರಿದ್ದ ಸೈನಿಕರು ತಪ್ಪದೆ ಪಾಲಿಸಬೇಕಿತ್ತು. ಅವುಗಳು ಕೆಳಗಿನಂತಿವೆ ಸೈನಿಕರು ರಜಾಹಾಕದೆ ತಪ್ಪಿಸಿಕೊಂಡರೆ ದಿನಕ್ಕೆ ೪ ಆಣೆಗಳನ್ನು ಕಡಿತಗೊಳಿಸಲಾಗುತ್ತಿತ್ತು. ಅಲ್ಲದೆ ಒಂದು ತಿಂಗಳಿನಲ್ಲಿ ಈ ಗೈರುಹಾಜರಾತಿಗಳು ಹೆಚ್ಚಾಗಿದ್ದರೆ ಮುಂದಿನ ೬ ತಿಂಗಳುಗಳ ಕಾಲ ಎಲ್ಲಾ ರಜಾದಿನಗಳು ಮತ್ತೆ ಸೇವಾಸೌಲಭ್ಯಗಳನ್ನು ಕಡಿತಗೊಳಿಸಲಾಗುತ್ತಿತ್ತು. ಅದರ ಜೊತೆಗೆ ಹೆಚ್ಚುವರಿಯಾಗಿ ಅವರಿಗೆ ದೊರೆಯುತ್ತಿದ್ದ ಸೌಲಭ್ಯಗಳನ್ನು ನಿಲ್ಲಿಸುವುದು. ಸೈನಿಕರು ಉದಾಸೀನ ಮನೋಭಾವವನ್ನು ಹೊಂದಿದ್ದರೆ ಮತ್ತು ಕುದುರೆಗಳಿಗೆ ಮತ್ತು ಅವುಗಳ ಮರಿಗಳಿಗೆ ಹೊಡೆಯುವುದು, ಪ್ರವೇಶದ್ವಾರದಲ್ಲಿ ಪ್ರಜ್ಞೆಯಿಲ್ಲದಂತೆ ನಿಲ್ಲುವುದು ಕೂಡ ದಂಡಾರ್ಹವಾದವುಗಳು. ಕಮಾಂಡಿಂಗ್ ಅಧಿಕಾರಿಯು ದೂರನ್ನು ಸ್ವೀಕರಿಸಿದ ಕೂಡಲೇ ಪರಿಸ್ಥಿತಿಗೆ ಅನುಗುಣವಾಗಿ ಕಾವಲಿಗಾಗಿ ಅಧಿಕಾರಿಗಳನ್ನು ನೇಮಿಸಿ ವಿಚಾರಣೆಗೆ ಹಾಜರುಪಡಿಸಲಾಗುತ್ತಿತ್ತು. ಸರ್ಕಾರವು ಕಾನೂನುಗಳ ರಕ್ಷಣೆಗಾಗಿ ಬಂಧನಕ್ಕೊಳಗಾದ ವ್ಯಕ್ತಿಯನ್ನು ಕಮಾಂಡಿಂಗ್ ಅಧಿಕಾರಿಯು ಬಿಡುಗಡೆಗೊಳಿಸುವ ಅಧಿಕಾರ ಸರ್ಕಾರಕ್ಕಾಗಲಿ ಅಥವಾ ಕಮಾಂಡಿಂಗ್ ಅಧಿಕಾರಿಗೂ ಇರಲಿಲ್ಲ.[೧೧] ಅಲ್ಲದೆ ಕಮಾಂಡಿಂಗ್ ಅಧಿಕಾರಿಗೆ ಲ್ಯಾನ್ಸ್(ಭಲ್ಲೆಗಳನ್ನು ಹೊಂದಿದ್ದ ಅಶ್ವಾರೋಹಿಪಡೆ) ಪಡೆಯದ ದಫೇದಾರರಿಗೆ ಇವುಗಳನ್ನು ನೋಡಿಕೊಳ್ಳುವ ಅಧಿಕಾರವನ್ನು ನೀಡಲಾಗಿತ್ತು. ಉನ್ನತ ಹಂತದ ಅಧಿಕಾರಿಗಳಿಗೆ ಕೇವಲ ಚಿಕ್ಕಪ್ರಮಾಣದ ಶಿಕ್ಷೆಗಳನ್ನು ನೀಡಲಾಗುತ್ತಿತ್ತು. ಅದರಲ್ಲಿ ಪ್ರಮುಖವಾಗಿ ವಾಗ್ದಂಡನೆ, ವೇತನ ಕಡಿತ ಅಷ್ಟೇ ಅಲ್ಲದೆ ಮುಂಬಡ್ತಿಗಳನ್ನು ತಡೆಯಿಡಿಯುವುದು. ಮುಂತಾದ ಶಿಕ್ಷೆಗಳಿಗೆ ಒಳಗಾಗುತ್ತಿದ್ದರು. ಒಂದು ವೇಳೆ ಶಿಕ್ಷೆಗೆ ಗುರಿಪಡಿಸದಿದ್ದರೆ ಶಿಕ್ಷಾರ್ಹ ಅಪರಾಧಗಳನ್ನು ಎಸಗಿದ್ದರೆ ಆ ಸೈನಿಕರನ್ನು ಕಮಾಂಡಿಂಗ್ ಅಧಿಕಾರಿಯ ಮುಂದೆ ಹಾಜರುಪಡಿಸಲಾಗುತ್ತಿತ್ತು. ಕಮಾಂಡಿಂಗ್ ಅಧಿಕಾರಿಯು ಇಚ್ಚಿಸಿದರೆ ಮಾತ್ರ ಶಿಕ್ಷೆಯನ್ನು ಸರ್ಕಾರದ ಹಸ್ತಕ್ಷೇಪವಿಲ್ಲದೆ ಕಡಿತಗೊಳಿಸಬಹುದಿತ್ತು. ಈ ವಿಚಾರಣೆಯ ವೇಳೆಯಲ್ಲಿ ಮುಖ್ಯಕಮಾಂಡರ್, ವಿಭಾಗೀಯ ಕಮಾಂಡರ್, ಟ್ರೂಪ್ ಕಮಾಂಡರ್, ಟ್ರೂಪ್ ದಫೇದಾರ ಮತ್ತು ಸೆಲೆಕ್ಷನ್ ಕಮಾಂಡರ್, ವಿಭಾಗೀಯ ದಫೇದಾರ್‌ಗಳಲ್ಲಿ ಯಾರಾದರೂ ಒಬ್ಬರು ಹಾಜರಿರಲೇಬೇಕಿತ್ತು. ಇವರ ತಪ್ಪುಗಳಿಗೆ ದಾಖಲು ಪುಸ್ತಕಗಳಿದ್ದು, ಪ್ರತಿಯೊಂದು ಕೃತ್ಯಗಳೂ ಸಹ ದಾಖಲಾಗುತ್ತಿದ್ದವು. ಜೊತೆಗೆ ಮೂರು ದಿನಗಳವರೆಗೆ ಅಪರಾಧಿಗಳನ್ನು ಕೆಲಸದಿಂದ ವಜಾಗೊಳಿಸಿ ಹದಿನೈದು ದಿನಗಳವರೆಗೆ ವೇತನವನ್ನು

ದಿನದ ಆಧಾರದ ಮೇಲೆ ಕಡಿತಗೊಳಿಸಲಾಗುತ್ತಿತ್ತು. ದಂಡವು ಮಾಸಿಕವೇತನದ ಅರ್ಧದಷ್ಟಿತ್ತು. ಅದಕ್ಕಿಂತಲೂ ಹೆಚ್ಚಿನ ವೇತನವನ್ನು ದಂಡವನ್ನಾಗಿ ವಸೂಲಿ ಮಾಡುತ್ತಿರಲಿಲ್ಲ. ಜೊತೆಗೆ ೧೦ ದಿನಗಳ ಕಾಲ ಬಂಧನದಿಂದ ಹೊರ ತಾಲೀಮುಗಳನ್ನು ನಡೆಸಬೇಕಿತ್ತು. ಅರ್ಧಗಂಟೆಗೂ ಮೀರದಂತೆ ಅಲುಗಾಡದೆ ನಿಲ್ಲಬೇಕಿತ್ತು. ಅಲ್ಲದೆ ಹೆಚ್ಚುಕಾಲ ಪರಿವೀಕ್ಷಣೆಗಾಗಿ ಸಮವಸ್ತ್ರಗಳನ್ನು ಕವಾಯತಿಗೆ ತಡಿಗಳನ್ನು ತರಬೇಕಿತ್ತು. ಒಂದುಗಂಟೆಗೂ ಹೆಚ್ಚಿನ ಅವಧಿಯನ್ನು ಮೂರು ದಿನಗಳ ಕಾಲ ಮೀರದಂತೆ ಕವಾಯತುಗಳನ್ನು ನಡೆಸಬೇಕಿತ್ತು.

ಸೈನ್ಯಪಡೆಯ ಅಧಿಕಾರಿಗಳು ಹೊಂದಿದ್ದ ಅಧಿಕಾರವು ರಿಸಲ್ದಾರರು ಮತ್ತು ಜಮಾದಾರರು ಸೈನ್ಯದ ಕವಾಯತಿಗೆ ಸೂಚನೆ ನೀಡುವುದಾಗಿತ್ತು. ಅದರ ಪ್ರಕಾರವಾಗಿ ಏಳುದಿನಗಳ ಕಾಲ ಬಂಧನದಿಂದ ಹೊರಗೆ ಬಿಡುತ್ತಿರಲಿಲ್ಲ. ಕಮಾಂಡಿಂಗ್ ಅಧಿಕಾರಿಯು ಅಪೇಕ್ಷಣೀಯವೆನಿಸಿದ ಮತ್ತು ಅವಶ್ಯಕವಾದಾಗ ಮತ್ತು ಸಂಬಂಧಿಸಿದ ಅಧಿಕಾರಿಗೆ ಪ್ರತ್ಯೇಕವಾದ ವಿಧಿಸುವ ಮೂಲಕ ಮತ್ತು ಸಣ್ಣ ಪ್ರಮಾಣದ ಶಿಕ್ಷೆಗಳನ್ನು ನೀಡುವ ಮೂಲಕ ಅವರಿಗೆ ಶಿಕ್ಷಾರ್ಹವಾದ ದಂಡನೆಗಳನ್ನು ವಿಧಿಸುತ್ತಿದ್ದರು. ಈ ಎಲ್ಲಾ ರೀತಿಯ ತೀರ್ಮಾನಗಳು ಸಹ ಸೇನಾ ತುಕಡಿಯ ಕಮಾಂಡರ್‌ಗಳು ಅಥವಾ ವಿಭಾಗೀಯ ಕಮಾಂಡರ್‌ಗಳು ಬರವಣಿಗೆಯ ಮೂಲಕವೇ ನೀಡಬೇಕಿತ್ತು. ಸಾಮಾನ್ಯ ಕರ್ತವ್ಯಗಳು ದಾಖಲೆ ಪುಸ್ತಕದಲ್ಲಿ ದಾಖಲಿಸಿದ ನಂತರ ಕಮಾಂಡಿಂಗ್ ಅಧಿಕಾರಿಗೆ ಸಲ್ಲಿಸಲ್ಪಡುತ್ತಿದ್ದವು. Power of Commanding ಇವರು ಮುಖ್ಯ ಕಮಿಷನರಿಂದ ನೇಮಕಗೊಳ್ಳುತ್ತಿದ್ದರು. ಹಾಗೂ ನಿಯೋಜಿತವಲ್ಲದ ಅಧಿಕಾರಿಗಳಾಗಿದ್ದು, ವಾಗ್ದಂಡನೆ ಅಧಿಕಾರದಿಂದ ಬಿಡುಗಡೆ ಹಿಂಬಡ್ತಿ ೨೮ ದಿನ ಕಾರಾಗೃಹವಾಸ ಅಥವಾ ಕಠಿಣ ಶಿಕ್ಷೆಯಲ್ಲಿದ್ದ ಆದರೆ ನಿಯೋಜಿತವಲ್ಲದ ಅಧಿಕಾರಿಗೆ ಕಾರಾಗೃಹ ವಾಸವನ್ನು ವಿಧಿಸುವ ಮೊದಲು ಆತನಿಗೆ ಹಿಂಬಡ್ತಿಯನ್ನು ನೀಡಿ ಶಿಕ್ಷೆಗೆ ಒಳಪಡಿಸಲಾಗುತ್ತಿತ್ತು. ಸವಾರರು ಚಾಲಕರು ಮತ್ತು ಉಳಿದ ಸಿಪಾಯಿಗಳಿಗೆ ಅದೇ ರೀತಿಯ ಶಿಕ್ಷೆಯ ಜೊತೆಗೆ ಐದು ವರ್ಷಗಳ ಸೇವಾವಧಿಯನ್ನು ಕಳೆದುಕೊಳ್ಳುತ್ತಿದ್ದರು. ಆದರೆ ಮುಖ್ಯಾಧಿಕಾರಿಯು ವಾಗ್ದಂಡನೆಗೆ ಒಳಪಡದೇ ಮುಖ್ಯ ಕಮೀಷನರಿಂದ ಶಿಕ್ಷಿಸಲ್ಪಡುತ್ತಿದ್ದನು. ಒಂದು ವೇಳೆ ಈ ಶಿಕ್ಷೆಗಳು ಅಪರಾಧಕ್ಕಾಗಿ ಅಧಿಕಾರಿಗಳು ಅಥವಾ ಸೈನಿಕರಿಗೆ ನೀಡಿದ್ದು ಸಮರ್ಥನೀಯವಲ್ಲದಿದ್ದರೆ ಸರ್ಕಾರಕ್ಕೆ ವರದಿಯನ್ನು ಒಪ್ಪಿಸಲೇಬೇಕಿತ್ತು. ಅಲ್ಲದೆ ಅಧಿಕಾರಿಯನ್ನು ಆರೋಪಿ ಎಂದು ತೀರ್ಮಾನಿಸುವ ಅಧಿಕಾರವು ಕೇವಲ ಮುಖ್ಯ ಕಮಾಂಡೆಂಟ್‌ಗೆ ಮಾತ್ರ ಇರುತ್ತಿತ್ತು. ಅಲ್ಲದೆ ತೃಪ್ತಿಕರವಾದಂತಹ ಕಡಿಮೆ ಪ್ರಮಾಣದ ಶಿಕ್ಷೆಯನ್ನು ಕೂಡ ಪ್ರಕಟಿಸಲಾಗುತ್ತಿತ್ತು. ತಪ್ಪು ಮಾಡಿದರೆ ಅಥವಾ ಅದಕ್ಷತೆಯಿಂದ ಅಧಿಕಾರವನ್ನು ದುರುಪಯೋಗ ಪಡಿಸಿಕೊಳ್ಳುವ ಆಸೆಯನ್ನು ಹೊಂದಿದ್ದಾರೆ. ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವ ಸಲುವಾಗಿ ಹಾಜರಿರಬೇಕಿತ್ತು. ಮುಖ್ಯ ಕಮಾಂಡೆಂಟನು ಉದ್ಯೋಗದಿಂದ ಯಾವುದೇ ವ್ಯಕ್ತಿಯನ್ನು ನೌಕರಿಯಿಂದ ತೆಗೆದು ಹಾಕುವ ಅಥವಾ ವಜಾಮಾಡುವ ಅಧಿಕಾರವು ಅವನ ಹಿಂದಿನ ಸೇವಾವಧಿಯಲ್ಲಿ ಸೇರಿಸಲ್ಪಟ್ಟಿದ್ದರಿಂದ ಬ್ರಿಟಿಷರ ಇಂಪೀರಿಯಲ್ ಸರ್ವೀಸ್ ಕಂಪನಿಗೆ ಸೇರಿತ್ತು.[೨]

ವಿಚಾರಣಾ ಅಧಿಕಾರ : ಒಬ್ಬ ಅಧಿಕಾರಿಯ ಅಥವಾ ನಿಯೋಜಿತವಲ್ಲದ ಅಧಿಕಾರಿಯ ವಿರುದ್ಧವಾಗಿ ಒಂದು ಆಪಾಧನೆಯು ಬಂದರೆ ಅಥವಾ ಗಂಭೀರ ಸ್ವರೂಪದ್ದಾದ ಅಥವಾ ಗಂಭೀರವಾದ ಕೃತ್ಯದಲ್ಲಿ ಪಾಲ್ಗೊಂಡರೆ ಉದಾಹರಣೆ ಕೊಲೆ, ದರೋಡೆ, ಕಳ್ಳತನಗಳು ಕೂಡಲೇ ಮುಖ್ಯ ಕಮಾಂಡೆಂಟನಿಗೆ ವರದಿ ಮಾಡಬೇಕಿದ್ದಿತು. ಯಾವುದೇ ಮೊಕದ್ದಮೆಯನ್ನು ೪೮ಗಂಟೆಗಳ ಒಳಗೆ ತೀರ್ಪಿಗೆ ಅವಕಾಶವನ್ನು ಕಲ್ಪಿಸುವಂತೆ ಮಾಡುವ ಹಾಗೂ ಸ್ವತಃ ತಾವೇ ವಿಚಾರಣೆ ಮಾಡುವ ಅಧಿಕಾರವು ಮುಖ್ಯ ಕಮಾಂಡೆಂಟಿಗೆ ಸೇರಿದ್ದಿತು. ಈ ಮೊಕದ್ದಮೆಯಲ್ಲಿ ಶಿಕ್ಷೆಯನ್ನು ಪ್ರಕಟಿಸುವ ಅಥವಾ ಮೊಕದ್ದಮೆಯನ್ನು ವರ್ಗಾವಣೆ ಮಾಡುವ ವಿಸರ್ಜಿಸುವ ಅಧಿಕಾರಿಯಾಗಿ ನೇಮಕವಾಗುತ್ತಿದ್ದ ವಿಶೇಷ ಅಧಿಕಾರವಿದ್ದಿತು. ನಾಲ್ಕು ಗಂಟೆಗಳಿಗಿಂತ ಹೆಚ್ಚಿಲ್ಲದಂತೆ ಅಂದರೆ ಭಾನುವಾರ ಮತ್ತು ವಾರಾಂತ್ಯದ ರಜಾಧಿನಗಳನ್ನು ಹೊರತುಪಡಿಸಿ ಮೊಕದ್ದಮೆಯ ಸ್ವೀಕೃತಿಗೆ ಸಂಬಂಧಿಸಿದಂತೆ ಮಧ್ಯ ರಜೆ ಹಾಗೂ ಕಾಲಕಳೆಯದಂತೆ ಚೀಫ್ ಕಮಾಂಡೆಂಟ್ ಎಚ್ಚರವಹಿಸುವುದು. ಮೊಕದ್ದಮೆಯ ಸಂಪೂರ್ಣ ಜವಾಬ್ದಾರಿಯನ್ನು ಮುಖ್ಯ ಕಮಾಂಡೆಂಟ್ ಅಧಿಕಾರಿಯು ವಹಿಸಿಕೊಂಡು ವಿಚಾರಣೆಗೆ ಒಳಪಡಿಸುವುದು. ಈ ಮೇಲಿನ ಎಲ್ಲಾ ಶಿಕ್ಷೆಗಳು ಮುಖ್ಯ ಕಮಾಂಡೆಂಟ್‌ನಿಂದ ಪ್ರಕಟಗೊಳ್ಳುತ್ತಿದ್ದು ಸಾಮಾನ್ಯ ಕರ್ತವ್ಯ ಲೋಪವು ದಾಖಲೆಗಳ ಪುಸ್ತಕದಲ್ಲಿ ನೋಂದಣಿಯಾಗುತ್ತಿತ್ತು.[೩]

ಅರಮನೆಗೆ ಅವಶ್ಯವಾಗಿದ್ದ ಚಿರತೆಯ ಚರ್ಮವನ್ನು ಆಮದು ಮಾಡಿಕೊಳ್ಳಲು ಕಡೂರು, ಮೈಸೂರು, ಬೆಂಗಳೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಆದೇಶವನ್ನು ಹೊರಡಿಸಲಾಯಿತು. ಕ್ರಮವಾಗಿ ಕಡೂರು ಜಿಲ್ಲೆಯಲ್ಲಿ ೩, ಮೈಸೂರು ೪, ಬೆಂಗಳೂರು ೩, ಚಿತ್ರದುರ್ಗ ಜಿಲ್ಲೆಯಲ್ಲಿ ೪ರಂತೆ ಚಿರತೆಗಳನ್ನು ಬೇಟೆಯಾಡಿ ಕೊಲ್ಲಲಾಗಿತ್ತು. ಅವುಗಳ ಚರ್ಮವನ್ನು ಅರಮನೆಯಲ್ಲಿ ಟ್ರೋಪಿಗಳನ್ನಾಗಿ ಮಾಡಲು ಅರಮನೆಗೆ ಸಾಗಿಸುವಂತೆ ಆದೇಶವನ್ನು ಹೊರಡಿಸಲಾಯಿತು. ಇವುಗಳನ್ನು ಅರಮನೆಯ ಅಂಗರಕ್ಷಕ ಪಡೆಯ ಮುಖಾಂತರ ಅರಮನೆಗೆ ತಲುಪಿಸಲಾಯಿತು.[೪] ಕ್ರಿ.ಶ.೧೯೧೪ರ ಜೂನ್ ೨೮ರಂದು ಅರಮನೆಯ ಬಾಡಿಗಾರ್ಡ್ ಇಲಾಖಾ ಕಮಾಂಡರಿಗೆ ಆದೇಶವನ್ನು ಶಿಫಾರಸು ಮಾಡಲಾಯಿತು. ಈ ಶಿಪಾರಸಿನ ಪ್ರಕಾರ ಹತ್ತುಜನ ಸೈನಿಕರಲ್ಲಿ ಮೂರುಜನ ಹವಾಲ್ದಾರರು ಒಬ್ಬ ನಾಯಕ ಮತ್ತು ಉಳಿದ ಆರುಜನ ಸವಾರರು ಬೆಂಗಳೂರಿಗೆ ಸಿನ್ನಲಿಂಗ್ ಕಲಿಯಲು ಹೋಗಿ ಪೂರ್ಣಗೊಂಡ ನಂತರ ಮೈಸೂರಿಗೆ ವಾಪಸ್ಸಾಗಿದ್ದರು. ಎಲ್ಲರಿಗೂ ಇದಕ್ಕೆ ತಗುಲಿದ ಖರ್ಚುವೆಚ್ಚ, ರೈಲ್ವೆಟಿಕೆಟ್‌ಗಳು ಸೇರಿ ಜಮಾ ಆದ ಒಟ್ಟುಮೊತ್ತ ೨೮ರೂಗಳು.[೫] ಇದು ಸೈನಿಕರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಪ್ರಯಾಣ ಮಾಡುವ ಸಂದರ್ಭದಲ್ಲಿ ಅವರಿಗೆ ನೀಡಲಾಗುತ್ತಿದ್ದ ಹಣವು ಅವರ ವೇತನದೊಂದಿಗೆ ಸೇರಿಸಲಾಗುತ್ತಿತ್ತು.

ಕ್ರಿ.ಶ. ೧೯೧೩ರ ಅರಮನೆಯ ಮಿಲಿಟರಿ ಬಜೆಟನ್ನು ಕ್ರಿ.ಶ. ೧೯೧೩-೧೪ ಮತ್ತು ಕ್ರಿ.ಶ. ೧೯೨೦-೨೧ರಲ್ಲಿನ ಮೊತ್ತಕ್ಕೆ ಏರಿಸಲಾಯಿತು. ಅದರ ಪ್ರಕಾರವಾಗಿ ಕ್ರಿ.ಶ. ೧೯೧೩-೧೪ರಲ್ಲಿ

ಮಿಲಿಟರಿಗೆ ಎತ್ತಿಟ್ಟಿದ್ದ ಒಟ್ಟು ಮೊತ್ತ ೮೮,೮೮೦ ರೂಗಳಾದರೆ ಸಾರಿಗೆಗಾಗಿ ೧೧,೦೧೮ರೂಗಳನ್ನು ಮತ್ತು ಸೈನಿಕರ ಆಯುಧಗಳು ಮತ್ತಿತರ ಕಿಟ್‌ಗಳನ್ನು ಪ್ರತಿಯೊಬ್ಬರಿಗೆ ಒಂದಂದರಂತೆ ಒದಗಿಸಲಾಗುತ್ತಿತ್ತು. ಇವುಗಳ ಒಟ್ಟು ಮೊತ್ತ ೧೫,೩೦೮ರೂ.ಗಳು, ಸಾದಿಲ್ವಾರು ೩,೨೭೧ರೂ.ಗಳು ನಿವೃತ್ತಿ ವೇತನ ೫೧೩೨, ಆಸ್ಪತ್ರೆ ಖರ್ಚು ೫೨೨೪ ಒಟ್ಟಾರೆ ೧,೨೮,೮೩೭ರೂ.ಗಳು ಆದರೆ ಇದೇ ಖರ್ಚನ್ನು ಕ್ರಿ.ಶ. ೧೯೨೦-೨೧ರ ಬಜೆಟ್‌ನಲ್ಲಿ ೨೦,೪೮೨೧ರೂಗಳಿಗೆ ಏರಿಸಲಾಯಿತು. ಏಕೆಂದರೆ ಈ ಸಂದರ್ಭಧಲ್ಲಿ ಪ್ರಥಮ ಮಹಾಯುದ್ಧದ ತರುವಾಯ ಜೀವನ ನಿರ್ವಹಣಾ ವೆಚ್ಚ ಹೆಚ್ಚಾಗಿದ್ದೇ ಪ್ರಮುಖ ಕಾರಣವಾಗಿದ್ದಿತು. ಈ ಬಜೆಟ್‌ನಲ್ಲಿ ಅರಮನೆ ಸೈನ್ಯವು ಕಿಲ್ಲೆಕಛೇರಿ ಅರಮನೆ ಬ್ಯಾಂಡ್, ಅಂಗರಕ್ಷಕ ಪಡೆಯ ವಿಭಾಗಗಳು ಸೇರಿದ್ದು ಅವುಗಳ ಮೇಲೆ ಖರ್ಚುಮಾಡುತ್ತಿದ್ದ ಹಣವನ್ನು ಕ್ರಿ.ಶ. ೧೯೧೩ ಮತ್ತು ೨೧ರ ಸಂದರ್ಭಕ್ಕೆ ಅನುಸಾರವಾಗಿ ವಿಧಿಸಲಾಗುತ್ತಿತ್ತು.[೯೬]

ಕಿಲ್ಲೆ ಕಛೇರಿಗಾಗಿ ಕ್ರಿ.ಶ. ೧೯೧೩-೧೪ರ ಬಜೆಟ್‌ನಲ್ಲಿ ೪,೯೩೧ರೂ.ಗಳನ್ನು ಖರ್ಚು ಮಾಡುತ್ತಿದ್ದರೆ. ಕ್ರಿ.ಶ. ೧೯೨೦-೨೧ಕ್ಕೆ ಈ ಮೊತ್ತವನ್ನು ೬೪೧೮ರೂ.ಗಳಿಗೆ ಏರಿಸಲಾಯಿತು. ಅಂಗರಕ್ಷಕ ಪಡೆಯಲ್ಲಿ ೧೫೧೩ ರಿಂದ ೩೯೬೫ರೂ.ಗಳು, ಅರಮನೆ ಬ್ಯಾಂಡ್‌ನವರಿಗೆ ೧೬೫೨ರಿಂದ ೨೩೨೪ರೂ.ಗಳಿಗೆ ಏರಿಸಲಾಯಿತು.[೯೭] ಕಿಲ್ಲೆ ಕಛೇರಿಯ ಕೊನೆಯ ಹಂತದ ಸಿಪಾಯಿಗೆ ಪ್ರತಿ ತಿಂಗಳು ೬ರೂಗಳ ಮಾಸಿಕ ವೇತನವನ್ನು ನೀಡಲಾಗುತ್ತಿತ್ತು. ಆದರೆ ಆದೇಶವನ್ನು ಹೊರಡಿಸಿ ಈ  ಮೊತ್ತವನ್ನು ೮ರೂ.ಗಳಿಗೆ ಏರಿಸಲಾಯಿತು. ಅದಕ್ಕೆ ಮೂರು ರೂಪಾಯಿಗಳ ಖರ್ಚಿನ ಮೊತ್ತವನ್ನು ಸೇರಿಸಲಾಯಿತು. ಕ್ರಿ.ಶ. ೧೯೧೩ರಲ್ಲಿ ಬಾಡಿಗಾರ್ಡ್ ಸವಾರರಿಗೆ ಮಾಸಿಕ ವೇತನ ೯ರೂ.ಗಳಿದ್ದರೆ ಕ್ರಿ.ಶ. ೧೯೨೦ರಲ್ಲಿ ಅದನ್ನು ಹದಿನೈದು ರೂ.ಗಳಿಗೆ ಏರಿಸಲಾಯಿತು. ಅಲ್ಲದೆ ಹಿಂದಿನಿಂದಲೂ ಸೈನ್ಯದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದ ಸೇವಕರಿಗೆ ವೇತನವನ್ನು ಹೆಚ್ಚು ಮಾಡುವುದರ ಜೊತೆಗೆ ಮುಂಬಡ್ತಿಗಳನ್ನು ಅವರ ಸೇವಾದಕ್ಷತೆಯ ಮೇಲೆ ನೀಡುವಂತೆ ಕ್ರಮ ಕೈಗೊಳ್ಳಲಾಯಿತು.[೯೮] ಕಾಲಾಳು ಪಡೆಯ ಬ್ಯಾಂಡ್‌ನ ಸೈನಿಕರ ವೇತನವನ್ನು ವಾರ್ಷಿಕವಾಗಿ ೬,೦೦೦ರೂ.ಗಳಿಗೆ ಏರಿಸಲಾಯಿತು.[೯೮] ಅರಮನೆಯ ಲಾಯಗಳು ಪ್ರಮುಖವಾಗಿ ಕುದುರೆಲಾಯಗಳಿಗೆ ಸಂಬಂಧಿಸಿದಂತೆ ಕಿಲ್ಲೆಕಛೇರಿಯಿಂದ ಕುದುರೆಗಳನ್ನು ಸಾಕಲು ಅವಶ್ಯವಾದ ಲಾಯಗಳ ನಿರ್ಮಾಣ ಮತ್ತು ಕುದುರೆಗಳ ಕ್ರಯಕ್ಕಾಗಿ ತಿಂಗಳಿಗೆ ೨,೦೦೦ರೂ.ಗಳಂತೆ ವಾರ್ಷಿಕವಾಗಿ ೨೪,೦೦೦ರೂ.ಗಳಂತೆ ನೀಡುವಂತೆ ಕ್ರಮಕೈಗೊಳ್ಳಲಾಯಿತು.[೯೯]

ಜಿಲ್ಲಾಕಛೇರಿ ಎಂಬ ಇಲಾಖೆಯು ಮಿಲಿಟರಿ ಕಾಯ್ದೆಯಡಿ ಬರುವಂತಹ ಒಂದು ಕಾಯ್ದೆಯೇ ಜಿಲ್ಲೊಲ್ಲಕ. ಇದು ಸೈನ್ಯದ ಖರ್ಚುವೆಚ್ಚಗಳ ಮೇಲೆ ನಿಯಂತ್ರಣವಿಡುವ ಒಂದು ಪ್ರಮುಖ ಕಾಯ್ದೆಯಾಗಿ ಬಳಕೆಯಾಯಿತು. ವಾರ್ಷಿಕವಾಗಿ ೬೫,೦೦೦ರೂ.ಗಳನ್ನು ಖರ್ಚುಮಾಡುವ ಅರ್ಧ ಖಾಸಗಿ ಮಿಲಿಟರಿಯ ಪದ್ಧತಿಯಾಗಿದ್ದಿತು. ಇದು ಖರ್ಚುವೆಚ್ಚಗಳಿಗೆ ಸಂಬಂಧಿಸಿದಂತೆ

ಪ್ರತ್ಯೇಕ ಖಾತೆಯನ್ನೇ ನಿರ್ವಹಿಸುವಂತೆ ನೋಡಿಕೊಳ್ಳುತ್ತಿತ್ತು. ಜಿಲ್ಲಾ ಕಛೇರಿಗಾಗಿಯೇ ಪ್ರತ್ಯೇಕವಾದ ಹಣವನ್ನು ತೆಗೆದಿಡಲಾಯಿತು. ಅದರ ಒಟ್ಟು ಮೊತ್ತವು ೩ ಮುಕ್ಕಾಲು ಲಕ್ಷ ರೂ.ಗಳು, ಅದರಲ್ಲಿ ಒಂದು ಲಕ್ಷದ ಹದಿನಾಲ್ಕು ಸಾವಿರ ರೂ.ಗಳು ಸರ್ಕಾರಿ ಉದ್ದೇಶಗಳಿಗಾಗಿ ಬಳಕೆ ಮಾಡಲು ಅವಕಾಶವನ್ನು ಕಲ್ಪಿಸಲಾಯಿತು.[೧೦೦]

ಮೈಸೂರು ಸರ್ಕಾರದಲ್ಲಿ ಸೈನ್ಯದಲ್ಲಿ ಸೇವೆಸಲ್ಲಿಸುತ್ತಿದ್ದ ಅಶ್ವದಳದ ಸೈನಿಕರಿಗೆ ವಾರ್ಷಿಕವಾಗಿ ೩೭೮ವರೆಗೆ ಮತ್ತು ಮುನ್ನೂರ ಮುಕ್ಕಾಲು (೧/೩)ರೂ.ಗಳನ್ನು ಬಾರ್ ಇನ್‌ಫ್ಯಾಂಟ್ರಿಗೆ ನೀಡಲಾಗುತ್ತಿತ್ತು. ಬಾಡಿಗಾರ್ಡ್‌ನಲ್ಲಿ ಒಟ್ಟಾರೆ ೧೩೨ ಜನರಿದ್ದು ಅರಸರ ಅಂಗರಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಬಾರ್ ಇನ್‌ಫ್ಯಾಂಟ್ರಿಯ ಜೊತೆಗೆ ಅಂಗರಕ್ಷಕ ಪಡೆಯನ್ನು ಸೇರಿಸಿ ಒಟ್ಟು ವೆಚ್ಚವನ್ನು ನಿಗದಿಪಡಿಸಲಾಗಿತ್ತು. ಅದರಂತೆ ಆ ಒಟ್ಟು ಮೊತ್ತವು ೭೬,೪೯೦ರೂ.ಗಳಷ್ಟಿದ್ದು ಸರ್ಕಾರದ ಬಜೆಟ್‌ನ ಒಂದು ಭಾಗವಾಗಿತ್ತು. ಸರ್ಕಾರದ ಬಾರ್ ಇನ್‌ಪ್ಯಾಂಟ್ರಿಯಲ್ಲಿದ್ದ ೫೭೫ ಜನ ಸೈನಿಕರಿಗೆ ವಾರ್ಷಿಕವಾಗಿ ೧,೭೨,೬೯೨ರೂ.ಗಳನ್ನು ವ್ಯಯಿಸಲಾಗುತ್ತಿತ್ತು. ಕ್ರಿ.ಶ.೧೯೨೦-೨೧ರಲ್ಲಿ ಆ ಮೊತ್ತವನ್ನು ಸುಮಾರು ಎರಡುವರೆ ಲಕ್ಷಗಳಿಗೆ ಏರಿಸಿ ಅದಕ್ಕೆ ಅರಮನೆ ಸೈನ್ಯವನ್ನು ಸೇರಿಸಿ ಬಜೆಟ್ಟನ್ನು ಮಂಡಿಸಲಾಗುತ್ತಿತ್ತು. ಅದರ ಪ್ರಕಾರ ಮೂರುವರ್ಷಗಳ ವರೆಗೆ ಇದರನ್ವಯ ಖರ್ಚುವೆಚ್ಚಗಳು ಮತ್ತು ಅವುಗಳ ಅಂದಾಜುಗಳು ಈ ಪ್ರಕಾರವಾಗಿವೆ. ಕ್ರಿ.ಶ.೧೯೨೧-೨೨ ರಲ್ಲಿ ಅಂಗರಕ್ಷಕರು ಮತ್ತು ಬ್ಯಾಂಡ್ ವಿಭಾಗಗಳನ್ನು ಒಳಗೊಂಡ ಇಲಾಖೆಗಳ ಖರ್ಚು ೨,೩೧೪೦೦ ರೂಪಾಯಿಗಳಾದರೆ, ಕ್ರಿ.ಶ.೧೯೨೩-೨೪ರ ವೇಳೆಗೆ ೨,೯೬೮೦೦ ರೂಗಳಾದವು. ಜಿಲ್ಲ ಕಛೇರಿಯಲ್ಲೂ ಕೂಡ ಕ್ರಿ.ಶ.೧೯೨೧-೨೨ ರಲ್ಲಿ ೬೯,೪೦೦ ರೂಗಳಾದರೆ ಕ್ರಿ.ಶ.೧೯೨೩-೨೪ ರಲ್ಲಿ ೭೪,೫೦೦ ರೂಪಾಯಿಗಳಷ್ಟು ಮೊತ್ತವು ಖರ್ಚಾಗುತ್ತಿತ್ತು. ಜಿಲ್ಲಾ ಕಛೇರಿಯ ಅಧೀನದಲ್ಲಿ ರಾಚವಾರರು, ಭಲ್ಲೆಯವರು ಮತ್ತು ಕರ್ನಾಟಕ ವಾಧ್ಯಗಾರರಿದ್ದರು. ಇವರಿಗೆ ವಾರ್ಷಿಕವಾಗಿ ೨೪,೫೦೦ ರೂಪಾಯಿಗಳನ್ನು ಖರ್ಚು ಮಾಡಲಾಗುತ್ತಿತ್ತು.

ಜಿಲ್ಲಾ ಕಛೇರಿಯ ವತಿಯಿಂದ ಮೈಸೂರು ಸೈನ್ಯಪಡೆಗಾಗಿಯೇ ಮೈಸೂರಿನಲ್ಲಿ ಕೆಲವೊಂದು ಕಟ್ಟಡಗಳನ್ನು ನಿರ್ಮಿಸಲಾಗಿತ್ತು. ಅವುಗಳೆಂದರೆ ನಗರ ಖಾನೆ, ಹೊಸೂರಮ್ಮನ ಛತ್ರದ ಹತ್ತಿರದ ಆಯುಧಗಾರ, ಅಂಗರಕ್ಷಕರ ಗೃಹಗಳು, ಲಾಯಗಳು, ಮಸೀದಿಗಳು, ಅಧಿಕಾರಿಗಳ ವಸತಿಗೃಹಗಳು ಜಮಾದಾರರ ವಸತಿಗೃಹಗಳು, ಬ್ಯಾಂಡ್ ಮಹಲ್‌ಗಳು, ಬ್ಯಾಂಡ್‌ನವರ ವಸತಿಗೃಹಗಳು, ಬ್ಯಾಂಡ್ ಜಮಾದಾರರ ವಸತಿಗೃಗಳು ಮೊದಲಾದವುಗಳನ್ನು ೫,೧೪೮೩೦ ರೂಗಳಲ್ಲಿ ನಿರ್ಮಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅದರ ಪ್ರಕಾರವೇ ಸೈನಿಕ ಅಧಿಕಾರಿಗಳ ವಸತಿಗೃಹಗಳನ್ನು ಕೂಡ ನಿರ್ಮಿಸಲಾಯಿತು. ಕಿಲ್ಲೆಕಚೇರಿಯ ಅಧೀನದಲ್ಲಿನ ಸೈನಿಕ ಶ್ರೇಣಿಯ ಮಾದರಿಯಲ್ಲಿ ಕಾಲಾಗಳು ಪಡೆಯಲ್ಲಿ ಬ್ಯಾಂಡ್‌ನವನು ೧, ಲೆಕ್ಕಾಚಾರ ಬಂದೂಕುದಾರಿಗಳು ೩, ಉಗ್ರಾಣರಕ್ಷಕರು ೧ ಮೊದಲಾದವರನ್ನು ನೇಮಿಸಲಾಗಿತ್ತು. ಜಿಲ್ಲಾ ಕಛೇರಿಯ ಅಧೀನದಲ್ಲೂ ಸಹ ಕೆಲವೊಂದು ಅಧಿಕಾರಿಗಳನ್ನು ಕೂಡ ಅದೇ ಮಾದರಿಯಲ್ಲಿ ನೇಮಿಸಲಾಗುತ್ತಿತ್ತು. ಕಮಿಷನರ್ ಹವಾಲ್ದಾರ,

ನಾಯಕ ಲ್ಯಾನ್ಸ್‌ನಾಯಕ, ಎರಡನೇ ದರ್ಜೆಯ ಲ್ಯಾನ್ಸ್‌ನಾಯಕ ಮೂರನೇದರ್ಜೆಯ ನಾಯಕ ಸಂಗೀತಗಾರರು, ಸಾರ್ಜೆಂಟ್, ನಾಯಕ್ ಅವರು ಮೊದಲಾದವರಿದ್ದರೆ, ಅವರ ನಂತರ ಫಿರಂಗಿ ಪಡೆಯಲ್ಲಿ ಮೇಜರ್, ಜಮಾದಾರ್, ಹವಾಲ್ದಾರ, ನಾಯಕರು, ಲ್ಯಾನ್ಸ್‌ನಾಯಕರಿದ್ದರು. ಜಿಲ್ಲಾ ಕಛೇರಿಯಲ್ಲೂ ಸಹ ಇದೇ ಮಾದರಿಯಲ್ಲಿ ವಿವಿಧ ಶ್ರೇಣಿಕೃತ ವ್ಯವಸ್ಥೆಯಿದ್ದಿತು. ಭಕ್ಷಿ, ಪ್ರಮುಖ ಅಧಿಕಾರಿಯಾದರೆ ಅವನ ಸಹಾಯಕರಾಗಿ ಕಛೇರಿಯಲ್ಲಿ ಲೆಕ್ಕಾಚಾರ ಉಗ್ರಾಣರಕ್ಷಕರಿದ್ದರು. ತದನಂತರ ಆಯುಧಾಗಾರದ ಇಲಾಖೆಯಿದ್ದು ಮೇಲಿನ ಮಾದರಿಯಲ್ಲೇ ಅಧಿಕಾರಿಗಳನ್ನು ಹೊಂದಿದ ರಾಚವಾರ ಎಂಬ ಪ್ರತ್ಯೇಕ ಪಡೆಯಿದ್ದು ಈ ಪಡೆಯು ಮೇಜರ್, ಜಮಾದಾರ, ಹವಾಲ್ದಾರ, ನಾಯಕ ಲ್ಯಾನ್ಸ್‌ನಾಯಕ, ಜವಾನರನ್ನು ಹೊಂದಿದ್ದಿತು.[೧೦೩]

ಜಿಲ್ಲಾ ಕಛೇರಿಯಿಂದ ಸೈನ್ಯದ ಎಲ್ಲಾ ಇಲಾಖೆಗಳಿಗೂ ಕೂಡ ವೇತನವನ್ನು ನೀಡಲಾಗುತ್ತಿತ್ತು. ಇದು ಹಣಕಾಸಿನ ಮೂಲವಾಗಿಯೂ ಕಾರ್ಯನಿರ್ವಹಣೆ ಮಾಡುತ್ತಿತ್ತು. ೧೯೨೧-೨೨ ರಿಂದ ಕ್ರಿ.ಶ. ೧೯೨೫-೨೬ರ ವರೆಗೆ ಅರಮನೆಯ ಬಾರ್‌ಇಲಾಖೆಗೆ ೧ ಲಕ್ಷದಿಂದ, ಒಂದು ಲಕ್ಷದ ೨೨ಸಾವಿರ ರೂಪಾಯಿಗಳನ್ನು, ಅಂಗರಕ್ಷಕರಿಗೆ ಅರವತ್ತೆರಡುಸಾವಿರದಿಂದ ೬೮,೦೦೦ ರೂಗಳು, ಅರಮನೆ ಬ್ಯಾಂಡ್‌ಗೆ ೫೦೦೦೦ ದಿಂದ ೫೭,೦೦೦ ಜಿಲ್ಲಾ ಪಡೆಗಳಿಗೆ ೫೮,೦೦೦ ೭೩,೦೦೦ ರೂಗಳವರೆಗೆ ವಾರ್ಷಿಕವಾಗಿ ವೇತನವನ್ನು ಒದಗಿಸುವ ಕಾರ್ಯವನ್ನು ಮಾಡುತ್ತಿತ್ತು. ರಾಚವಾರರೂ ಸೇರಿದಂತೆ ಮತ್ತೂ ಅವರ ವೇತನ ಮತ್ತು ಖರ್ಚುವೆಚ್ಚಗಳ ಮೊತ್ತವನ್ನೂ ಸೇರಿದಂತೆ ಕ್ರಿ.ಶ. ೧೯೨೫-೨೬ರ ಸಾಲಿನಲ್ಲಿ ಮೂರು ಲಕ್ಷದ ಐವತ್ತೆಂಟು ಸಾವಿರದ ಎರಡುನೂರ ರೂಪಾಯಿಗಳನ್ನು ವೆಚ್ಚ ಮಾಡಲಾಯ್ತು.[೧೦೪]

ಕ್ರಿ.ಶ. ೧೯೨೭-೨೮ರ ವಾರ್ಷಿಗಳಕೆ ಬಜೆಟ್‌ನಲ್ಲಿ ಜಿಲ್ಲಾಕಛೇರಿ, ಬಾಡಿಗಾರ್ಡ್ ಅರಮನೆ ಬ್ಯಾಂಡ್‌ನವರ ಕವಾಯತುಗಳು, ನಿವೃತ್ತವೇತನ ಮೊದಲಾದ ಖರ್ಚಿನ ಬಾಬ್ತುಗಳಿಗೆ ನಾಲ್ಕು ೪,೦೮,೪೬೪ ರೂಗಳನ್ನು ಖರ್ಚುಮಾಡಲಾಗಿತ್ತು. ಪ್ರತಿ ವಿಭಾಗದಲ್ಲೂ ಕಮಾಂಡೆಂಟ್, ತುಕಡಿಬಾರ್ (ಭಕ್ಷಿ), ಸುಬೇದಾರ (ಮಂಜರ್), ರಿಸೆಲ್ದಾರ, ಸುಬೇದಾರರು, ಹೋಬಳಿದಾರರು, ಜಮಾದಾರರು, ಹವಾಲ್ದಾರರು, ಸಾರ್ಜೆಂಟ್, ನಾಯಕರು, ಕಾಲಾಳು ನಾಯಕರು, ಡ್ರಮ್ಮರ್‌ಗಳು ಮತ್ತು ಕೊಳವೆಯವರೆಂಬ ವಾದ್ಯಗಾರರು, ಸಿಪಾಯಿಗಳು ಓಲೆಕಾರರು, ಪಿರಗಿದಳದ ಮುಖ್ಯಸ್ಥ, ನಾಯಕ ಕಾಲಾಳು ನಾಯಕ ಸಿಪಾಯಿಗಳು ಎಂಬ ಈ ರೀತಿಯಾಗಿ ಸೈನ್ಯವನ್ನು ಶ್ರೇಣೀಕೃತವಾಗಿರುವಂತೆ ನೋಡಿಕೊಳ್ಳಲಾಗಿತ್ತು. ಇದರಿಂದ ಕಮಾಂಡೆಂಟ್‌ನ ಸಂಪೂರ್ಣ ಅಧಿಕಾರವೆಲ್ಲವೂ ಸಹ ತನ್ನ ಕೈ ಕೆಳಗಿನ ಸೈನಿಕರನ್ನು ಹಿಡಿದಿಟ್ಟುಕೊಳ್ಳಲು ಹಾಗೂ ಶಾಂತಿ ಮತ್ತು ಯುದ್ಧ ಸಮಯಗಳಲ್ಲಿ ಸೈನ್ಯವನ್ನು ಒಗ್ಗೂಡಿಸಿ ಪ್ರತಿದಿನ ಎರಡುಬಾರಿ ಕವಾಯತು ಮಾಡಿಸಿ ಶಿಸ್ತನ್ನು ಮೂಡಿಸುವುದು ಈ ಮುಖ್ಯಾಧಿಕಾರಿಯ ಪ್ರಮುಖ ಕಾರ್ಯಗಳಾಗಿದ್ದವು.

ಕ್ರಿ.ಶ. ೧೯೩೮ ರಲ್ಲಿ ಜಿಲ್ಲಾ ಕಛೇರಿಯ ನಾಲ್ಕನೇ ಘಟಕದ ನೇಮಕಾತಿಗಾಗಿ ಆಯ್ಕೆಯಾದ ೧೦ ಜನ ಅಭ್ಯರ್ಥಿಗಳಲ್ಲಿ ೮ ಜನರು ಪ್ರಥಮದರ್ಜೆಯಲ್ಲಿ ಪಾಸಾದರೆ ಇಬ್ಬರು ಮಾತ್ರ ದ್ವಿತಿಯ

ದರ್ಜೆಯಲ್ಲಿ ಪಾಸಾದವರು. ಪರೀಕ್ಷೆಗೆ ಹಾಜರಾದ ಅಭ್ಯಾರ್ಥಿಗಳು ಮೇ ೧ ೧೯೩೮ ರಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕಾಯಿತು. ಅಲ್ಲದೆ ಒಬ್ಬ ಅಭ್ಯರ್ಥಿಯನ್ನು ಮಾತ್ರ ಸೇರಿಸಲಾಯಿತು. ಇದರಿಂದ ಅವರ ಸಂಖ್ಯೆ ೧೧ಕ್ಕೆ ಏರಿತು. ಇದರಲ್ಲಿ ಒಬ್ಬ ಹವಾಲ್ದಾರ, ೩ ನಾಯಕರು, ೭ ಜನ ಸವಾರರನ್ನಾಗಿ ನೇಮಿಸಲಾಯಿತು. ಇವರೆಲ್ಲರ ಮಾಸಿಕ ವೇತನ ೩೫ ರೂಪಾಯಿಗಳಾಗಿದ್ದವು.[೧೦೬] ಕ್ರಿ.ಶ. ೧೮೯೯-೧೯೯೦ರ ಸಾಲಿನಲ್ಲಿ ಬ್ರಿಟೀಷ್ ಸರಕಾರವು ಸೈನ್ಯಕ್ಕಾಗಿಯೇ ೯ ಲಕ್ಷದ ೮೮ ಸಾವಿರದ ೯೯೬ ರೂಗಳನ್ನು ಖರ್ಚು ಮಾಡಿತು.

**೩.೬.೩. ಠಾಣಾದಾರರು**

ರಾಜ್ಯದ ಹಿತಾಸಕ್ತಿಯನ್ನು ಕಾಪಾಡಲು ಕೆಲವು ಕಾನೂನುಗಳನ್ನು ಜಾರಿಗೆ ತರುವ ಅವಶ್ಯಕತೆಯು ಅಗತ್ಯವಾಗಿರುವಂತೆ ಅವುಗಳನ್ನು ಮುನ್ನಡೆಸಿಕೊಂಡು ಯಶಸ್ವಿಯಾಗಿಸಲು ಅಧಿಕಾರಿಗಳ ನೇಮಕವೂ ಕೂಡ ಅಗತ್ಯವಾಗಿರುತ್ತದೆ. ಅಂತೆಯೇ ಮೈಸೂರು ಒಡೆಯರು ಕೂಡ ತಮ್ಮ ಅಧಿಕಾರದ ಅವಧಿಯಲ್ಲಿ ಕಾನೂನು ಸುವ್ಯವಸ್ಥೆಯನ್ನು ಕಾಪಾಡಲು ಅಗತ್ಯವಾದ ಪೊಲೀಸರು ಅಥವಾ ಠಾಣಾದಾರ ಮೊದಲು ರಾಜ ಒಡೆಯರು ನೇಮಿಸಿದರು.೧೦೭ ಅವರಲ್ಲಿ ಬುದ್ಧಿವಂತರೂ ಎಲ್ಲಾ ರಾಜ್ಯಗಳ ಗಡಿಗಳನ್ನು ಕುರಿತು ಮಾಹಿತಿಯನ್ನು ಅರಿತಿದ್ದ ದಕ್ಷರೂ ಆಗಿರಬೇಕಿತ್ತು. ಠಾಣಾದಾರ ಎಂದರೆ ರಾಜ್ಯದ ವಿವಿಧ ಗಡಿಗಳಲ್ಲಿ ಸೈನ್ಯವನ್ನು ಸಂಗ್ರಹಿಸುತ್ತಿದ್ದ ಸೈನಿಕ ಠಾಣ್ಯಗಳನ್ನು ನೋಡಿಕೊಳ್ಳುತ್ತಿದ್ದ ಠಾಣ್ಯಗಳ ಮುಖ್ಯಸ್ಥನೇ ಠಾಣಾದಾರ. ಆದರೆ ಮುಂದುವರಿದ ಕಾಲಘಟ್ಟದಲ್ಲಿ ರಣಧೀರ ಕಂಠೀರವ ನರಸರಾಜ ಒಡೆಯರ ಆಳ್ವಿಕೆಯಲ್ಲಿ ಅನ್ಯರ ಆಕ್ರಮಣಗಳಿಗೆ ಹೆಚ್ಚಾಗಿದ್ದರಿಂದ ಅವರನ್ನು ನಿಗ್ರಹಿಸಲು ಗಡಿಗಳಲ್ಲಿ ಒಬ್ಬ ಸುಬೇದಾರ, ಇಬ್ಬರು ಕರಣಿಕರು, ಗುಮಾಸ್ತರು, ಠಾಣೆದಾರರನ್ನು ನೇಮಿಸಿದರು.[೧೦೮] ಇದರ ಉದ್ದೇಶ ಗಡಿಪ್ರದೇಶಗಳಲ್ಲಿ ಕಳ್ಳಕಾರರ ಹಾವಳಿಗಳನ್ನು ತಡೆಯುವುದಾಗಿತ್ತು. ಠಾಣಾದಾರರು ರಾಜ್ಯದ ಕಂದಾಚಾರ ಇಲಾಖೆಯ ಪ್ರಮುಖ ಅಧಿಕಾರಿಗಳಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಏಕೆಂದರೆ ಇವರು ಚಿಕ್ಕದೇವರಾಜ ಒಡೆಯರ ಕಾಲಕ್ಕಾಗಲೇ ಗಡಿಪ್ರದೇಶಗಳ ಸಂಪೂರ್ಣವಾದ ಅಧಿಕಾರವನ್ನು ಹೊಂದಿದ್ದು ಯಾರೇ ಹೊಸ ವ್ಯಕ್ತಿಗಳು ರಾಜ್ಯ ಪ್ರವೇಶಿಸಬೇಕಾದರೆ ಮೊದಲು ಕಂದಾಚಾರದ ಠಾಣಾದಾರರನ್ನು ಸಂಪರ್ಕಿಸಿ ರಹದಾರಿಯನ್ನು ಪಡೆದ ನಂತರ ಅವರು ರಾಜ್ಯದ ಪ್ರವೇಶಕ್ಕೆ ಅರ್ಹರಾಗುತ್ತಿದ್ದರು. ಕಂದಾಚಾರ ಇಲಾಖೆಯ ನೇರ ಆಳ್ವಿಕೆಯಲ್ಲಿ ಈ ಅಧಿಕಾರಿಗಳು ನೇಮಕವಾಗಿದ್ದು ಪ್ರತಿಗಡಿಗಳಲ್ಲಿ ಒಬ್ಬ ಠಾಣಾದಾರ, ಒಬ್ಬಆಳು, ಗುರಿಕಾರ, ತಲಾ ಮೂರರಂತೆ ಶಿರಸ್ತೇದಾರ ಮತ್ತು ಗುಮಾಸ್ತರು ಹೋಬಳಿದಾರ, ದಫೇದಾರ, ಓಲೆಕಾರ, ಕೊಂಬಿನವನು, ತಮಟೆಯವನು ಮುಂತಾದ ಜನಗಳನ್ನು ನೇಮಕ ಮಾಡಿ ಗಡಿಗಳ ವಿಧವನ್ನು ಅರಿತು ೧೦೦ ರಿಂದ ೪೦೦ ಜನಗಳ ವರೆಗೂ ಓಲೆಕಾರರನ್ನು ನೇಮಿಸಿದರು. ಈ ಓಲೆಕಾರರಿಗೆ ಆರು ಮಂದಿಗೆ ಒಬ್ಬ ಧಫೇದಾರನೂ, ೫೦ ಜನ ಧಫೇದಾರರಿಗೆ ಒಬ್ಬ ಹೋಬಳಿದಾರನೂ ನೇಮಕ ವಾಗುತ್ತಿದ್ದುದುಂಟು. ಇವರು ಅಗತ್ಯ ಬಿದ್ದರೆ ಯುದ್ಧ ಸಂದರ್ಭದಲ್ಲಿ ಮದ್ದು ಗುಂಡುಗಳನ್ನು ಸಿದ್ಧ ಮಾಡಿಟ್ಟುಕೊಳ್ಳುವುದರ ಜೊತೆಗೆ

ಯುದ್ಧಗಳಲ್ಲೂ ಭಾಗವಹಿಸಬೇಕಿತ್ತು.[೧೦೯] ಆದ್ದರಿಂದ ಇವರನ್ನು ನೋಡಿಕೊಳ್ಳಲು ಪ್ರತಿ ಗಡಿಗಳಿಗೂ ಒಬ್ಬೊಬ್ಬ ಸುಬೇದಾರನು ನೇಮಿಸುತ್ತಿದ್ದನು. ಇದರ ಜೊತೆಗೆ ಗಡಿಗಳಲ್ಲಿ ಅವರು ಕೃಷಿ ಕಾರ್ಯಗಳನ್ನು ಸಹ ನೋಡಿಕೊಳ್ಳಬೇಕಾಗಿತ್ತು. ಚಿಕ್ಕದೇವರಾಜ ಒಡೆಯರು ತಮ್ಮ ಕಾಲದಲ್ಲಿ ಬುದ್ಧಿವಂತನಾದ ಸುಬೇದಾರನನ್ನು ಹಣಕಾಸು, ದವಸದಾನ್ಯ ಮುಂತಾದವುಗಳ ಲೆಕ್ಕಬರೆಯಲು ರಾಜ್ಯಕ್ಕೆ ಪ್ರಾಮಾಣಿಕವಾಗಿ ಶಿಸ್ತಿನಿಂದ ಸೇವೆಸಲ್ಲಿಸಲು ನಡೆದುಕೊಳ್ಳುವಂತೆ ನೇಮಿಸಿದರು. ಶಿರಸ್ತೆದಾರರು, ಗುಮಾಸ್ತರು, ರಾಯಸದವೆರು ಮುಂತಾದ ಅಠವಾಣೆಯ ಜನರನ್ನು ಕಂದಾಚಾರಕ್ಕೆ ಜಿಲ್ಲೆದಾರ ಠಾಣೆದಾರ ಮೊದಲಾದವರನ್ನು ನೇಮಿಸುವ ಹಾಗೂ ಇವರು ಕಾವಲಿಗೆ ಅಗತ್ಯವಾದ ಸಂದರ್ಭಗಳಲ್ಲಿ ಸುಬೇದಾರನಿಂದ ಅಂತಿಮವಾದ ನಿರ್ದೇಶನಗಳನ್ನು ಪಡೆಯುತ್ತಿದ್ದರು. ಅರಸನು ಅಂದರೆ ಸುಬೇದಾರ, ಶಿರಸ್ತೆದಾರ, ಕಿಲ್ಲೆದಾರರು ಮೊದಲಾದವರನ್ನು ನೇಮಿಸಿದಾಗ ಅವರ ಸೇವೆಯನ್ನು ಅರಿತು ವೇತನವನ್ನು ನೀಡುತ್ತಿದ್ದರು. ಅದರ ಪ್ರಕಾರವಾಗಿ ಅವರಿಗೆ ಅರ್ಧನಗದು ಮತ್ತು ಅರ್ಧ ಭತ್ತೆ ಈ ಮೇರೆಗೆ ಕೊಡುವಂತೆ ನಿರ್ಧರಿಸಲಾಯಿತು. ಅದರ ಪ್ರಕಾರ ಅರ್ಧ ವರಹ, ಒಂದು ಹಣ, ಒಂದು ವರಹದವರೆಗೂ ವೇತನವನ್ನು ನೀಡಲಾಗುತ್ತಿತ್ತು. ಗಡಿಗಳಲ್ಲಿ ಕಳ್ಳಕಾರರು ಮತ್ತು ತುಂಟ ಜನಗಳಿಂದ ರಾಜ್ಯಕ್ಕೆ ಯಾವುದೇ ರೀತಿಯ ತೊಂದರೆಯಾಗದಂತೆ ಕಾಪಾಡಲು ಇವರು ಪೊಲೀಸ್ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದರು. ಪ್ರತಿ ಗ್ರಾಮಗಳಿಗೂ ಒಬ್ಬೊಬ್ಬ ಗೌಡ, ಒಂದರಿಂದ ಮೂರು ಜನ ಶ್ಯಾನುಭೋಗರು, ಒಬ್ಬ ಕಬ್ಬಿಣದ ಕೋಪದವನು, ಒಬ್ಬೊಬ್ಬ ತೋಟಿ, ತಳವಾರ, ನೀರಗಂಟಿ, ಓಜರದವನು ಎಂಬ ಸ್ಥಳೀಯ ಅಧಿಕಾರಿಗಳನ್ನು ನೇಮಿಸಿದರು.[೧೧೦] ರಾಜ್ಯದ ಲಳ ಗಡಿಗಳಲ್ಲಿ ಕೂಡ ಪೂರ್ವದ ಪಾಳೆಯಗಾರರ ಕಾಲದಲ್ಲಿದ್ದಂತೆ ಮುದ್ರೆಯುಂಗರಗಳನ್ನು ಬಳಸುವುದನ್ನು ಬಿಟ್ಟು, 'ದೇ' ಎಂಬ ಅಕ್ಷರವನ್ನು ಉಂಗುರದ ಮೇಲೆ ಕೆತ್ತಿಸಿ ಅವುಗಳು ಸದಾ ೨೩೨ ಸುಬೇದಾರನ ಕೈಯಲ್ಲಿರುವಂತೆ ಆಜ್ಞಾಪಿಸಲಾಯಿತು. ಚಿಕ್ಕಪಾರುಪತ್ತೆಗಾರರು ಕಿಲ್ಲೆದಾರರು ಮೊದಲಾದವರಿಗೆ ಬೆಳ್ಳಿಯ ಉಂಗುರಗಳನ್ನು ನೀಡಲಾಗಿತ್ತು.[೧೧೧] ಪ್ರತಿ ಪೇಟೆಗಳಿಗೂ ಕೂಡ ಒಬ್ಬೊಬ್ಬ ಕೊತ್ವಾಲ, ಶ್ಯಾನುಭೋಗ, ಕಳ್ಳಭಂಡರು, ಕೊಂಬಿನವನು, ತಮಟೆಯವನು ಮೊದಲಾದವರು. ಇರುವಂತೆ ನೋಡಿಕೊಳ್ಳಲಾಯಿತು.೧೧೨ ಚಿಕ್ಕದೇವರಾಜ ಒಡೆಯರು ಸೀಮೆಯ ಕಂದಾಚಾರದ ಚೌವಡಿ ಎಂಬ ಇಲಾಖೆಯನ್ನು ಸ್ಥಾಪಿಸಲಾಯಿತು. ಕಿಲ್ಲೆದಾರ, ಶಿರಸ್ತೆದಾರ, ಹೋಬಳಿದಾರ, ಓಲೆಕಾರ ಮುಂತಾದ ಸಿಬ್ಬಂದಿಯ ಜನಗಳ ಲೆಕ್ಕವನ್ನು ಆಯಾ ಕಿಲ್ಲೆಗಳಲ್ಲಿರುವ ಫಿರಂಗಿ, ತುಪಾಕಿ, ಮದ್ದುಗುಂಡು ಮೊದಲಾದ ಯುದ್ಧಸಂಬಂಧಿ ಸಾಮಾಗ್ರಿಗಳು ಮೊದಲಾದವುಗಳ ಲೆಕ್ಕವನ್ನು ಬರೆದಿಡುವಂತೆ ಆದೇಶವನ್ನು ಹೊರಡಿಸಲಾಯಿತು. ಬಾಗಿಲ ಕಂದಾಚಾರದ ಚಾವಡಿಯನ್ನು ಸ್ಥಾಪಿಸಿ ಅದರಲ್ಲಿ ಸವಾರರು, ಬಾರಿನವರು, ಬಾಗೀನರ್‌ನವರು ಅರಸನ ಅಂಗರಕ್ಷಣೆಯವರು, ಪಾಳೆಯಗಾರರು ಮೊದಲಾದವರ ಲೆಕ್ಕವನ್ನು ಬರೆಯುವಂತೆ ಚಿಕ್ಕದೇವರಾಜ ಒಡೆಯರು ಆದೇಶವನ್ನು ಹೊರಡಿಸಿದರು. ಅದೇ ಮಾದರಿಯಲ್ಲಿ ಕಂದಾಚಾರ ಇಲಾಖೆಯು ನಿರ್ವಹಿಸುತ್ತಿದ್ದ ಕಾರ್ಯವನ್ನು ಬೇಡಿನ ಚಾವಡಿಯು ಲಳ

ಗಡಿಗಳಲ್ಲಿಯೂ ಅಂಚೆ ಹರಿಕಾರನ ಮೂಲಕ ವರ್ತಮಾನಗಳನ್ನು ಸಾಗಿಸುತ್ತಿದ್ದಂತಹ[೧೧೪] ಇದು ಕಂದಾಚಾರ ಇಲಾಖೆಯ ರೀತಿಲ್ಲೋ ಕಾರ್ಯವನ್ನು ನಿರ್ವಹಿಸುತ್ತಿತ್ತು.

ಹೈದರ್ ಅಲಿಯ ಕಾಲಾವಧಿಯಲ್ಲಿ ರಾಜ್ಯದ ವಿವಿಧ ಗಡಿಗಳು ವಿಸ್ತರಿಸುತ್ತಾ ಹೋದಂತೆ ಕಂದಾಚಾರರ ಸಂಖ್ಯೆಯನ್ನು ೧,೧೦,೦೦೦ಕ್ಕೆ ವರಿಸಿದರು. ಅದರಲ್ಲಿ ೫೦,೦೦೦ ಜನರನ್ನು ಕಿಲ್ಲೆ ಮೊದಲಾದ ಭದ್ರತಾ ಕೆಲಸಗಳಿಗೆ ನೇಮಿಸಿ ಉಳಿದ ೬೦,೦೦೦ ಮಂದಿ ಸೈನಿಕರನ್ನು ದೇಶೀಯ ಸೈನ್ಯದ ಒತ್ತಾಸೆಗಾಗಿ ಮೀಸಲಿರಿಸಲಾಯಿತು. ಇದರಲ್ಲಿ ಅರ್ಧಪಾಲು ಜನರಿಗೆ ಸರ್ಕಾರದಿಂದ ವೇತನವನ್ನು ನೀಡಿದರೆ ಉಳಿದರ್ಧ ಜನರಿಗೆ ಪಾಳೆಯಗಾರರು ವೇತನವನ್ನು ನೀಡುತ್ತಿದ್ದರು. ಅರಮನೆಯಲ್ಲಿದ್ದವರಿಗೆ ನಗದು ರೂಪದಲ್ಲಿ ಮತ್ತು ತಾಲ್ಲೂಕು ಪ್ರಾಂತ್ಯದಲ್ಲಿದ್ದವರಿಗೆ ಕೆಲವರಿಗೆ ನಗದಾಗಿಯೂ, ಮತ್ತೆ ಕೆಲವರಿಗೆ ಭೂಮಿಯ ರೂಪದಲ್ಲೂ ಸಲ್ಲಿಕೆಯಾಗುತ್ತಿತ್ತು. ಟಿಪ್ಪು ಸುಲ್ತಾನನ ಕಾಲದಲ್ಲಿ ರಾಜ್ಯದ ಕೆಲವುಗಡಿಭಾಗಗಳು ಮೈಸೂರು ರಾಜ್ಯದಿಂದ ಕೈಬಿಟ್ಟು ಹೋದದ್ದರಿಂದ ಈ ಸೈನ್ಯವನ್ನು ೫೦,೦೦೦ ಮಂದಿಯನ್ನು ಮಾತ್ರ ಉಳಿಸಿಕೊಳ್ಳಲಾಯಿತು. ಟಿಪ್ಪುವಿನ ಮರಣಾನಂತರ ಕ್ರಿ.ಶ.೧೭೯೯ರಲ್ಲಿ ದಿವಾನ್ ಪೂರ್ಣಯ್ಯನವರು ೨೦,೨೭ ಮಂದಿ ಕಂದಾಚಾರದವರನ್ನು ಮಾತ್ರ ಉಳಿಸಿಕೊಂಡರು. ಆಗಲೂ ಸಹ ಇವರಿಗೆ ನಗದಿನ ಮೂಲಕವಾಗಿ ೨ ರೂಗಳು ಮತ್ತು ಉಳಿದರ್ಧ ಭಾಗವನ್ನು ಜಮೀನಿನ ರೂಪದಲ್ಲೂ ಕೊಡಲಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ೧೨,೦೦೦ ಮಂದಿಯನ್ನು ಮತ್ತೆ ದಾಖಲು ಮಾಡಿಕೊಳ್ಳಲಾಯಿತು. ಈ ಪೈಕಿ ಮೈಸೂರು ನಿವಾಸಿಗಳಲ್ಲಿ ಅರ್ಧಪಾಲು ಜನರನ್ನು ವಾರದ ಹೋಬಳಿಯವರೆಂದು ಉಳಿದ ಅರ್ಧಭಾಗದವರನ್ನು ಪರದೇಶದ ಹೋಬಳಿಯವರೆಂತಲೂ ವಿಂಗಡಿಸಿದ್ದರು. ಅಲ್ಲದೆ ಇವರು ತಮ್ಮ ಪ್ರಾಂತ್ಯಗಳ ಹೊರಗೆ ನೌಕರಿಗೆ ಹೋದವರಿಗೆ ಹೆಚ್ಚಾಗಿ ತಲಾ ಒಬ್ಬೊಬರಿಗೂ ೩ ೧/೨ ರೂಪಾಯಿಗಳನ್ನು ಭತ್ಯೆಯ ರೂಪದಲ್ಲಿ ನೀಡಲಾಗುತ್ತಿತ್ತು. ಸೈನಿಕರ ಮನೆತನದವರು ಪ್ರತಿ ಮನೆಗೂ ಒಬ್ಬೊಬ್ಬನನ್ನು ಸರ್ಕಾರದ ನೌಕರಿಗೆ ಕಳುಹಿಸಿಕೊಟ್ಟು ಅವನನ್ನು ಬದಲಾಯಿಸಬೇಕಾದಾಗ ಅವರವರ ಸಂಸಾರದ ಅನುಕೂಲವಿದ್ದಂತೆ ಬೇರೆ ಆಳುಗಳನ್ನು ಒದಗಿಸಬೇಕಿತ್ತು. ದಿವಾನ್ ಪೂರ್ಣಯ್ಯನವರ ಆಡಳಿತದ ಅಂತ್ಯದ ದಿನಗಳಲ್ಲಿ ೧೬,೪೬೧ ಮಂದಿಯನ್ನು ಕಂದಾಚಾರಕ್ಕಾಗಿಯೇ ವಾರ್ಷಿಕವಾಗಿ ೧,೭೭,೬೨೨ ಕಂಠೀರವ ವರಹಗಳನ್ನು ಖರ್ಚುಮಾಡಲಾಗುತ್ತಿತ್ತು.[೧೧೫]

ಟಿಪ್ಪುವಿನ ಮರಣದ ನಂತರ ಕಂದಾಚಾರವನ್ನು ಪೊಲೀಸ್ ಇಲಾಖೆಗೆ ಸೇರಿಸಲಾಯಿತು. ಇವರು ಗ್ರಾಮಗಳ ಮಟ್ಟದಿಂದ ಅಂದರೆ ಪಟೇಲರು, ಶ್ಯಾನುಭೋಗರು, ತಳವಾರ, ತೋಟಿ, ನೀರಗಂಟೆ, ಕಾವಲುಗಾರ, ಕಟ್ಟೆಬಂಧಿ, ಹಳೆಪೈಕಿ, ಉಂಬಳಿದಾರ್, ಅಮರುಗಾರರು ಎಂಬ ಹೆಸರಿನಿಂದ ನಡೆಸುತ್ತಿದ್ದರು. ಪಟೇಲರು ತಮ್ಮ ಪ್ರಜೆಗಳು ಈ ಸಿಬ್ಬಂದಿಗಳಿಗೆ ಕಳ್ಳರು ಮತ್ತು ಕದ್ದವಸ್ತುಗಳನ್ನು ಪತ್ತೆಮಾಡಲು ಸಹಾಯವನ್ನು ನೀಡುವಂತೆ ಆದೇಶ ನೀಡುತ್ತಿದ್ದರು. ಚಿಕ್ಕದೇವರಾಜ

ಒಡೆಯರ ಆಳ್ವಿಕೆಯಲ್ಲಿ ಇವರಿಗೆ ಕೆಲವು ಇನಾಂಗಳು ಬಿಡುಗಡೆಯಾದವು ಆದರೆ ಟಿಪ್ಪು ಸುಲ್ತಾನನು ಅನೇಕ ಮಂದಿ ಪಟೇಲರು, ಉಂಬಳಿದಾರರು, ಅಮರಗಾರರನ್ನು ಕಡಿಮೆಮಾಡಿ ಈ ಬಂಬತ್ತು ಇಲಾಖೆಗಳಿಗೆ ಕಂದಾಯವನ್ನು ಹಾಕುತ್ತಿದ್ದರು.[೧೧೬] ಅವರ ಕ್ರೂರದಂಡನೆಯ ಭಯದಿಂದಲೂ ಅವರು ನೇಮಿಸಿದ ಆಸಫರ ಪೌಜನ್ನು (ಕಂದಾಚಾರ) ಅಲ್ಲಲ್ಲಿ ಜಾಗರೂಕವಾಗಿರುತ್ತಿದ್ದರಿಂದ ಈ ಪೊಲೀಸಿನ ಏರ್ಪಾಡು ಹದಗೆಡುತ್ತಿತ್ತು. ಆದ್ದರಿಂದ ದಿವಾನ್ ಪೂರ್ಣಯ್ಯನವರು ಕಂದಾಚಾರ ಇಲಾಖೆಯ ಜನರ ಮೂಲಕ ಬಹುಮಟ್ಟಿಗೆ ಪೊಲೀಸ್ ಕೆಲಸಗಳನ್ನು ಮಾಡಿಸಿ ಪಟೇಲರ ಅಧಿಕಾರವನ್ನು ಸರ್ಕಾರಕ್ಕೆ ಸೇರಿಸಿಬಿಟ್ಟರು. ಆದ್ದರಿಂದ ಸರ್ಕಾರದ ಹಿಡಿತಕ್ಕೆ ಆಡಳಿತವು ವರ್ಗಾಯಿಸಲ್ಪಟ್ಟಿತು. ಅವರ ವೇತನಗಳು ಹಣದ ಮೂಲಕ ನೀಡುವಂತೆ ಆದೇಶವನ್ನು ಹೊರಡಿಸಿ ಕಾಲಕಾಲಕ್ಕೆ ಅವರಿಗೆ ತಲುಪುವಂತೆ ಮಾಡಲಾಯಿತು.

ಕಂದಾಚಾರ ಇಲಾಖೆಯ ಅಧಿಕಾರಿಗಳ ಮುಖಾಂತರ ಸುಬೇದಾರರು ಈ ಕೆಳಗಿನ ಕಾರ್ಯಗಳನ್ನು ನಿರ್ವಹಿಸುವಂತೆ ಮಾಡುತ್ತಿದ್ದರು. ಅವುಗಳೆಂದರೆ

೧. ಕಂದಾಚಾರದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದ ಸೇವಕರ ಹಿತಾಸಕ್ತಿಯನ್ನು ರಕ್ಷಿಸುವುದು.

೨. ಕಿರಿಯ ಅಧಿಕಾರಿಗಳು ತಮ್ಮ ಕ್ಷೇತ್ರವ್ಯಾಪ್ತಿಯ ಕಾರ್ಯಗಳನ್ನು ಮೀರದಂತೆ ಅವರನ್ನು ನಿಯಂತ್ರಿಸುವುದು.

೩. ಕಂದಾಚಾರ ಸೇವಕರ ವಿರುದ್ಧ ಬರುವಂತಹ ದೂರುಗಳ ತನಿಖೆಯನ್ನು ನಡೆಸುವುದು.

೪. ಪ್ರತಿ ಅಧಿಕಾರಿಗೂ ಕೂಡ ವೇತನವನ್ನು ಸಕಾಲಕ್ಕೆ ನೀಡುವುದು.

೫. ತನ್ನ ಅಧೀನ ಅಧಿಕಾರಿಗಳಿಗೆ ಎರಡು ದಿನಗಳನ್ನು ಮೀರದಂತೆ ರಜೆ ನೀಡುವುದು.

೬. ಸೈನಿಕರನ್ನು ಪಾಳಿಗಳ ಮೇಲೆ ಕರ್ತವ್ಯಗಳಿಗೆ ನಿಯೋಜಿಸುವುದು.

೭. ಗಡಿ ಪ್ರದೇಶಗಳ ಕೋಟೆಕೊತ್ತಲಗಳಲ್ಲಿನ ಗಿಡಗಂಟೆಗಳನ್ನು ತೆಗೆದು ಸ್ವಚ್ಛಗೊಳಿಸುವುದು.

೮. ಅಪರಾಧ ಪ್ರಕರಣಗಳಲ್ಲಿ ಭಾಗಿಯಾಗಿದ್ದ ಮತ್ತು ಅವುಗಳಿಂದ ಖುಲಾಸೆಯಾದ ವ್ಯಕ್ತಿಗಳ ಚಲನವಲನಗಳನ್ನು ಗಮನಿಸುವುದು. ಅಲ್ಲದೆ ಅವರು ಮತ್ತೆ ಅಪರಾಧ ಚಟುವಟಿಕೆಗಳಲ್ಲಿ ಭಾಗಿಯಾಗದಂತೆ ತಡೆಯುವುದು.[೧೧೭] ಇವುಗಳಲ್ಲದೆ ಇನ್ನೂ ಹಲವಾರು ಕಾರ್ಯಗಳನ್ನು ಇವರು ನಿರ್ವಹಿಸಬೇಕಿತ್ತು.

**೩.೬.೪. ಸೈನಿಕರ ಆಯ್ಕೆ ಮತ್ತು ತರಬೇತಿ**

ಮೈಸೂರು ಸೇವೆಯು ವಿಜಯನಗರ ಸೈನ್ಯದ ಮಾದರಿಯಲ್ಲಿದ್ದರೂ ಮೂಲತಃ ಕೇಂದ್ರಾಡಳಿತದ ಅಧೀನದಲ್ಲಿತ್ತು. ವಿಜಯನಗರದ ಆಡಳಿತದಲ್ಲಿ ಕೇಂದ್ರ ಮತ್ತು ಪ್ರಾಂತೀಯ ಆಡಳಿತಗಳ ಅಧೀನದಲ್ಲಿ ಸೇನೆಯು ಇದ್ದುದರಿಂದ ಕೇಂದ್ರ ಮತ್ತು ಪ್ರಾಂತೀಯ ಆಡಳಿತಗಳು ಪ್ರತ್ಯೇಕವಾಗಿ ತರಬೇತಿಯನ್ನು ನೀಡುತ್ತಿದ್ದವು.[೧೧೮] ಮೈಸೂರು ಒಡೆಯರ ಪ್ರಾರಂಭದಲ್ಲಿ ಕಾಲಾವಧಿಯಲ್ಲಿ ಸೈನ್ಯಕ್ಕೆ ಆಯ್ಕೆ ಮಾಡಿಕೊಳ್ಳಲು ಕೆಲವೊಂದು ಮಾನದಂಡಗಳಿದ್ದವು. ಅವುಗಳೆಂದರೆ

೧. ವಂಶಪಾರಂಪರ್ಯವಾದ ಸೈನಿಕರ ಆಯ್ಕೆಯು ಸಾಮಾನ್ಯವಾಗಿತ್ತು. ೨. ಸೈನಿಕರು ಸೈನಿಕರಾಗಿ ದುಡಿಯಲು ಅಥವಾ ಮನೆಯಲ್ಲಿನ ಹಿರಿಯರು ಕರ್ತವ್ಯಕ್ಕೆ ಹಾಜರಾಗದೆ ಇದ್ದಂತಹ ಸಂದರ್ಭದಲ್ಲಿ ತಮ್ಮ ಮಕ್ಕಳನ್ನು ಕಳಿಸುತ್ತಿದ್ದರು. ಉದಾಹರಣೆಗೆ ಅನಾರೋಗ್ಯ ಕಾಡುವ ಸಂದರ್ಭದಲ್ಲಿ ಅವರ ಪಾಳಿಯ ಕೆಲಸಕ್ಕೆ ಮಕ್ಕಳು ಹೋಗುತ್ತಿದ್ದರು. ೩. ಸೈನ್ಯದಲ್ಲಿ ಸೇವೆ ಸಲ್ಲಿಸುವವರು. ದೈಹಿಕವಾಗಿ ಸಧೃಡರಾಗಿರಬೇಕಿತ್ತು. ೪. ಬಹುಪಾಲು ಸೈನಿಕರು ಕೃಷಿಕರಾಗಿದ್ದು ಯುದ್ಧಸಂದರ್ಭಗಳಲ್ಲಿ ತಪ್ಪದೆ ಯುದ್ಧಗಳಲ್ಲಿ ಭಾಗವಹಿಸಬೇಕಿತ್ತು. ೫. ಸಾಮಾನ್ಯವಾಗಿ ಶ್ರಮಿಕ ವರ್ಗದ ಮತ್ತು ಆರ್ಥಿಕವಾಗಿ ಹಿಂದುಳಿದವರು ಸೈನ್ಯದಲ್ಲಿ ಸೇವೆಸಲ್ಲಿಸುತ್ತಿದ್ದರು. ಏಕೆಂದರೆ ಸಮಾಜದ ಮೇಲ್ವರ್ಗದ ಜನರು ಭಾಗವಹಿಸಿದರೂ ಸಹ ಸೈನ್ಯದಲ್ಲಿ ಉನ್ನತ ಅಧಿಕಾರವನ್ನು ಮಾತ್ರ ಅವರು ಹೊಂದಿರುತ್ತಿದ್ದು ತಮ್ಮ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸೈನಿಕರಿಗೆ ನಿರ್ದೇಶನಗಳನ್ನು ನೀಡುವ ಜೊತೆಗೆ ಅಗತ್ಯ ಸಂದರ್ಭಗಳು ಒದಗಿದಾಗ ತಾವೂ ಕೂಡ ಯುದ್ಧಗಳಲ್ಲಿ ಪಾಲ್ಗೊಳ್ಳುತ್ತಿದ್ದರು.

ಟಿಪ್ಪುವಿನ ಮರಣದ ನಂತರ ಸೈನಿಕರ ಆಯ್ಕೆಯು ಬ್ರಿಟಿಷರ ಅಧಿಕಾರದ ಅಧೀನದಲ್ಲಿ ನಡೆಯುತ್ತಿತ್ತು. ಆದ್ದರಿಂದ ಇವರು ಸ್ಪರ್ಧಾತ್ಮಕ ಪರೀಕ್ಷೆಗಳ ಮುಖಾಂತರ ಸೈನಿಕರನ್ನು ನೇಮಕ ಮಾಡುವ ಕಾರ್ಯಕ್ಕೆ ಕೈಹಾಕಿದರು. ಅಭ್ಯರ್ಥಿಗಳು ಲಿಖಿತ ಮತ್ತು ದೈಹಿಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ತರಬೇತಿಗಳಿಗೆ ಹಾಜರಾಗಬೇಕಿತ್ತು. ಆದರೆ ಕ್ರಿ.ಶ.೧೯೧೪-೧೫ರ ಮೈಸೂರಿನ ಸೈನಿಕ ಕಡತದಲ್ಲಿ(೨೦೦/೧೯೧೪-೧೫) ಬ್ರಿಟಿಷರ ದಾಖಲೆಗಳು ಮೈಸೂರಿನ ಸೈನ್ಯದಲ್ಲಿ ದಲಿತರಿಗೆ ಅವಕಾಶವಿರಲಿಲ್ಲ ಎಂದು ಸ್ಪಷ್ಟಪಡಿಸುತ್ತವೆ. ಅಷ್ಟಕ್ಕೂ ದಲಿತರು ಶ್ರಮಿಕವರ್ಗದವರಾಗಿದ್ದು ದೈಹಿಕ ಸಾಮರ್ಥ್ಯಗಳನ್ನು ಹೆಚ್ಚು ಹೊಂದಿರುತ್ತಿದ್ದು, ಅತ್ಯಂತ ಕಷ್ಟಕರವಾದ ಕೆಲಸಕಾರ್ಯಗಳನ್ನು ಮಾಡುತ್ತಿದ್ದರಿಂದ ಇವರಿಗೆ ಕೆಳವರ್ಗದವರೆಂದು ಕೆಳದರ್ಜೆಯ ಹುದ್ದೆಗಳನ್ನು ನೀಡುತ್ತಿರಲಿಲ್ಲ. ಆದರೂ ಸಹ ಉನ್ನತ ಹಂತದಿಂದ ಕೆಳಹಂತದವರೆಗೂ ಬ್ರಾಹ್ಮಣೀಕರಣದ ಅಂಶವನ್ನು ಕಾಣಬಹುದು. ಮುಸ್ಲಿಂರಿಗೆ ದೇವಾಲಯಗಳ ಮತ್ತು ಸಾರ್ವಜನಿಕ ಕಟ್ಟಡಗಳಿಗೆ ಪ್ರವೇಶದ ಅವಕಾಶವನ್ನು ಒದಗಿಸಿದ ಈ ವ್ಯವಸ್ಥೆಯು ಹಿಂದೂಗಳಲ್ಲಿನ ಒಂದು ಭಾಗವಾದ ಹಿಂದೂಗಳಿಗೆ ಸೈನ್ಯದ ನೇಮಕಾತಿಯಲ್ಲಿ ಈ ರೀತಿಯ ವ್ಯವಸ್ಥೆಯನ್ನು ಮಾಡಿದ್ದು ಅವಮಾನಕರವೇ ಸರಿ. ಏಕೆಂದರೆ ಒಂದುಕಡೆ ಸಾಮಾಜಿಕ ವ್ಯವಸ್ಥೆಯ ಸುಧಾರಣೆಗಾಗಿ ಶಿಕ್ಷಣವನ್ನು ಒದಗಿಸಿ ಸರ್ವಸಮಾನರು ಎಂಬ ಮನಸ್ಥಿತಿಯು ಸೈನ್ಯದ ಮೇಲೆ ಅತ್ಯಂತ ನಿಕೃಷ್ಟವಾದ ಪರಿಣಾಮವನ್ನು ಉಂಟುಮಾಡಿತು. ಆದರೂ ಸಹ ಸುಧಾರಣೆಯ ಮಾತುಗಳು ಕೇವಲ ಬಾಯ್ಮಾತಿನ ಹಾಗೂ ಕಡತಗಳಲ್ಲಿ ಉಳಿದಿರುವ ಯೋಜನೆಗಳಾಗಿಯೇ ಉಳಿದವು. ಬ್ರಿಟಿಷರು ಅಷ್ಟೆಲ್ಲಾ ಸುಧಾರಣೆಗಳನ್ನು ಮಾಡಿದರೂ ಈ ಪರಿಸ್ಥಿತಿಯನ್ನು ಸುಧಾರಿಸಲು ಏಕೆ ಕ್ರಮಗಳನ್ನು ಕೈಗೊಳ್ಳಲಿಲ್ಲ? ಎಂಬ ಪ್ರಶ್ನೆಯು ಏಳುವುದು ಸಹಜವೇ ಆಗಿದೆ. ಆದರೆ ಬ್ರಿಟಿಷರ ದಾಖಲೆಗಳು ಎಲ್ಲವೂ ಕೂಡ ಸತ್ಯಾಂಶಗಳಿಂದಲೇ ಕೂಡಿವೆ ಎಂದು ತಿಳಿಯುವುದು ಕಷ್ಟಸಾಧ್ಯವಾಗಿದೆ. ಮಹಾನವಮಿಯ

ದಿನ ಮೈಸೂರು ಅರಸರು ತಮ್ಮಲ್ಲಿದ್ದ ಅಶ್ವದಳ, ಕಾಲ್ದಳ, ಗಜದಳ ಹಾಗೂ ಒಂಟೆದಳಗಳ ಮೆರವಣಿಗೆ ಹಾಗೂ ಅವುಗಳ ಕವಾಯಿತು ಪ್ರದರ್ಶನಗಳಲ್ಲಿ ವಂದನೆಗಳನ್ನು ಸ್ವೀಕರಿಸುತ್ತಿದ್ದರು. ಅಂದರೆ ಈ ಮೊದಲೇ ತಿಳಿಸಿದಂತೆ ಅರಸನು ತನ್ನ ಭುಜಬಲದಿಂದ ಸಂಪಾದಿಸಿರುವ ಸೈನ್ಯದ ಪರಿಚಯವು ರಾಜ್ಯದ ಪ್ರಜೆಗಳು ಹಾಗೂ ತನ್ನ ಸಾಮಂತ ಅರಸರುಗಳಿಗೆ ತಿಳಿಯಪಡಿಸುವಂತಹ ಒಂದು ಪ್ರಥಮ ಪ್ರಯತ್ನವಾಗಿತ್ತು. ಅರಸನು ಸಭಾಪ್ರವೇಶ ಮಾಡಿದ ಕೂಡಲೆ ಹತ್ತೆಂಟು ಸೀಮೆಗಳ ಅಮಲದಾರರು, ಅಂಗರಕ್ಷಕರು, ಬೊಕ್ಕಸದವರು, ಕೋಶಾಧಿಕಾರಿಗಳು, ಗುರಿಕಾರರು, ಬಿಡದಿ ಗುರಿಕಾರರು, ಪಪುಜಿನ ಜಮಾದಾರರು, ಪಾಳೆಯಗಾರರು, ಕೊತ್ವಾಲರು, ಚೋಪದಾರರು ತಮ್ಮ ತಮ್ಮ ಆಸನಗಳಿಂದ ಎದ್ದು ರಾಜನಿಗೆ ಮರ್ಯಾದೆಯನ್ನು ಸಲ್ಲಿಸುತ್ತಿದ್ದರು.[೧೧೯]

ಮೈಸೂರು ರಾಜ್ಯದ ಮೂಲಸ್ಥಾಪಕ ಯದುರಾಯನಾದರು ಮೈಸೂರಿನ ಸ್ವತಂತ್ರ ಸ್ಥಾಪಕನಾದ ರಾಜಒಡೆಯರ್ ತಮ್ಮ ಆಡಳಿತದ ಕಾಲದಲ್ಲಿ ವಿಜಯದಶಮಿಯ ದಿನದಂದು ಸೈನ್ಯದ ಪ್ರದರ್ಶನವನ್ನು ಪ್ರಥಮ ಬಾರಿಗೆ ಕ್ರಿ.ಶ. ೧೬೧೦ರಲ್ಲಿ ರಾಜ್ಯದ ಪ್ರಜೆಗಳಿಗಾಗಿ ಏರ್ಪಡಿಸಲಾಯಿತು. ಆದರೆ ಅರಸನು ಸಕಲ ವಿದ್ಯೆಗಳಲ್ಲಿ ಪಾರಂಗತನಾಗಿದ್ದು ಸ್ವತಃ ಯುದ್ಧಗಳಲ್ಲಿ ಭಾಗವಹಿಸಿ ಸೈನಿಕರನ್ನು ಹುರಿದುಂವಿಸುತ್ತಿದ್ದರು. ರಣಧೀರ ಕಂಠೀರವ ನರಸರಾಜ ಒಡೆಯರು ಮೂಲತಃ ಜಟ್ಟಿಯಾಗಿದ್ದು ಕುಸ್ತಿಯಲ್ಲಿ ಅವರನ್ನು ಸೋಲಿಸಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಕಂಟಿಯ ಜಟ್ಟಿಯನ್ನು ಸೋಲಿಸಿದ್ದೇ ಇದಕ್ಕೊಂದು ಉತ್ತಮ ನಿದರ್ಶನ. ಅಲ್ಲದೆ ಬಿಜಾಪುರದ ಸೈನ್ಯ ಮೈಸೂರಿನ ಮೇಲೆ ದಾಳಿಮಾಡಿದಾಗ ಇವರು ಸೈನಿಕರು ತಮ್ಮ ಪ್ರಾಣವನ್ನು ಲೆಕ್ಕಿಸದೆ ಹೋರಾಡುವಂತೆ ಪ್ರೋತ್ಸಾಹಿಸಿ ಶತ್ರುಗಳನ್ನು ಸೋಲಿಸಲು ಕಾರಣರಾದರು. ಅಲ್ಲದೆ ರಣಧೀರ ಕಂಠೀರವ ನರಸರಾಜ ಒಡೆಯರು ಸೈನ್ಯದಲ್ಲಿ ಶಿಸ್ತನ್ನು ಹಾಗೂ ಹೋರಾಟದ ಮನೋಭಾವವನ್ನು ಹೆಚ್ಚಿಸಿದರು. ಮುಂದೆ ಚಿಕ್ಕದೇವರಾಜ ಒಡೆಯರು ಯುದ್ಧದಲ್ಲಿ ಮಡಿದ ಸೈನಿಕರ ಹೆಂಡತಿ ಮಕ್ಕಳಿಗೆ ರಕ್ತದ ಕೊಡುಗೆ ಎಂಬುದಾಗಿ ಭೂಮಿಯನ್ನು ಉಂಬಳಿಯಾಗಿ ನೀಡಿದರು.[೧೨೦] ಚಿಕ್ಕದೇವರಾಜ ಒಡೆಯರು ತಾವು ಅಧಿಕಾರಕ್ಕೆ ಬರುವುದಕ್ಕಿಂತ ಮುಂಚೆ ಗರಡಿಯಲ್ಲಿ ಅಂಗ ಸಾಧನೆಯಲ್ಲಿ ತೊಡಗಿದರು. ಪ್ರಮುಖವಾಗಿ ಕುಸ್ತಿಯ ಪಟ್ಟುಗಳನ್ನು ಅರಿಯುವುದು ಅತ್ಯವಶ್ಯಕವಾಗಿದ್ದಿತು. ದೇಹಬಲದಿಂದ ಮಾತ್ರ ಶತ್ರುಗಳನ್ನು ಹಿಮ್ಮೆಟ್ಟಿಸುವುದು ಸಾಧ್ಯವೋ ಹಾಗೆಯೇ ಮಾನಸಿಕವಾಗಿ ತಯಾರಾಗುವಂತೆ ಮಾಡಲು ಈ ಗರಡಿ ಮನೆಗಳು ಕೂಡ ಸಹಕಾರಿಯಾಗಿದ್ದವು.[೧೨೧] ಅದೇ ರೀತಿಯಾಗಿ ಹೈದರ್ ಅಲಿಯು ಕೂಡ ಬೆಂಗಳೂರಿನ ಅರಳೆಪೇಟೆಯ ಗರಡಿ ಮನೆಯಲ್ಲಿ ಕುಸ್ತಿ, ಲಾಠಿವರಸೆಗಳಂತಹ ಸಮರೋಚಿತವಾದ ಅಂಗಸಾಧನೆಗಳನ್ನು ಕಲಿತುಕೊಂಡು ಕಟ್ಟುಮಸ್ತಾದ ಆಳಾಗಿ ರೂಪುಗೊಂಡನು.[೧೨೨] ದೇವನಹಳ್ಳಿಯ ಮುತ್ತಿಗೆಯಲ್ಲಿ ಮೈಸೂರು ಸೈನ್ಯವು ವಿಜಯಿಸಾದಾಗ ಹೈದರನು ೫೦ ಅಶ್ವಪಡೆ ಮತ್ತು ೨೦೦ ಕಾಲಾಳು ಪಡೆಯ ಮುಖ್ಯಸ್ಥನಾದಾಗ ತನ್ನ ಜೊತೆಯಲ್ಲಿ ಗರಡಿಯಲ್ಲಿ ಸಾಧನೆಯಲ್ಲಿ ತೊಡಗಿದ್ದ ಪೈಲ್ವಾನರನ್ನೆಲ್ಲಾ ಸೈನ್ಯದಲ್ಲಿ ಸೇರಿಸಿಕೊಂಡನು.

ಚಾಮರಾಜ ಒಡೆಯರ ಕಾಲದಲ್ಲಿ ಮೈಸೂರು ಸೈನ್ಯವು ಪ್ರತಿದಿನ ಕವಾಯತಿಗಾಗಿ ಶ್ರೀರಂಗಪಟ್ಟಣದ ಕೋಟೆಯ ಹೊರಗಡೆಯಿದ್ದ ಮೈದಾನಕ್ಕೆ ಪ್ರತಿ ಶುಕ್ರವಾರ ಎರಡು ಹರಿದಾರಿಯಷ್ಟು ದೂರ ಸಾಗಿ ಮತ್ತೆ ವಾಪಸ್ಸಾಗುತ್ತಿತ್ತು.[೧೨೩] ಅಂದರೆ ಸೈನ್ಯದ ಕವಾಯತಿಗಾಗಿ ಒಂದು ದಿನವನ್ನು ನಿಗದಿಪಡಿಸಲಾಗಿತ್ತು. ಅದೇ ದಿನ ಮಾತ್ರ ಕವಾಯತುಗಳು ನಡೆಯುತ್ತಿದ್ದವು. ಹಿಂದುಗಳಿಗೆ ಶುಕ್ರವಾರವು ಶುಭದಿನವಾದ್ದರಿಂದ ಆ ದಿನವೇ ಅಂಗಸಾಧನೆಗಾಗಿ ಮತ್ತು ಕವಾಯಿತುಗಳಿಗೆ ಅವಶ್ಯಕವಾಗಿದ್ದವು. ಅಲ್ಲದೆ ಬೇಟೆಯು ಕೂಡ ಸೈನಿಕರ ಮತ್ತು ಅರಸನ ಗುರಿಯನ್ನು ಪ್ರದರ್ಶಿಸುವಂತಹ ಒಂದು ಪ್ರಮುಖ ಹವ್ಯಾಸವಾಗಿತ್ತು. ಬೇಟೆಯಲ್ಲಿ ಪರಿಣಿತಿಯನ್ನು ಸಾಧಿಸಲು ಚಿಕ್ಕ ವಯಸ್ಸಿನಲ್ಲಿಯೇ ಆನೆ, ಕುದುರೆಗಳ ಸವಾರಿಯನ್ನು ಶಸ್ತ್ರವಿದ್ಯೆಯನ್ನು ಅತ್ಯವಶ್ಯಕವಾಗಿ ಕಲಿಯಲೇಬೇಕಿತ್ತು. ಅರಸನಿಗೆ ಬೇಟೆಯನ್ನು ಏರ್ಪಡಿಸಲು ವನಪಾಲಕ ಎಂಬ ಅಧಿಕಾರಿಯು ಸಹಕರಿಸುತ್ತಿದ್ದನು.[೧೨೪] ತರಿಕೆರೆಯ ಪಾಳೆಯಗಾರರ ಸರಜಾಹನುಮನಾಯಕನು ಬೇಟೆಗೆ ಹೊರಡುವ ಸಮಯದಲ್ಲಿ ಹಸಿರು ವಸ್ತ್ರಗಳನ್ನು ತೊಟ್ಟು ಖಡ್ಗ, ಗುರಾಣಿಗಳನ್ನು ಹಿಡಿದು ತುಳುವ, ತುರುಕ, ಮರಾಠ ಅಲ್ಲದೆ ಬೇಡ ಪಡೆಗಳನ್ನು ಹೊಂದಿದ್ದ ರಾಜರನ್ನು ಕರೆದುಕೊಂಡು ಬೇಟೆಗೆ ಹೊರಡುತ್ತಿದ್ದನು.[೧೨೫] ಇನ್ನು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಬ್ರಿಟಿಷ ಅಧಿಕಾರಿಗಳು ಮೈಸೂರಿಗೆ ಭೇಟಿನೀಡಿದ ಸಂದರ್ಭದಲ್ಲಿ ಅವರೊಂದಿಗೆ ನುರಿತ ಮತ್ತು ಅರಣ್ಯದ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಹೊಂದಿರುತ್ತಿದ್ದ ಸೈನಿಕರು ಬಂದೂಕು, ಭಲ್ಲೆಗಳು ಕಹಳೆ ಮೊದಲಾದ ಯುದ್ಧೋಪಕರಣಗಳ ಜೊತೆಗೆ ಶಸ್ತ್ರಸಜ್ಜಿತರಾಗಿ ಹೊರಡುತ್ತಿದ್ದರು.

**೩.೬.೫. ರಾಯಭಾರಿಗಳು**

ರಾಜ್ಯಾಡಳಿತದ ಅಂಶಗಳಲ್ಲಿ ರಾಯಬಾರತ್ವವೂ ಒಂದು. ಏಕೆಂದರೆ ರಾಜ್ಯದ ಸುತ್ತಮುತ್ತಲಿನ ರಾಜ್ಯಗಳ ಯುದ್ಧ ಸಿದ್ಧತೆ, ಸೈನ್ಯ, ರಾಜಕೀಯ ಸ್ಥಿತಿಗತಿಗಳು ಮತ್ತು ಶತ್ರುಗಳ ಆಕ್ರಮಣಗಳು ಮುಂತಾದವುಗಳನ್ನು ಗೂಢಾಚಾರರು ಮತ್ತು ರಾಯಭಾರಿಗಳ ಮೂಲಕ ಅರಿಯುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಿದ್ದರು. ರಾಯಭಾರತ್ವವು ರಾಜಕೀಯ ಪರಿಭಾಷೆಯಾಗಿದೆ. ಕೌಟಿಲ್ಯನು ತನ್ನ ಅರ್ಥಶಾಸ್ತ್ರ ಕೃತಿಯಲ್ಲಿ ರಾಯಭಾರತ್ವವನ್ನು ನಯ ಎಂದು ಕರೆದರೆ ನಂತರದ ದಿನಗಳಲ್ಲಿ ಸಂಧಿವಿಗ್ರಹಿದೂತ ಗೂಢಾಚಾರ, ರಾಯಭಾರಿ ಎಂದು ಕರೆಯಲಾಗಿದೆ. ಅರಸನ ಮಂತ್ರಿಮಂಡಲದಲ್ಲಿ ಸಂಧಿವಿಗ್ರಹಿ ಅಥವಾ ರಾಯಭಾರಿಯು ಒಬ್ಬ ಪ್ರಮುಖ ಅಧಿಕಾರಿಯಾಗಿದ್ದನು. ಅರಸನು ತನ್ನ ಆಡಳಿತದ ಉದ್ದೇಶಗಳು ಸಫಲಗೊಳ್ಳಲು ಉಪಯೋಗಿಸುವ ಚತುರೋಪಾಯಗಳು ಮುಖ್ಯವಾಗಿಸಿ ಅವುಗಳೆಂದರೆ ಸಾಮ, ದಾನ, ಭೇದ ಮತ್ತು ದಂಡಗಳು. ಇವುಗಳಲ್ಲಿ ಮೊದಲಿಗೆ ಮೂರು ಉಪಾಯಗಳು ರಾಯಭಾರತ್ವಕ್ಕೆ ಸಂಬಂಧಿಸಿವೆ. ಯುದ್ಧ ಮಾಡುವ ಇಲ್ಲವೆ ತಡೆಯುವ ಶಕ್ತಿ ರಾಯಭಾರತ್ವಕ್ಕಿದೆ. ಕೆಲವೊಮ್ಮೆ ಈ ಅಧಿಕಾರವನ್ನು ಸ್ವಾರ್ಥಕ್ಕಾಗಿ ದುರುಪಯೋಗ ಪಡಿಸಿಕೊಂಡು ಯುದ್ಧಕ್ಕೆ ನಾಂದಿಹಾಡಿದ ಉದಾಹರಣೆಗಳಿವೆ. ಈ ಪದವಿಗೆ ವಿಶೇಷ ಗೌರವವನ್ನು ರಾಜ್ಯ ಹಾಗೂ ಹೊರರಾಜ್ಯಗಳಲ್ಲೂ ನೀಡಲಾಗುತ್ತಿತ್ತು. ಆದ್ದರಿಂದ ಈ ಹುದ್ದೆಗೆ ನೇಮಕವಾಗುವ

ವ್ಯಕ್ತಿಗಳು ಕೆಲವು ಮುಖ್ಯ ಅರ್ಹತೆಗಳನ್ನು ಹೊಂದಿರಬೇಕಾಗಿತ್ತು. ಈತ ಮೇಧಾವಿ, ವಿದ್ವಾಂಸ, ಆಡಳಿತ ಚತುರನೂ ಆಗಿರಬೇಕು. ಅಲ್ಲದೆ ತನಗೆ ಒಪ್ಪಿಸಿದ ಕಾರ್ಯಗಳನ್ನು ಪರಿಪೂರ್ಣವಾಗಿ ಮುಗಿಸಲು ಪ್ರಾಣದ ಹಂಗನ್ನು ತೊರೆಯಲು ಸಿದ್ಧನಿರಬೇಕಿತ್ತು. ಅಗತ್ಯವಾದರೆ ಹಿಂಸೆ, ಹತ್ಯೆಗಳಂತಹ ಕಾರ್ಯಗಳಿಗೆ ಮುಂದಾಗಬೇಕಿತ್ತು. ಸಕಾಲದಲ್ಲಿ ಜಾಗರೂಕನಾಗಿರಬೇಕಾದದ್ದು ಅತ್ಯಂತ ಅವಶ್ಯಕವಾಗಿತ್ತು. ಅನೇಕ ದೇಶ, ಭಾಷೆ, ಲಿಪಿಗಳನ್ನು ಬಲ್ಲವನು, ಯೋಗ್ಯನೂ, ಸ್ಪಷ್ಟವಾಗಿ ಓದುವ ಮತ್ತು ಬರೆಯುವವನು ಆಗಿರಬೇಕು. ಈತನಿಗೆ ಶತ್ರುಗಳ ಎಲ್ಲೆ, ಕೋಟೆಕೊತ್ತಲ, ಕಾಲ್ದಳ, ಅಶ್ವದಳ, ಗಜದಳ, ಫಿರಂಗಿದಳಗಳು, ಸೈನ್ಯದ ಗಣತಿ, ರಾಜರ ವಸತಿ ನೆಲೆ, ಆಹಾರ ವಿತರಣೆ, ರಾಜ್ಯದ ಆದಾಯ, ಧಾರ್ಮಿಕ ಒಡಂಬಡಿಕೆಗಳು, ರಾಜ್ಯದ ಲೆಕ್ಕಪತ್ರಗಳು, ಕಂದಾಯ, ಶತ್ರುಗಳಿಗಿರುವ ವೈರಿಗಳು ಹೀಗೆ ಎಲ್ಲ ಬಗೆಯ ವಿವರಗಳ ಅರಿವು ರಾಯಭಾರಿ ಹೊಂದುವುದು ಅವಶ್ಯಕವಾಗಿತ್ತು. ರಾಯಭಾರತ್ವಕ್ಕೆ ಸಂಬಂಧಿಸಿದ ಮತ್ತೊಂದು ಶಾಖೆಯೆಂದರೆ ಗೂಢಾಚಾರರದು, ಇವರೂ ಕೂಡ ಪ್ರಾಚೀನ ಕಾಲದಿಂದಲೂ ರಾಜ್ಯಾಡಳಿತದಲ್ಲಿ ರಾಯಭಾರಿಗಳಂತೆಯೇ ಪ್ರಮುಖ ಪಾತ್ರವಹಿಸಿರುವುದನ್ನು ಕಾಣಬಹುದು. ಇವರು ಸಹ ರಾಯಭಾರಿಗಳ ಹೊಂದಿದ್ದ ಅರ್ಹತೆಗಳನ್ನೇ ಹೊಂದಿರುತ್ತಿದ್ದರು. ಆದ್ದರಿಂದ ಇವರನ್ನು 'ಅರಸನ ಚಲಿಸುವ ಕಣ್ಣುಗಳು' ಎಂದು ಬಣ್ಣಿಸಲಾಗಿದೆ. ರಾಜ್ಯದ ಒಳಗೆ ಮತ್ತು ಹೊರಗೆ ನಡೆಯುವ ಎಲ್ಲ ಬಗೆಯ ವ್ಯವಹಾರ, ವಿದ್ಯಮಾನಗಳು, ಚಲನವಲನಗಳನ್ನು ತಿಳಿದು ಗುಪ್ತವಾಗಿ ರಾಜನಿಗೆ ತಲುಪಿಸುತ್ತಿದ್ದರು. ಸಮಯ ಸಂದರ್ಭಗಳಗೆ ಅನುಸಾರವಾಗಿ ಎಲ್ಲಾ ರೀತಿಯ ತಂತ್ರಗಳನ್ನು ಬಳಸಿ, ಅಗತ್ಯವಾದ ಉಡುಪುಗಳನ್ನು ಧರಿಸಿ ವಿಷಯಗಳನ್ನು ಸಂಗ್ರಹಿಸುವುದು ಇವರ ಕರ್ತವ್ಯವಾಗಿದ್ದಿತು.[೧೨೭]

ಕಂಠೀರವ ನರಸರಾಜ ಒಡೆಯರ ಕಾಲಾವಧಿಯಲ್ಲಿ ಮೈಸೂರಿನ ಮೇಲೆ ಅಧಿಕವಾದ ದಾಳಿಗಳು ನಡೆದವು. ಈ ಕಾರಣಕ್ಕಾಗಿ ಕಂಠೀರವ ನರಸರಾಜ ಒಡೆಯರು ಗೂಢಾಚಾರರನ್ನು ನೇಮಿಸಿದರು. ಚಿಕ್ಕದೇವರಾಜ ಒಡೆಯರು ತಮ್ಮ ಆಳ್ವಿಕೆಯು ಸರಾಗವಾಗಿ ನಡೆಯಲು ಮತ್ತು ರಾಜ್ಯದ ವಿವಿಧೆಗಳಿಡಿಗಳಿಂದ ವರ್ತಮಾನವು ಶೀಘ್ರವಾಗಿ ಹರಿದುಬರಲು ಗಡಿಯೊಂದಕ್ಕೆ ತಲಾ ಒಬ್ಬೊಬ್ಬ ಅಂಚೆ ಹರಿಕಾರರನ್ನು ನೇಮಿಸಿದರು. ಈ ಅಂಚೆಹರಿಕಾರನ ಮಾದರಿಯಲ್ಲೇ ಓಲೆಕಾರರು ಕೂಡ ನೇಮಕವಾದರು. ಪ್ರತಿ ಆರುಜನ ಓಲೆಕಾರರಿಗೆ ಒಬ್ಬೊಬ್ಬ ದಫೇದಾರನಿದ್ದನು.[೧೨೮] ಇದರಿಂದ ರಾಜ್ಯದ ವಿವಿಧ ಮೂಲೆಗಳಿಂದ ಶೀಘ್ರವಾಗಿ ಘಟನೆಗಳು ಹಾಗೂ ವಿದ್ಯಮಾನಗಳನ್ನು ಕುರಿತ ಕಾರಣ ಪರಿಣಾಮಗಳನ್ನು ಕುರಿತು ತಿಳಿಯಲು ಬಹು ಸುಲಭವಾಯಿತು. ಚಿಕ್ಕ ದೇವರಾಜ ಒಡೆಯರು ತಮ್ಮ ಚಾಣಾಕ್ಷತೆಯ ಬುದ್ಧಿಯಿಂದ ಮೊಘಲರ ದಾಳಿಯನ್ನು ತಡೆಯುವ ಸಲುವಾಗಿ ಕರಣಿಕ ಲಿಂಗಣ್ಣಯ್ಯನನ್ನು ದಿಲ್ಲಿಯ ಬಾದಶಹನಾಗಿದ್ದ ಔರಂಗಜೇಬನ ಆಸ್ಥಾನಕ್ಕೆ ರಾಯಭಾರಿಯನ್ನಾಗಿ ಕಳುಹಿಸಿದರು. ಕರಣಿಕ ಲಿಂಗಣ್ಣಯ್ಯನು ಸಂಸ್ಥಾನದ ವಕೀಲಿತನಕ್ಕೆ ನೇಮಕವಾಗಿ ದಿಲ್ಲಿ ಬಾದಷಹರ ಮಾನ ಮತ್ತು ಯೋಗ್ಯತೆಗೆ ಅನುಗುಣವಾಗಿ ವಸ್ತ್ರಾಭರಣಗಳು ಮತ್ತು ಕುಶಲ ಪತ್ರವನ್ನೂ ತೆಗೆದುಕೊಂಡು ದಿಲ್ಲಿಯ ಒಂದು ಗಾವುದ ದೂರದಲ್ಲಿ ಇಳಿದುಕೊಂಡು

ಅಲ್ಲಿನ ವಜೀರ ಮುಂತಾದ ಜನಗಳಿಗೆ ದೊರೆಗಳವರ ಅಪ್ಪಣೆಯಂತೆ ವಸ್ತ್ರವನ್ನು ಕೊಟ್ಟು ತಾನು ಬಂದಿರುವ ವರ್ತಮಾನವನ್ನು ಬಾದಷಹನಾದ ಔರಂಗಜೇಬನಿಗೆ ತಿಳಿಸುವಂತೆ ಸೇವಕರಿಗೆ ಹೇಳಿ ಕಳುಹಿಸಿದನು. ಸೇವಕರು ಕರಣಿಕ ಲಿಂಗಯ್ಯನ ವಿಷಯವನ್ನು ಬಾದಷಹನ ಬಳಿ ಪ್ರಸ್ತಾಪಿಸಿದ ಕೂಡಲೇ ಅವನನ್ನು ಆಸ್ಥಾನಕ್ಕೆ ಕರೆಸಿ ದರಬಾರಿನಲ್ಲಿ ಭೇಟಿಮಾಡಲು ತಿಳಿಸಿದರು. ಮಾರನೆಯ ದಿನ ಕಳುಹಿಸಿದ್ದ ನಿರಾಜಿಯ ಖಿಲ್ಲತ್ತು, ನವರತ್ನಾಭರಣ ಮುಂತಾದ ಪದಾರ್ಥಗಳು ಕುಶಲ ಪತ್ರಿಕೆಗಳನ್ನೂ ರಾಯಭಾರಿಯಾಗಿದ್ದ ಲಿಂಗಣ್ಣನು ಒಪ್ಪಿಸಿದನು. ಕೂಡಲೇ ಬಾದಷಾಹರು ರಾಯಭಾರಿಗಳ ಯೋಗಕ್ಷೇಮವನ್ನು ವಿಚಾರಿಸಿದರು. ಕರಣಿಕ ಲಿಂಗಣ್ಣನು ಮರಾಠರ ದಾಳಿಗಳ ಬಗ್ಗೆ ಪ್ರಸ್ತಾಪಿಸಿದಾಗ ಮೈಸೂರಿನ ದೊರೆಗಳಿಗೆ ಅಗತ್ಯ ಸಂದರ್ಭಗಳಲ್ಲಿ ಸಹಾಯವನ್ನು ಮಾಡಲು ನಮಗೆ ಯಾವುದೇ ಅಭ್ಯಂತರವಿಲ್ಲ.[೧೨೯] ಅಲ್ಲದೆ ನಿಮಗೆ ಯಾವ ಶತ್ರುಗಳಿಂದಲೂ ತೊಂದರೆಯಾಗದು ಎಂದು ಅಭಯವನ್ನು ನೀಡಿದರು. ಔರಂಗಬೇಬನು ತನ್ನ ಜೊತೆ ಕುಶಾಗ್ರಮತಿಯಿಂದ ಒಪ್ಪಂದ ಮಾಡಿಕೊಂಡ ಚಿಕ್ಕದೇವರಾಜ ಒಡೆಯರಿಗೆ 'ರಾಜಾ ಜಗದೇವ್' ಎಂಬ ಬಿರುದನ್ನು ಕೊಟ್ಟು ಶಿಖಾಸನದಲ್ಲಿರಿಸುವಂತೆ ರಾಜಾಚಿಕ್ಕದೇವರಾಜ್ ಮಹಮದ್‌ಷಾಯಿ[೧೩೦] ಎಂಬ ಮೊಹರನ್ನು ಒಂದು ಮೈಸೂರಿಗೂ ಮತ್ತೊಂದು ದಿಲ್ಲಿಯಲ್ಲಿರುವಂತೆಯೂ ಏರ್ಪಾಡು ಮಾಡಲಾಯಿತು.ರಾಯಭಾರಿಯಾದ ಕರಣಿಕ ಲಿಂಗಯ್ಯನಿಂದ ಮೊಗಲರು 'ರಾಜಾ ಜಗದೇವ್' ರಾಜಾ ಚಿಕ್ಕದೇವರಾಜ್ ಮಹಮದ್ ಷಾಯಿ' ಎಂಬ ಬಿರುದುಗಳ ಜೊತೆಗೆ ಮೈಸೂರು ಸಂಸ್ಥಾನದ ಅರಮನೆಯ ಭಟರುಗಳು 'ಶ್ರೀಮನ್ಮಹಾರಾಜ ರಾಜಾಧಿರಾಜ, ರಾಜಪರಮೇಶ್ವರ, ಪ್ರೌಢ ಪ್ರತಾಪಾಪ್ರತಿಮ ಜಗದೇಕವಿರ, ಭುವನೈಕಶೂರ, ರಾಗದ್ವೇಷರಹಿತ, ದುಷ್ಟನಿಗ್ರಾಹಕ, ಶಿಷ್ಟಪರಿಪಾಲಕ, ಬೃಹಸ್ಪತಿ ಸಮಾನ ನಿಪುಣ, ಮಹೇಂದ್ರ ಸಮವಿಕ್ರಮ, ಮಹೇಶ್ವರ ಸಮಾನ, ಮಹಾಪ್ರತಾಪ ತಾರತಮ್ಯವಿಚಕ್ಷಣದುರೀಣಾ, ರಾಜಸತಾಮಸ ಸಾತ್ವಿಕತ್ರೈ ಗುಣ್ಯಪರಿಜ್ಞಾನ ವಿಚಲಕ್ಷಣ, ಹಸ್ತಪಟದ ಭೇರೀ, ಮೃದಂಗ, ಶಂಖ, ಕಹಳು, ವೀಮಾವೇಮು ತಂತ್ರೀಗುಣಲಕ್ಷಣ ಪ್ರಜ್ಞಾನ, ವೀರನರಪತಿ, ಶೂರಾಗ್ರಗಣ್ಯ, ಮಲೆತವರಗಂಡ, ಅರಿಹರಭೇರುಂಡ, ಕರ್ನಾಟಕದೇಶ ಮಂಡನ, ಮೈಸೂರು ಪುರಾದಿರಾಜವಂಶೋತ್ತಸ, ಅರ್ಥಿಜನಕಲ್ಪಶಾಖಿ, ಪ್ರತ್ಯರ್ಥಿವ್ರಜಸಪಕ್ಷಪರ್ವತವಜ್ರ, ರಾಜಾ ಕುಲಾಬ್ಧಿ ಶಶಾಂಕ, ಧರಣೀ ವರಹಾದಿ ಬಿರುದಾಂಕೆ, ಅಭಯ ಪ್ರಧಾನಾಧೀಶ್ವರ[೧೩೧] ಎಂಬಿತ್ಯಾದಿ ಬಿರುದುಗಳಿಂದ ಹೊಗಳಿದರು.

ಚಿಕ್ಕದೇವರಾಜ ಒಡೆಯರು ಬೇಹಿನ ಚಾವಡಿ ಎಂಬ ಇಲಾಖೆಯನ್ನು ಸ್ಥಾಪಿಸಿ ರಾಜ್ಯದ ಲಳ ಗಡಿಗಳಲ್ಲಿಯೂ ನಡೆದ ವರ್ತಮಾನಗಳಿಗೆ ತಕ್ಷಣದಲ್ಲಿಯೇ ಅಂಚೆಯ ಹರಿಕಾರನು ಬರೆದ ಅರ್ಜಿಯನ್ನು ಜಾಗ್ರತೆಯಾಗಿ ತಿಳಿಸುವಂತೆಯೂ ಅರಮನೆಯಿಂದ ಗಡಿಗಳಿಗೆ ಬರೆಸಿದ ನಿರೂಪವನ್ನು ಕಳುಹಿಸಲು ಸಹಾಯವಾಗುವಂತೆ ಮಾಡಿದರು.

ಮೈಸೂರು ರಾಜ್ಯವು ದಳವಾಯಿಗಳ ಆಳ್ವಿಕೆಯಲ್ಲಿ ಸಿಲುಕಿಕೊಂಡಾಗ ಹೈದರನು ಸೈನಿಕನಾದರೂ ಕೂಡ ಇಮ್ಮಡಿ ಕೃಷ್ಣರಾಜ ಒಡೆಯರು ಮತ್ತು ದಳವಾಯಿಗಳ ಮಧ್ಯೆ

ರಾಯಭಾರತ್ವವನ್ನು ಮಾಡಿದನು. ಅದಕ್ಕೆ ಕಾರಣ ಹೈದರನ ಚಾಕಚಕ್ಯತೆ ಮತ್ತು ಅವನ ದೂರದೃಷ್ಟಿತ್ವವೆಂದು ಹೇಳಬಹುದು. ದೊರೆಗಳಾದ ಇಮ್ಮಡಿ ಕೃಷ್ಣರಾಜ ಒಡೆಯರು ಮತ್ತು ದಳವಾಯಿಗಳು ಮನಸ್ತಾಪವಾದಾಗ ಹೈದರನು ದಳವಾಯಿ ದೇವರಾಜಯ್ಯ ಮತ್ತು ಕರಾಚೂರಿ ನಂಜರಾಜಯ್ಯನ ಮೇಲಿದ್ದ ಮನಸ್ಥಾಪವನ್ನು ಬಗೆಹರಿಸಲು ಪ್ರಯತ್ನಿಸಿ ಅದರಲ್ಲಿ ಅತ್ಯಂತ ಯಶಸ್ವಿಯಾದನು. ಮರಾಠರು ಶ್ರೀರಂಗಪಟ್ಟಣದ ಮೇಲೆ ದಾಳಿ ಮಾಡಿದಾಗ ಮರಾಠರ ಗೋಪಾಲರಾಯನು ೫೬ಲಕ್ಷರೂಗಳನ್ನು ಕೊಟ್ಟರೆ ಮಾತ್ರ ಹಿಂತಿರುಗಿ ಹೋಗುವುದಾಗಿಯೂ ಹಾಗೂ ದಾಳಿಯನ್ನು ಹಿಂತೆಗೆಯುವಂತೆ ಹೇಳಿಕೊಂಡಾಗ ಹೈದರನು ಇಲ್ಲೂ ಕೂಡ ಯುದ್ಧದ ಜೊತೆಗೆ ರಾಯಭಾರತ್ವವನ್ನು ಯಶಸ್ವಿಯಾಗಿ ನಿರ್ವಹಿಸಿದನು.[೧೩೩] ರಾಜ್ಯಕ್ಕೆ ಯಾವುದೇ ಅಪಾಯವಾಗದಂತೆ ಮರಾಠರನ್ನು ನಿಗ್ರಹಿಸು ಎಂದು ಅಪ್ಪಣೆ ನೀಡಿದಾಗ ರಾಯಭಾರತ್ವವನ್ನು ಯಶಸ್ವಿಯಾಗಿ ನಿರ್ವಹಿಸಿ ಮೈಸೂರು ರಾಜ್ಯಕ್ಕಿದ್ದ ಗಂಡಾಂತರವನ್ನು ದೂರಮಾಡಿದನು.

ಬಿದನೂರಿನ ಅಂತಃಕಲಹವು ಅರಸನ ದತ್ತುಮಗ ಚನ್ನಬಸವಯ್ಯನಿಗೂ ಮತ್ತು ಅವನ ಸಾಕುತಾಯಿಯಾದ ವೀರಮ್ಮ ರಾಣಿಗೂ ಇದ್ದ ಪರಸ್ಪರ ಕಲಹದ ಮರ್ಮವನ್ನು ತಿಳಿದು ಬಿದನೂರನ್ನು ವಶಮಾಡಿಕೊಳ್ಳಲು ಪ್ರಯತ್ನಿಸಿ ಯಶಸ್ವಿಯಾದನು ಕ್ರಿ.ಶ.೧೭೭೩ರಲ್ಲಿ ಪುಣೆಯ ಮಾಧವರಾಯನು ತೀರಿಹೋದ ನಂತರ ಅವನ ತಮ್ಮ ನಾರಾಯಣರಾಯನು ಆಳ್ವಿಕೆ ಕಾಲದಲ್ಲಿ ಅವನ ಚಿಕ್ಕಪ್ಪ ರಘೋಬನು ಶ್ರೀರಂಗಪಟ್ಟಣದ ಮೇಲೆ ಆಕ್ರಮಣ ಮಾಡಲು ಯೋಜನೆಯನ್ನು ಹಾಕಿಕೊಂಡನು. ಹೈದರನು ಪ್ರಧಾನ ವೆಂಕಪ್ಪಯ್ಯ, ಅಪ್ಪಾಜಿರಾವ್ ಮೊದಲಾದವರನ್ನು ತನ್ನ ರಾಯಬಾರಿಗಳನ್ನಾಗಿ ಮರಾಠರ ರಘೋಜಿಯ ಹತ್ತಿರ ಕಳುಹಿಸಿದರು. ಅಗತ್ಯ ಸಂದರ್ಭಗಳಲ್ಲಿ ಹೈದರ್ ನವಾಬರು ಫೌಜುಸಹಿತವಾಗಿ ಬರಬೇಕೆಂದು ಕಾಗದವನ್ನು ಬರೆದರು. ಪ್ರಧಾನಿ ವೆಂಕಪ್ಪಯ್ಯನು ರಘೋಬನ ಕಾಗದವನ್ನು ಸಿರಾದಲ್ಲಿದ್ದ ವೆಂಕಪ್ಪಯ್ಯನ ಕಡೆಯ ಭಾವಾಜಿಸಿಂಧ್ಯನಿಗೆ ನೀಡಿದಾಗ ಅವನು ಆ ಕಾಗದವನ್ನು ಮಾನ್ಯಮಾಡಲಿಲ್ಲ. ಇದನ್ನು ತಿಳಿದ ಹೈದರನು ಸಿರಾದ ಮೇಲೆ ಟಿಪ್ಪುವಿನ ನೇತೃತ್ವದಲ್ಲಿ ಸೈನ್ಯವನ್ನು ಕಳುಹಿಸಿದರು.[೧೩೪] ಅಂಚೆ ಇಲಾಖೆಯಲ್ಲಿ ಸೇವೆಸಲ್ಲಿಸುತ್ತಿದ್ದ ಅಂಚೆಶಾಮಯ್ಯನು ಹೈದರ್ ಅಲಿಯ ಬಳಿಯಲ್ಲಿ ಸೇವೆಗೆ ಸೇರಿದ್ದ ಪೂರ್ಣಯ್ಯನವರ ಮೇಲೆ ಇಲ್ಲದ ಸುಳ್ಳು ಆರೋಪ ಪಟ್ಟಿಯನ್ನು ತಯಾರಿಸಿ ಒಂದುಲಕ್ಷದ ಹನ್ನೊಂದು ಸಾವಿರ ವರಹಗಳನ್ನು ದಂಡದ ರೂಪದಲ್ಲಿ ಕಟ್ಟಿಸಿದನು. ಅಲ್ಲದೆ ಪೂರ್ಣಯ್ಯನವರನ್ನು ಸೆರಮನೆಗೆ ಹಾಕುವ ಸಂದರ್ಭದಲ್ಲಿ ಬಚ್ಚೇರಾಯನೆಂಬ ಅಧಿಕಾರಿಯು ಪೂರ್ಣಯ್ಯನವರ ಮಾನದ ಮೇಲೆ ಕರುಣೆ ತೋರಿಸಿ ಬರಕ್ಕಿ ಶ್ರೀನಿವಾಸರಾಯರ ಮೂಲಕ ನವಾಬರಿಗೆ ತಿಳಿಸಿದಾಗ ಅವರಿಂದ ವಸೂಲಾಗಬೇಕಿದ್ದ ಹಣಕ್ಕೆ ಅನ್ನದಾನ ಸೆಟ್ಟಿ, ನರಸೆಟ್ಟಿಗಳು ಹಣವನ್ನು ಕೊಡಲು ಒಪ್ಪಿದ್ದರಿಂದ ಪೂರ್ಣಯ್ಯನವರು ಬಿಡುಗಡೆಯಾದರು.[೧೩೫]

ಹೈದರನು ತನ್ನ ಸೈನ್ಯದಲ್ಲಿ ಕ್ರಿ.ಶ.೧೭೮೦ರ ವೇಳೆಗೆ ಒಂದುಲಕ್ಷದ ನಾಲ್ಕು ಸಾವಿರ ಓಲೆಕಾರರು ಮತ್ತು ೮೦,೦೦೦ ಸೀಮೆಯ ಕಂದಾಚಾರ ಚಾವಡಿಯ ಸೈನಿಕರನ್ನು ನೇಮಿಸಿದ್ದನು.[೧೩೬]

ಕ್ರಿ.ಶ.೧೭೮೨ರಲ್ಲಿ ಹೈದರನು ಮರಣ ಹೊಂದಿದಾಗ ಪೂರ್ಣಯ್ಯನವರು ರಹಸ್ಯವಾಗಿ ಈ ವಿಷಯವನ್ನು ಓಲೆಕಾರರ ಮೂಲಕ ಟಿಪ್ಪು ಸುಲ್ತಾನನಿಗೆ ತಿಳಿಸಿದರು. ಹೈದರನು ಚಿತ್ರದುರ್ಗವನ್ನು ವಶಮಾಡಿಕೊಳ್ಳುವ ಸಂದರ್ಭದಲ್ಲಿ ಗೂಢಾಚಾರರಿಂದ ರಹಸ್ಯವಾಗಿ ಚಿತ್ರದುರ್ಗದ ಕಳ್ಳಮಾರ್ಗವನ್ನು ತಿಳಿಯಲು ಅರಮನೆಗೆ ಹಾಲುಮೊಸರು ಮಾರುವಳಿಂದ ತಿಳಿಯಲು ಆಕೆಗೆ ಆಮಿಷವನ್ನು ಒಡ್ಡಿ ಅವಳಿಂದ ಈ ರಹಸ್ಯ ಮಾರ್ಗವನ್ನು ತಿಳಿದುಕೊಳ್ಳಲಾಯಿತು.

ಖಾಸಾಚಾಮರಾಜ ಒಡೆಯರು ತಮ್ಮ ಮಾತೃಶ್ರೀಯವರಾದ ಲಕ್ಷ್ಮಮ್ಮಣ್ಣಿಯವರೊಡನೆ ಸಮಾಲೋಚನೆ ಮಾಡಿ ಬ್ರಿಟಿಷರೊಂದಿಗೆ ಒಪ್ಪಂದವನ್ನು ಮಾಡಿಕೊಂಡರು. ಟಿಪ್ಪು ಸುಲ್ತಾನನ ಮರಣದೊಂದಿಗೆ ತಾವು ರಾಜ್ಯವನ್ನು ಪುನಃ ತಮ್ಮ ಸುಪರ್ಧಿಗೆ ಪಡೆಯುವ ಸಲುವಾಗಿ ತಮ್ಮ ದಿವಾನರಾಗಿದ ಪೂರ್ಣಯ್ಯರೊಂದಿಗೆ ಗುಪ್ತ ಸಮಾಲೋಚನೆ ಮಾಡಿಕೊಳ್ಳಲಾಯಿತು. ಕ್ರಿ.ಶ. ೧೭೯೬ರಲ್ಲಿ ತಿರುಮಲಯ್ಯಂಗಾರನೆಂಬ ವಕೀಲನನ್ನು ಮದ್ರಾಸಿನ ಬ್ರಿಟಿಷರ ಕಂಪನಿಗೆ ಕಳುಹಿಸಲಾಯಿತು. ಸುಮಾರು ಮೂರುವರ್ಷಗಳ ಕಾಲ ಯಾರಿಗೂ ತಿಳಿಯದಂತೆ ಈ ನಿಯೋಗವು ನಡೆಯಿತು. ಆದರೆ ದಿವಾನ್ ಪೂರ್ಣಯ್ಯನು ಟಿಪ್ಪುವಿನ ರಹಸ್ಯವನ್ನು ಬ್ರಿಟಿಷರಿಗಾಗಲಿ, ಬ್ರಿಟೀಷರೊಂದಿಗಿನ ಒಪ್ಪಂದವನ್ನು ಟಿಪ್ಪುವಿಗಾಗಲಿ ತಿಳಿಯದಂತೆ ಅತ್ಯಂತ ಜಾಗರೂಕತೆಯಿಂದ ವ್ಯವಹರಿಸಿದಂತಹ ಕೀರ್ತಿ ಪೂರ್ಣಯ್ಯನವರಿಗೆ ಸಲ್ಲುತ್ತದೆ.[೧೩೭]

**೩.೭. ಸೈನಿಕರ ಸಾಮಾಜಿಕ ಜೀವನ**

ಮೈಸೂರಿನ ಒಡೆಯರ ಆಳ್ವಿಕೆಯ ಕಾಲದಲ್ಲಿ ಸೈನಿಕರು ರಾಜ್ಯ ರಕ್ಷಣೆಯ ಜೊತೆಗೆ ತಮ್ಮದೇ ಆದ ಸಾಮಾಜಿಕ ಜೀವನವನ್ನು ಹೊಂದಿದ್ದರು. ಇವರ ಜೀವನ ಶೈಲಿಯು ಗ್ರಾಮೀಣ ಭಾಗದ ಅನಕ್ಷರಸ್ಥ ಕುಟುಂಬಗಳಿಂದ ತುಂಬಿದ ಪದ್ಧತಿಯನ್ನು ಹೊಂದಿತ್ತು. ರಾಜ್ಯದ ಮೇಲಿನ ದಾಳಿ ಮತ್ತು ಆಕ್ರಮಣಗಳು ಅರಸನಷ್ಟೇ ಅಲ್ಲದೆ ಪ್ರತಿ ಸೈನಿಕನ ರೋಷ ಉಕ್ಕಿಸುವಂತಹ ಕಾರ್ಯವನ್ನು ಮಾಡುತ್ತಿದ್ದವು. ಇದು ಆತ್ಮಗೌರವ, ರಕ್ಷಣೆ ಮತ್ತು ಸ್ವಾತಂತ್ರ್ಯಗಳಿಗೆ ಯುದ್ಧಸಿದ್ಧತೆಗಳು ತ್ವರಿತವಾಗಿ ನಡೆಯುತ್ತಿದ್ದವು. ಯುದ್ಧ ಮತ್ತು ದಂಡಯಾತ್ರೆಗಳಿಗೆ ನಡೆಯುವ ಪೂರ್ವಸಿದ್ಧತೆಗಳು ಅಪಾರವಾಗಿದ್ದು ಸೈನ್ಯದ ದಕ್ಷತೆಗಿಂತಲೂ ಅದರ ಪ್ರಮಾಣವೇ ಮುಖ್ಯವಾಗಿರುತ್ತಿತ್ತು. ಮೈಸೂರಿನ ಸೇನೆಯಲ್ಲಿ ಖಾಯಂ ಸೈನಿಕರು ಮತ್ತು ತಾತ್ಕಾಲಿಕ ಸೈನಿಕರಿದ್ದರು. ರಾಜನ ಓಲೆಕಾರರು, ಸೇವಕರು ಹೊಟ್ಟೆಪಾಡಿಗಾಗಿ ಸೈನ್ಯದ ಸೇವೆಗೆ ಸೇರಿದವರೂ ಕೂಡ ಸೈನ್ಯದಲ್ಲಿದ್ದರು. ಪ್ರಾರಂಭದಲ್ಲಿ ಸೈನ್ಯದ ಅವಶ್ಯಕತೆ ಇಲ್ಲದ ಸಮಯದಲ್ಲಿ ಕಿಲ್ಲೆದಾರ ಅಶ್ವಪಡೆಯ ಸೈನಿಕರಿಗೆ ಕೃಷಿಕಾರ್ಯವನ್ನು ಕೈಗೊಳ್ಳುವ ಸ್ವಾತಂತ್ರ್ಯವನ್ನು ನೀಡಲಾಗಿತ್ತು. ಇದನ್ನು ಸಮಕಾಲೀನ ಭಾಷೆಯಲ್ಲಿ **ಗಿರಾಯಿತ ಪದ್ಧತಿ** ಎಂದು ಕರೆಯಲಾಗುತ್ತಿತ್ತು. ಮಹಾರಾಜರ ಖಾಸಗಿ ಅಂಗರಕ್ಷಕರ ಪಡೆಯನ್ನು 'ಬಾರ್ಗೀರ್' ಎಂದು ಕರೆಯಲಾಗುತ್ತಿತ್ತು. ಸುಮಾರು ೫೦೦ಜನ ಅಂಗರಕ್ಷಕರಿದ್ದ ಈ ಪಡೆಗೆ ಕ್ಲೋಸ್‌ಪೇಟೆ (ರಾಮನಗರ)ಯಲ್ಲಿ ತರಭೇತಿಯನ್ನು ನೀಡಲಾಗುತ್ತಿತ್ತು.[೧೩೯]

ಸೈನ್ಯವು ಯುದ್ಧಯಾತ್ರೆಗೆ ಹೊರಟಾಗ ಶಂಖವಾದ್ಯಗಳು ಕಹಳೆ, ತುತ್ತೂರಿ, ಡೋಲು, ನಗಾರಿಗಳೂ ಮೊಳಗುತ್ತಿದ್ದವು. ರಣರಂಗದಲ್ಲಿ ತಂಗವುದಕ್ಕೆ ಸೈನಿಕರು ಜವನಿಕೆಗಳಿಂದ ಗುಡಾರಗಳನ್ನು ನಿರ್ಮಿಸುತ್ತಿದ್ದರು. ಸೈನಿಕರು ನಿಷ್ಠೆಯಿಂದ ಯುದ್ಧಮಾಡುವಂತೆ ಅವರನ್ನು ಒಲಿಸುವ ಉದ್ಧೇಶದಿಂದ ಅವರಿಗೆ ಯುದ್ಧ ಪ್ರಾರಂಭಕ್ಕೂ ಮುಂಚೆ ಅರಸನು ಅವರಿಗೆ ದಾನಗಳನ್ನು ಕೊಡಿಸುತ್ತಿದ್ದನು. ಅಲ್ಲದೆ ಯುದ್ಧಕಾಲದಲ್ಲಿ ಸೈನಿಕರು ಮರಣಹೊಂದಿದರೆ ಅವರ ಹೆಂಡತಿ ಮಕ್ಕಳಿಗಾಗಿ ಹಾಲುಬೆಣ್ಣೆ ಕೊಡುಗೆ ಮತ್ತು ರಕ್ತ ಕೊಡುಗೆಗಳನ್ನು ಕೊಡುತ್ತಿದ್ದನು. ಅಲ್ಲದೆ ಯುದ್ಧದ ಸಂದರ್ಭದಲ್ಲಿ ಹೆಂಡತಿ ಮಕ್ಕಳು ಮತ್ತು ಹೊಟ್ಟೆಪಾಡಿನ ಚಿಂತೆಯುನ್ನು ಬಿಟ್ಟು ಶೌರ್ಯಪ್ರತಾಪಗಳಿಂದ ಹೋರಾಡುವಂತೆ ಹುರಿದುಂಬಿಸಲಾಗುತ್ತಿತ್ತು. ಯುದ್ಧವು ವಿಷಮ ಸಂಧಿಗೆ ಮುಟ್ಟಿದಾಗ ಪ್ರಸಿದ್ಧ ವೀರನೊಬ್ಬನಿಗೆ ಸೇನಾಧಿಪತ್ಯವನ್ನು ಕಟ್ಟಿ, ವೀಳೆಯನ್ನು ಕೊಟ್ಟು ಅವನನ್ನೇ ಯುದ್ಧರಂಗಕ್ಕೆ ಕಳಿಸುವ ಸಂಪ್ರದಾಯವೂ ಸಾಮಾನ್ಯವಾಗಿದ್ದಿತು. ದಂಡಯಾತ್ರೆಗೆ ಹೊರಡುವ ಮುನ್ನ ರಾಜನೂ, ಸೇನಾಧಿಪತಿಗಳೂ ತಮ್ಮ ಇಷ್ಟದ ದೇವಾಲಯಗಳಿಗೆ ಪೂಜೆಸಲ್ಲಿಸಿ ಧತ್ತಿಗಳನ್ನು ನೀಡುತ್ತಿದ್ದರು. ಗಜದಳದಲ್ಲಿದ್ದ ಆನೆಗಳು ಅಂಕೆಮೀರಿ ಹೋಗದಂತೆ ಸರಪಳಿಗಳಿಂದ ಕಟ್ಟುತ್ತಿದ್ದರು. ಗಜದಳದ ಹಿಂಭಾಗದಲ್ಲಿ ಅಶ್ವದಳ ಕಾಲ್ದಳಗಳು ಹಿಂದೆ ಅವುಗಳಿಗೆ ಬೇಕಾದ ಸೇನೆಗೆ ಬೇಕಾದ ಆಹಾರ ಸಾಮಗ್ರಿಗಳನ್ನು ತುಂಬಿದ ಬಂಡಿಗಳು, ಹೆಂಡ, ಸಾರಾಯಿ ಅಫೀಮುಗಳಂತಹ ಮತ್ತುತರಿಸುವ ವಸ್ತುಗಳೂ ಇರುತ್ತಿದ್ದವು. ಸೈನ್ಯದ ಗುತ್ತಿಗೆದಾರರು ವಸ್ತ್ರಾಧಿಕಾರಿಗಲು ಸೈನ್ಯದೊಡನೆ ಹೋಗುತ್ತಿದ್ದರು.[೧೫೯] ಒಟ್ಟಾರೆಯಾಗಿ ಬಂಡಿಗಳಲ್ಲಿ ಫಿರಂಗಿ, ಬಿಲ್ಲು, ಬಾಣ, ಮದ್ದು, ಬಂಗಿಯ ಹೇರು, ಸಾರಾಯಿಗಳ ಪೀಪಾಯಿಗಳು, ಮುಂತಾದವುಗಳನ್ನು ಹೇರಿಕೊಂಡು ಬರುವ ವ್ಯಾಪಾರಿಗಳು, ಕಾಮಾಟಿಗಳು, ಕೊಟ್ವಾಣಿಗರು, ಕಮ್ಮಾರರು, ಬೇಹಾರಿಗಳು ಜೊತೆಯಲ್ಲಿ ಇರುತ್ತಿದ್ದರು. ಸೈನ್ಯಕ್ಕೆ ಅಗತ್ಯವಾಗಿದ್ದ ಸಹಾಯಕ್ಕೆ ಇವರು ಬಳಕೆಯಾಗುತ್ತಿದ್ದರು.[೧೬೦] ಮಂತ್ರಿಗಳು ಕರಣಿಕರು ವಿದ್ವಾಂಸರು, ವೈಧ್ಯರು, ನಟಗಾಯಕರು, ಹರದರು, ದೀವಟಿಗೆಯವರು, ಕೊಟ್ಟಿಗೆಯರು, ಗಜರೋಹಕರಿಗಾಗಿಯೇ ಪ್ರತ್ಯೇಕವಾದ ಗೃಹಗಳಿದ್ದಂತಹ ಬೀದಿಗಳಿದ್ದವು. ಈ ಯುದ್ಧದಲ್ಲಿ ಮೈಸೂರು ಮತ್ತು ಬಿಜಾಪುರಗಳ ಮಿತ್ರಪಡೆಯ ಸೈನ್ಯಗಳಲ್ಲಿ ಅಪಾರವಾದ ಬೇಡಪಡೆಗಳು ಭಾಗಿಯಾಗಿದ್ದವು. ಅವುಗಳಲ್ಲಿ ಬಸವಾಪಟ್ಟಣ, ತರಿಕೆರೆ, ಹರಪನಹಳ್ಳಿ,ಕನಕಗಿರಿ, ಸಂಡೂರು, ರಾಯದುರ್ಗ, ದೊಡ್ಡೇರಿ ಹಿರಿಯೂರು ಚಿಕ್ಕನಾಯಕನಹಳ್ಳಿ, ಸವಣೂರು ಪಡೆಗಳು ಬಿಜಾಪುರದ ಪರವಹಿಸಿದರೆ ಬಳ್ಳಾಪುರ ಕೋಳಾಲ, ಪುಂಗನೂರು, ಮಾಗಡಿ, ಬೆಂಗಳೂರು ಮೊದಲಾದ ಮೊರಸುನಾಡ ಪಾಳೆಯಯಗಾರರ ಸೈನ್ಯವಲ್ಲದೆ ಪಿರಿಯಾಪಟ್ಟಣ, ಕಳಲೆ, ಬೇಲೂರು, ಕೆಳದಿ, ತಲಕಾಡು, ಯಳಂದೂರು, ಅಮ್ಮಚವಾಡಿ, ತೆರಕಣಾಂಬಿ ಮತ್ತು ಕೆರೆಯೂರು ಪಾಳೆಯಗಾರರ ಸೈನ್ಯದಲ್ಲಿದ್ದ ಲಕ್ಷಗಟ್ಟಲೆ ಬೇಡಪಡೆಗಳು ಮೈಸೂರಿನ ಪರವಹಿಸಿದ್ದವು.[೧೬೧] ಹೈದರನ ಕಾಲದಲ್ಲಿ ಮೈಸೂರಿನ ಸೈನ್ಯದಲ್ಲಿ ಸುಮಾರು ಒಂದು ಸಾವಿರ ಪಿಂಡಾರಿಗಳೆಂಬ ಪ್ರತ್ಯೇಕವಾದ ಬೇಡಪಡೆಯಿದ್ದು ಯುದ್ಧಗಳಲ್ಲಿ ಸಂಪತ್ತನ್ನು ಸೂರೆಮಾಡಿ ಅದರಲ್ಲಿ ಸುಮಾರು ಮುಕ್ಕಾಲು ಭಾಗವನ್ನು ಹೈದರನಿಗೆ

ನೀಡಿ ಉಳಿದ ಕಾಲುಭಾಗವನ್ನು ತಾವೇ ಇಟ್ಟುಕೊಳ್ಳುತ್ತಿದ್ದರು. ಹೈದರನು ನಿಜಗಲ್ಲುದುರ್ಗವನ್ನು ವಶಮಾಡಿಕೊಳ್ಳಲು ಸಾಧ್ಯವಾಗದೆ ಚಿತ್ರದುರ್ಗದ ಮದಕರಿ ನಾಯಕನ ಬೇಡಪಡೆಯ ಸಹಾಯವನ್ನು ಪಡೆದು ಚಿತ್ರದುರ್ಗವನ್ನು ತನ್ನ ಕೈವಶಮಾಡಿಕೊಂಡನು. ಅಲ್ಲದೆ ಚಾಮುಂಡಿಬೆಟ್ಟದ ತಪ್ಪಲಿನಲ್ಲಿ ವಾಸವಿದ್ದ ಬೇಡ ಸಮುದಾಯವು ಚಾಮುಂಡೇಶ್ವರಿ ದೇವಿಗೆ ಬಲಿಯಾಗಿ ಜನರ ಮೂಗುಗಳನ್ನು ಕತ್ತರಿಸಿ ಅರ್ಪಿಸುವ ಪದ್ಧತಿಯನ್ನು ಹೈದರನು ನಿಷೇದಿಸಿದನು.

ಮೈಸೂರಿನ ಸೈನ್ಯದಲ್ಲಿ ಬೇಡಪಡೆಯೇ ಅಲ್ಲದೆ ಮುಸ್ಲಿಂ ಸಮುದಾಯದವರು ಕೂಡ ಸೇವೆಯನ್ನು ಸಲ್ಲಿಸುತ್ತಿದ್ದರು. ಹೈದರನು ಪ್ರವರ್ಧಮಾನಕ್ಕೆ ಬರುವ ಮುಂಚೆ ಮೈಸೂರಿನ ಅಧೀನದಲ್ಲಿದ್ದ ಪಾಳೆಯಗಾರರ ಸೈನ್ಯದಲ್ಲಿ ಮುಸ್ಲಿಂರು ಸೇವೆಯನ್ನು ಸಲ್ಲಿಸುತ್ತಿದ್ದರು. ಆದರೆ ಕತ್ತಿಗೋಪಾಲರಾಜೇ ಅರಸರು ದೇವನಹಳ್ಳಿಯ ಮುತ್ತಿಗೆಯ ಸಂದರ್ಭದಲ್ಲಿ ತಮ್ಮ ಮನೆಯಲ್ಲಿ ಮನೆಗೆಲಸವನ್ನು ಮಾಡಿಕೊಂಡು ಸಮರಕಲೆಗಳಲ್ಲಿ ಪರಿಣಿತಿಯನ್ನು ಪಡೆದಿದ್ದ ಹೈದರ್ ಅಲಿ ಮತ್ತು ಅವನ ಅಣ್ಣ ಶಾಹಬಾಜನನ್ನು ತಮ್ಮ ಜೊತೆಯಲ್ಲಿ ಯುದ್ಧಕ್ಕೆ ಕರೆದುಕೊಂಡು ಹೋದರು. ಈ ಯುದ್ಧದಲ್ಲಿ ಹೈದರನು ಮೈಸೂರು ಸೈನ್ಯದ ಗೆಲುವಿಗೆ ಕಾರಣನಾಗಿದ್ದರಿಂದ ಅವನನ್ನು ಸೈನ್ಯದಲ್ಲಿ ಸೇರಿಸಿಕೊಳ್ಳಲಾಯಿತು. ಮುಂದೆ ಹೈದರನು ಮೈಸೂರಿನ ದಳವಾಯಿಯಾದಾಗ ತನ್ನ ಸಹೋದರ ಸಂಬಂಧಿಯಾದ ಮುಕುದುಂ ಸಾಹೇಬನ ಜೊತೆಗೆ ಇಬ್ರಾಹಿಂಸಾಹೇಬ್, ಹುಸೇನ್ ಸಾಹೇಬ್, ಮಿರ್ಜಾ ಇಸ್ಮಾಯಿಲ್ ಹುಸೇನ್‌ಬೇಗ್ ಮತ್ತು ಹೈದರ್ ಹುಸೇನ್ ಎಂಬ ತನ್ನ ಕಡೆಯವರನ್ನೇ ಕಿಲ್ಲೆ ಕಛೇರಿಯ ಅಧಿಕಾರಿಗಳನ್ನಾಗಿ ನೇಮಕ ಮಾಡಿದನು. ಆದರೆ ಟಿಪ್ಪು ಸುಲ್ತಾನನು ತನ್ನ ನಂಬಿಕಸ್ಥ ವ್ಯಕ್ತಿಗಳಾದ ರಾಜಾ ಸಾಹೇಬ್ ಮತ್ತು ಮೀರ್ ಮೊಹಮ್ಮದ್ ಸಾಧಿಕ್‌ರನ್ನು ನೇಮಕ ಮಾಡಿಕೊಂಡನು. ಅಲ್ಲದೆ ಬೆಂಗಳೂರು ಕೋಟೆಯಲ್ಲಿ ಕಾವಲಿದ್ದ ಹಿಂದೂ ಅಧಿಕಾರಿಗಳನ್ನು ತೆಗೆದು ಮುಸ್ಲಿಂ ಅಧಿಕಾರಿಗಳನ್ನು ನೇಮಕ ಮಾಡಿದನು.

ಪ್ರಾರಂಭದಿಂದಲೂ ಬ್ರಾಹ್ಮಣರು ಸೈನ್ಯದಲ್ಲಿ ಉನ್ನತ ಅಧಿಕಾರಗಳನ್ನು ಹೊಂದಿದ್ದು ೧೯೫೦ರ ವರೆಗೂ ಮುಂದುವರೆದರು. ಅಂತೆಯೇ ದಳವಾಯಿಗಳ ಕಾಲದಲ್ಲಿ ಮರಾಠರು ಕೂಡ ಮೈಸೂರು ಸೈನ್ಯದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದರು. ಅವರಲ್ಲಿ ಪ್ರಮುಖರಾದವರೆಂದರೆ ಖಂಡೇರಾಯ, ತೋಷಿಖಾನೆ ಕೃಷ್ಣರಾಯರು, ಭರ್ಕಿ ವೆಂಕಟರಾವ್ ಮೊದಲಾದ ಮರಾಠ ನಾಯಕರು ಸೈನ್ಯದಲ್ಲಿ ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದರು. ದಳವಾಯಿಗಳ ಕಾಲದಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರ್ ಖಂಡೇರಾಯನನ್ನು ದಳವಾಯಿಯಾಗಿ ನೇಮಕ ಮಾಡಿಕೊಂಡಿದ್ದರು. ಕ್ರಿ.ಶ೧೭೧೦ರಿಂದ ೧೭೯೯ರ ವರೆಗೆ ಸೈನ್ಯಕ್ಕೆ ಪ್ರತಿ ಶುಕ್ರವಾರ ಕವಾಯತನ್ನು ಮಾಡಿಸಲಾಗುತ್ತಿತ್ತು. ಆದರೆ ಮೈಸೂರು ಬ್ರಿಟಿಷರ ಸಹಾಯಕಸೈನ್ಯ ಪದ್ಧತಿಗೆ ಒಳಪಟ್ಟಾಗ ದಿನಕ್ಕೆರಡು ಬಾರಿ ಕವಾಯತು ಮಾಡಬೇಕಿತ್ತು. ಅಲ್ಲದೆ ಸೈನ್ಯದಲ್ಲಿ ಸೇವೆಸಲ್ಲಿಸಿ ನಿವೃತ್ತರಾದ ಸೈನಿಕರಿಗೆ ಬಾಕಿವೇತನವನ್ನು ಒದಗಿಸುವುದರ ಜೊತೆಗೆ ಗಿರಿಯ ಎಂಬ ನಿವೃತ್ತ ಸೈನಿಕನ ಹೆಣ್ಣುಮಕ್ಕಳಿಗೆ ಇನಾಂಗಳನ್ನು ನೀಡಲಾಯಿತು.

ಮರಾಠರ ಶಿವಾಜಿಯ ಕಾಲದಲ್ಲಿ ಯುದ್ಧದಲ್ಲಿ ಮಡಿದವರ ಅಂದರೆ ಗಂಡುಮಕ್ಕಳಿಲ್ಲದವರ ಸೈನಿಕರ ಹೆಂಡತಿಯರಿಗೆ ಅವರ ಪತಿಯು ಪಡೆಯುತ್ತಿದ್ದ ವೇತನದ ಅರ್ಧದಷ್ಟು ವೇತನವನ್ನು ನೀಡಲಾಗುತ್ತಿತ್ತು. ಯುದ್ಧದಲ್ಲಿ ಗಾಯಗೊಂಡವರಿಗೆ ಅವರ ಗಾಯಕ್ಕೆ ಅನುಗುಣವಾಗಿ ಇನ್ನೂರು ನೂರು, ಇಪ್ಪತ್ತೈದು ಅಥವಾ ಐವತ್ತುರೂಗಳನ್ನು ಬಹುಮಾನವಾಗಿ ಕೊಡಲಾಗುತ್ತಿತ್ತು. ಇದನ್ನು ಅಧಿಕಾರಕ್ಕೆ ಬಂದ ಪೇಶ್ವೆಗಳೂ ಕೂಡ ಮುಂದುವರೆಸಿದರು.[೧೪೨] ಆದರೆ ವಿಜಯನಗರ ಕಾಲದಲ್ಲಿ ಶೂದ್ರರ ಉಪಜಾತಿಗಳ ಗಣ್ಯರನ್ನು ಅಮರನಾಯಕರನ್ನಾಗಿ, ಗೇಣಿ ರೈತರಾಗಿ, ಕಾವಲುಗಾರರನ್ನಾಗಿ ನೇಮಿಸಲಾಗುತ್ತಿತ್ತು.[೧೪೩] ಕ್ರಿ.ಶ.೧೬೮೪ರ ತರುವಾಯ ಮಧುರೆಯ ಅರಸನ ಬಳಿ ಕೆಲಸಮಾಡುತ್ತಿದ್ದ ಕೆಲವು ಸೈನಿಕರು ಕ್ರೈಸ್ತಮತಕ್ಕೆ ಮತಾಂತರವಾದರು. ಅರಮನೆಯ ಕುದುರೆಗಳಿಗೆ ಹುಲ್ಲು ಸೊಪ್ಪುಗಳನ್ನು ಒದಗಿಸುತ್ತಿದ್ದ ಸೇವಕರು ಈ ಕೆಲಸವನ್ನು ಮಾಡಲು ಮುಷ್ಕರ ಹೂಡಿದರು. ಹೀಗೆ ಮಾಡಲು ಹೇಳಿಕೊಟ್ಟವನು ಒಬ್ಬ ಮುಸ್ಲಿಂ ಅಧಿಕಾರಿ. ಸಾಮಾನ್ಯ ಸೈನಿಕರು ತಮ್ಮ ಪ್ರತಿದಿನದ ಬಿಡುವಿನ ವೇಳೆಯಲ್ಲಿ ಗರಡಿ ಮನೆಗಳಿಗೆ ದೈಹಿಕ ಕಸರತ್ತುಗಳನ್ನು ಮಾಡಲು ಹೋಗುತ್ತಿದ್ದರು. ಅಲ್ಲಿ ಲಾಠಿವರಸೆ, ಕುಸ್ತಿ ಮೊದಲಾದ ಸಮರೋಚಿತವಾದ ಅಂಗಸಾಧನೆಗಳನ್ನು ಕಲಿಯಬೇಕಾಗಿತ್ತು. ರಾತ್ರಿವೇಳೆಯಲ್ಲಿ ಕೊತ್ವಾಲ ಕಳ್ಳಭಂಟಿ, ದಂಡಿ, ತಮಟೆಯವರು ಎಚ್ಚರವಾಗಿದ್ದು ಕಳ್ಳಕಾಕರು ಬರದಂತೆ ನೋಡಿಕೊಂಡು ಗಸ್ತುತಿರುಗುತ್ತಿದ್ದರು.[೧೪೪] ಸೈನಿಕರು ಯಾರಾದರೂ ಸಾಲಮಾಡಿ ಯುದ್ಧದಲ್ಲಿ ಅಸುನೀಗಿದರೆ ಅವರ ಕುಟುಂಬದವರನ್ನು ಸಾಲ ತೀರಿಸುವಂತೆ ಒತ್ತಾಯಪಡಿಸಲಾಗುತ್ತಿತ್ತು. ಇದಕ್ಕೆ ಉತ್ತಮವಾದ ನಿದರ್ಶನವೆಂದರೆ ಹೈದರನ ತಂದೆಯಾದ ಫತ್ತೇಮಹಮದ್ದನು. ಅಬ್ದುಲ್ ರಸೂತ್‌ಖಾವನಿಂದ ಪಡೆದ ಸಾಲವನ್ನು ಅವನ ಮಗ ಅಬ್ಬಾಸ್ ಖೂಲಿಖಾನ್ ಸಾಲವಸೂಲಿ ಮಾಡಲು ಫತ್ತೇಮಹಮದ್ದನ ಮರಣದ ನಂತರ ಅವನ ವಿಧವೆ ಪತ್ನಿ ಮತ್ತು ಮಕ್ಕಳನ್ನು ಸೆರೆಯಲ್ಲಿಡಿಸಿ ಚಿತ್ರಹಿಂಸೆಗೆ ಗುರಿಪಡಿಸಿದನು. ಅಲ್ಲದೆ ನವಾಬನ ಕೋಪಕ್ಕೆ ತುತ್ತಾದ ಫತ್ತೇಮಹಮದನ ಮಕ್ಕಳಾದ ಶಹಸ್ಸಾಬಿ ಮತ್ತು ಹೈದರ್ ಅಲಿ ಊರನ್ನೇ ಬಿಡಬೇಕಾಯಿತು.[೧೪೮]

ಹೈದರನ ಕಾಲದಲ್ಲಿ ಬೆಂಗಳೂರು ಪ್ರವರ್ಧಮಾನಕ್ಕೆ ಬಂದ ಸಂದರ್ಭದಲ್ಲಿ ಬೆಂಗಳೂರಿನಲ್ಲಿ ಎಲ್ಲಿ ನೋಡಿದರೂ ಸೈನಿಕರೇ, ಕಾಲಾಳುಗಳು, ಅಶ್ವಗಳ, ಪಾಳೆಯಗಾರರ ಕಡೆಯಿಂದ ಬಂದಿದ್ದ ಕಾಲಾಳುಗಳು, ಕಳ್ಳಭಂಟರು, ವಿವಿಧ ವೇಷಗಳಲ್ಲಿದ್ದ ಗೂಢಾಚಾರರು ಎಲ್ಲರೂ ಜಮಾಯಿಸಿದ್ದರು. ಆಗ ಬೆಂಗಳೂರನ್ನು ಕಂಡವರಿಗೆ ಇದೇನು ಸೈನಿಕ ಸಾಗರವೇನೋ ಎಂಬ ಭ್ರಮೆ ಹುಟ್ಟಿಸುವಂತಿತ್ತು. ಇಷ್ಟು ದೊಡ್ಡಸೈನ್ಯವು ತಂಗಲು ಸ್ಥಳವೇ ಸಾಲದಾಗಿತ್ತು. ಆಗ ಬೆಂಗಳೂರಿನ ವಿಸ್ತೀರ್ಣ ಕೋಟೆಯೊಳಗಿನ ಭಾಗವಷ್ಟೇ ಹೈದರನು ಕೋಟೆಯ ಹೊರಗಡೆ ದೊಡ್ಡದೊಡ್ಡ ಡೇರಾಗಳನ್ನು ಹಾಕಿಸಿ ಸೈನಿಕರು ಅವುಗಳಲ್ಲಿ ತಂಗಲು ವ್ಯವಸ್ಥೆ ಮಾಡಿದ್ದನು. ಈ ಸೈನಿಕರಲ್ಲಿ ಬಹುತೇಕ ಮಂದಿ ಕಲಾಸಿಗಳಿದ್ದು ಅಗತ್ಯಬಿದ್ದಾಗ ತಕ್ಷಣವೇ ಹೋಗಿ ಗುಡಾರಗಳನ್ನು ಹಾಕುವ ಕೆಲಸದಲ್ಲಿ

ತೊಡಗುತ್ತಿದ್ದರು. ಈ ಕಲಾಸಿಗಳ ಸಲುವಾಗಿ ಕೋಟೆಯ ಪೂರ್ವದ ಭಾಗದಲ್ಲಿ ಅಂದರೆ ಈಗಿನ ಮಾವಳ್ಳಿ ಕೆರೆಯ ಅಂಚಿನಲ್ಲಿ ಭೂಮಿಯನ್ನು ಬಿಟ್ಟುಕೊಡಲಾಯಿತು. ಅವರು ಅಲ್ಲೆಲ್ಲಾ ಗುಡಿಸಲುಗಳು, ಮನೆಗಳನ್ನು ಕಟ್ಟಿಕೊಂಡು ವಾಸಿಸಲಾರಂಭಿಸಿದರು. ಆದ್ದರಿಂದ ಈ ಪ್ರದೇಶವನ್ನು 'ಕಲಾಸಿಪಾಳ್ಯ' ಎಂದೇ ಕರೆಯಲಾಯಿತು. ಈಗಲೂ ಬೆಂಗಳೂರಿನ ಹಳೆಯ ಬಸ್‌ನಿಲ್ದಾಣವಿರುವ ಪ್ರದೇಶಕ್ಕೆ 'ಕಲಾಸಿಪಾಳ್ಯ' ಎಂಬ ಹೆಸರೇ ಚಾಲ್ತಿಯಲ್ಲಿದೆ. ಈ ಕಲಾಸಿಗಳು ಸೈನ್ಯದ ಒಂದು ಅಂಗವಾಗಿದ್ದರು. ಸೈನ್ಯವು ಬಿಡಾರ ಹೂಡಬೇಕೆಂದಾಗಲೆಲ್ಲಾ ಇವರು ಸಹಸ್ರಾರು ಗುಡಾರಗಳನ್ನು ಹಾಕಬೇಕಾಗಿತ್ತು. ಅವರ ಅವಶ್ಯಕತೆ ಹೆಚ್ಚಾಗಿದ್ದುದರಿಂದ ಮತ್ತು ಕರೆಬಂದಾಗಲೆಲ್ಲಾ ಅವರು ತಕ್ಷಣವೇ ಹೊರಟು ಬರಬೇಕಾಗಿದ್ದುದರಿಂದ ಅರಮನೆಯ ಅನತಿ ದೂರದಲ್ಲಿಯೇ ಇವರ ವಾಸಕ್ಕೆ ಸೌಕರ್ಯವನ್ನು ಕಲ್ಪಿಸಲಾಗಿತ್ತು. ಕೆಂಗೇರಿಯಿಂದ ಆರಂಭವಾಗಿ ಬಸವನಗುಡಿಯ ಕಹಳೆ ಬಂಡೆಯವರೆಗೂ ಸೈನ್ಯವು ಬೀಡುಬಿಟ್ಟುರುತ್ತಿತ್ತು. ದೊಡ್ಡದೊಡ್ಡ ಮರಗಳ ಕೆಳಗೆ ಅಡಿಗೆ ಶಾಲೆಗಳಿದ್ದು ಬೃಹತ್ ಪ್ರಮಾಣದಲ್ಲಿ ಅಡಿಗೆ ಪದಾರ್ಥಗಳು ತಯಾರಾಗುತ್ತಿದ್ದವು.[೧೪೬] ಹೈದರನ ಕಾಲದಲ್ಲಿ ಕ್ಲೋಸ್‌ಪೇಟೆಯಲ್ಲಿ ಬಾರ್ ಇಲಾಖೆಯ ಸೈನಿಕರಿಗಾಗಿಯೇ ಪ್ರತ್ಯೇಕವಾದ ವಸತಿ ಗೃಹಗಳನ್ನು ನಿರ್ಮಾಣ ಮಾಡಲಾಯಿತು.

ಹೈದರನ ಕಾಲದಲ್ಲಿ ರಾಜ್ಯದಾದ್ಯಂತ ಮಧ್ಯವನ್ನು ನಿಷೇಧಿಸಲಾಗಿತ್ತು. ಆದರೆ ಕ್ರಿ.ಶ.೧೭೯೧ರ ಟಿಪ್ಪುವಿನ ಆಡಳಿತಾವಧಿಯಲ್ಲಿ ಮಧ್ಯವನ್ನು ಹೆಚ್ಚಾಗಿ ಬಳಕೆ ಮಾಡಲಾಯಿತು. ಯುದ್ಧ ಸಂದರ್ಭಗಳಲ್ಲೂ ಕೂಡ ಸೈನಿಕರು ಪಾನಮತ್ತರಾಗಿರುತ್ತಿದ್ದರು. ಇದರ ಪರಿಣಾಮವಾಗಿ ಕ್ರಿ.ಶ.೧೭೯೧ರಲ್ಲಿ ಬೆಂಗಳೂರು ಕೋಟೆಯು ಬ್ರಿಟಿಷರ ವಶವಾಯಿತು. ಮೈಸೂರು ಸಂಸ್ಥಾನಕ್ಕೆ ಪ್ರವಾಸಿಯಾಗಿ ಪ್ರಾನ್ಸಿಸ್ ಬುಕಾನನ್‌ನು ಬೆಂಗಳೂರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಅವನು ಅನೇಕ ಮುಸ್ಲಿಂ ಗಣ್ಯವ್ಯಕ್ತಿಗಳನ್ನು ಭೇಟಿಮಾಡಿದನು. ಅವರೆಲ್ಲಾ ಸುಲ್ತಾನನ ಅವಸಾನದ ಸುದ್ದಿಯನ್ನು ಕೇಳಿ ತುಂಬಾ ವ್ಯಥೆಪಟ್ಟರು. ಬುಕಾನನ್ನನ ಅಭಿಪ್ರಾಯದಂತೆ ಸೈನಿಕರಾಗಿದ್ದ ಅನೇಕ ಮುಸ್ಲಿಂರು ವ್ಯವಸಾಯ ಮತ್ತು ಸಣ್ಣಪುಟ್ಟ ಕೈಕಸಬುಗಳನ್ನು ಕೈಗೊಂಡರು. ಸ್ವಲ್ಪ ಹಣವಿದ್ದವರು ಸಣ್ಣಪುಟ್ಟ ವ್ಯಾಪಾರಗಳನ್ನು ಆರಂಭಿಸಿದರು. ಮತ್ತೆ ಕೆಲವರು ಕುದುರೆ ಗಾಡಿಗಳನ್ನಿಟ್ಟುಕೊಂಡು ಸರ್ಕಾರಿ ಕಛೇರಿಗಳಿಗೆ ಅಧಿಕಾರಿಗಳನ್ನು ಕೊಂಡೊಯ್ಯುವ ಪದ್ಧತಿಯನ್ನು ಆರಂಭಿಸಿದರು. ವಾಹನ ಸೌಕರ್ಯಗಳಿಲ್ಲದ ಸಂದರ್ಭದಲ್ಲಿ ಕುದುರೆಗಾಡಿಗಳೇ ಅಂದಿನ ಸಾರಿಗೆ ವ್ಯವಸ್ಥೆಯಾಗಿ ರೂಪುಗೊಂಡಿತ್ತು. ಶ್ರೀರಂಗಪಟ್ಟಣವು ಟಿಪ್ಪುವಿನ ಮರಣದ ನಂತರ ಅತ್ಯಂತ ಗಲೀಜಾದ ಊರಾಗಿ ರೂಪುಗೊಂಡಿತ್ತು. ಇಕ್ಕಟ್ಟಾದ ರಸ್ತೆಗಳಿಂದ ಕೂಡಿದ್ದು ದೊಡ್ಡಮನೆಗಳೂ ಇರಲಿಲ್ಲ. ಖಾಲಿಯಾಗಿದ್ದ ಮನೆಗಳಲ್ಲಿ ಸೈನಿಕರು ವಾಸಿಸುತ್ತಿದ್ದರು.[೧೪೭] ಕ್ರಿ.ಶ.೧೯೧೪ರಲ್ಲಿ ನಡೆದ ಪ್ರಥಮ ಮಹಾಯುದ್ಧದಲ್ಲಿ ಬ್ರಿಟಿಷರ ಪರವಾಗಿ ಯುದ್ಧದಲ್ಲಿ ಪಾಲ್ಗೊಳ್ಳಲು ತೆರಲುವ ಸೈನಿಕರಿಗೆ ಸಿಹಿಯನ್ನು ಹಂಚಿ ಅವರಿಗೆ ಅಗತ್ಯವಾದ ಆಹಾರ ಪದಾರ್ಥಗಳಾದ ಹಾಲಿನ ಉತ್ಪನ್ನಗಳು, ಬ್ರೆಡ್,

ಬಿಸ್ಕೆಟ್‌ಗಳಲ್ಲದೆ ಕಂಬಳಿಗಳನ್ನು ಒದಗಿಸಿ ಅವರನ್ನು ಬೀಳ್ಕೊಡಲಾಯಿತು. ಕ್ರಿ.ಶ. ೧೯೧೬ರಲ್ಲಿ ಮೈಸೂರಿನಲ್ಲಿ ವಾಸವಿದ್ದ ಸುಮಾರು ೧೫೦ ಹಿಂದೂ-ಮುಸ್ಲಿಂ ಕುಟುಂಬಗಳು ಮತ್ತು ಸೈನಿಕರ ಮಕ್ಕಳ ಶಿಕ್ಷಣಕ್ಕಾಗಿ ಎರಡು ಶಾಲೆಗಳ ಸ್ಥಾಪನೆಗೆ ಪ್ರಸ್ತಾವನೆಯನ್ನು ಸಲ್ಲಿಸಿ ಒಂದು ಆಂಗ್ಲ ಶಾಲೆ ಮತ್ತು ಒಂದು ಕನ್ನಡ ಬಾಲಕಿಯರ ಶಾಲೆಗಳನ್ನು ಸ್ಥಾಪಿಸಲಾಯಿತು.

**೩.೭.೧. ಗಣಿಕಾ ಸ್ತ್ರೀಯರು**

ಪ್ರಾಚೀನ ಕಾಲದಿಂದಲೂ ಸಹ ರಾಜ್ಯರಕ್ಷಣೆಯ ಕರ್ತವ್ಯವು ಪ್ರತಿಯೊಬ್ಬ ಪ್ರಜೆಗೂ ಸೇರಿದ್ದಿತು. ಅಂದರೆ ಯುದ್ಧ ಸಂದರ್ಭದಲ್ಲಿ ಪ್ರತಿಯೊಬ್ಬ ಶ್ರೀಸಾಮಾನ್ಯನೂ ಸಹ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ರಾಜ್ಯರಕ್ಷಣೆಯ ಕಾರ್ಯದಲ್ಲಿ ಪಾಲ್ಗೊಳ್ಳುತ್ತಿದ್ದರು. ಆದರೆ ಮಹಿಳೆಯರೂ ಕೂಡ ಈ ಹೋರಾಟದಿಂದ ಹೊರತಾಗಿರಲಿಲ್ಲ. ಅದೇರೀತಿ ವಿಜಯನಗರ ಕಾಲದಲ್ಲೂ ಸಹ ಸ್ತ್ರೀಯರು ಪೂರಕ ಮತ್ತು ಪೋಷಕ ಪಾತ್ರವನ್ನು ವಹಿಸುತ್ತಿದ್ದರು. ಮಹಿಳೆಯರೂ ಕೂಡ ಯೋಧರಾಗಿ ಸೈನ್ಯದಲ್ಲಿದ್ದುದನ್ನು ಶಿಲ್ಪಗಳು, ವೀರಗಲ್ಲುಗಳು, ಶಾಸನಗಳು ಹಾಗೂ ಪ್ರವಾಸಿ ವರದಿಗಳು ಉಲ್ಲೇಖಿಸುತ್ತವೆ.[೧೪೮] ಈ ಮಹಿಳಾ ಯೋಧರು ಆನೆ, ಕುದುರೆ ಮತ್ತು ಒಂಟೆಗಳ ಸವಾರಿಯನ್ನು ಬಲ್ಲವರಾಗಿದ್ದು ವಿವಿಧ ಆಯುಧಗಳನ್ನು ಯುದ್ಧದಲ್ಲಿ ಪ್ರಯೋಗಿಸಬಲ್ಲ ಪರಿಣಿತ ಹೋರಾಟಗಾರ್ತಿಯರೇ ಆಗಿದ್ದರು. ಅದರಲ್ಲೂ ಪ್ರಮುಖವಾಗಿ ಕತ್ತಿ, ಗುರಾಣಿ, ಭರ್ಜಿ, ಬಿಲ್ಲುಬಾಣಗಳನ್ನು ಪ್ರಯೋಗಿಸುತ್ತಿದ್ದರು. ಆದರೆ ಮೈಸೂರು ಒಡೆಯರ ಕಾಲದಲ್ಲಿ ಹೋರಾಟಗಾರ್ತಿಯರ ಅಥವಾ ಮಹಿಳಾಯೋಧರ ಉಲ್ಲೇಖಗಳು ನಮಗೆ ದೊರಕುವುದಿಲ್ಲ. ಆದರೆ ಮಹಿಳೆಯರು ಕೂಡ ಯುದ್ಧಗಳಿಗೆ ಬೇಕಾದ ಯುದ್ಧಸಾಮಾಗ್ರಿಗಳನ್ನು ಒದಗಿಸುತ್ತಿದ್ದರು. ಅದರಲ್ಲೂ ಪ್ರಮುಖವಾಗಿ ಸೈನ್ಯಕ್ಕೆ ಬೇಕಾದ ನೀರು, ಆಹಾರ, ಮತ್ತಿತರ ಸಾಮಾಗ್ರಿಗಳನ್ನು ಒದಗಿಸುವ ಸಹಾಯಕಿಯರೂ ಮತ್ತು ಸೈನ್ಯದ ಮೊತ್ತಕ್ಕೆ ಅವಶ್ಯವಾಗಿದ್ದ ವೇಶ್ಯಾಸ್ತ್ರೀಯರೂ ಆಗಿ ತಮ್ಮ ಕಾರ್ಯಗಳನ್ನು ನಿರ್ವಹಿಸುಬೇಕಿದ್ದಿತು.

ಮೈಸೂರು ಸೈನ್ಯದಲ್ಲಿದ್ದ ವೇಶ್ಯೆಯರ ಸಂಖ್ಯೆ ಅವರ ಕಾರ್ಯಗಳು ಮತ್ತು ಉಡುಗೆ ತೊಡುಗೆಗಳನ್ನು ಕುರಿತು ಅಂದಿನ ಕಾಲದಲ್ಲಿ ರಚನಯಾದ ಹಲವಾರು ಸಾಹಿತ್ಯ ಆಕರಗಳು ನಮಗೆ ದೊರೆಯುತ್ತವೆ. ಅದರಲ್ಲೂ ಪ್ರಮುಖವಾಗಿ 'ಗೋವಿಂದ ವೈದ್ಯಕೃತ ಕಂಠೀರವ ನರಸರಾಜ ವಿಜಯಂ' ಮತ್ತು ಕೆಳದಿಯ ಲಿಂಗಣ್ಣ ಕವಿಯ 'ಕೆಳದಿ ನೃಪವಿಜಯ' ಕೃತಿಗಳು ಅಪಾರವಾದ ಮಾಹಿತಿಯನ್ನು ಒದಗಿಸುವ ಆಕರಗಳಾಗಿವೆ. ಗೋವಿಂದ ವೈದ್ಯಕೃತ ಕಂಠೀರವ ನರಸರಾಜ ವಿಜಯಂ ಕೃತಿಯಲ್ಲಿ ಗೋವಿಂದ ವೈದ್ಯನು ಗಣಿಕಾ ಸ್ತ್ರೀಯರನ್ನು ಈ ರೀತಿಯಾಗಿ ವರ್ಣಿಸಿದ್ದಾನೆ. ಆ ವರ್ಣನೆಯು ಕಣ್ಣಿಗೆ ಕಟ್ಟುವಂತಿದ್ದು ಎಂತಹ ಪುರಷನನ್ನಾದರೂ ಕರಗಿಸುವಂತಹ ರೂಪ ಮತ್ತು ವೇಷಭೂಷಣಗಳು ಅತ್ಯಂತ ಶೃಂಗಾರಮಯವಾಗಿದ್ದವು. ಗೋವಿಂದ ವೈದ್ಯನು ತನ್ನ ಕಂಠೀರವ ನರಸರಾಜ ವಿಜಯಂ ಎಂಬ ಕಾವ್ಯದಲ್ಲಿ ಮನೋಹರವಾಗಿ ವರ್ಣಿಸಿದ್ದು ಪುರುಷನಲ್ಲಿ ರಸಿಕತನವನ್ನು ತುಂಬುವಂತಹ ಕಲ್ಪನೆಯಾಗಿದೆ.

ಮೊಳೆವ ಜವ್ವನದ ಎಳೆ ಜವ್ವನದ ನೋಳರ್ಗೆ
ಪೊಳೆವ ನೆರೆಜವ್ವನದ ತುಂಬು ಜವ್ವನದೊಳಗೆ
ನಲವೆತ್ತ ಮೀಂಟುಜವ್ವನದ ಬಲ್ ಜವ್ವನೋನ್ಮತ್ತ ಯೌವನಗಳಿಂದ
ಚೆಲವೆತ್ತು ಕಣ್ಗೆ ಶೋಭಾಯ ಮಾನವಂದಾಗಿ
ಗಿಳಿಯಂತೆ ನುಡಿವ ಕೋಗಿಲೆಯಂತೆ ಸ್ವರದೋರ್ವ
ನಳಿನಾಂಬಕದ ಇರಿದು ವದನದ ಲತಾಂಗಿಯು ಸಿಂಗರಿಸಿ ನಿಂದಿರುವರು[೧೪೯] ಎಂದು

ಯುದ್ಧಸನ್ನದ್ಧವಾಗಿರುವ ಸೇನೆಯಲ್ಲಿದ್ದ ಅಲಂಕಾರಿತ ವೇಶ್ಯೆಯರನ್ನು ಕುರಿತು ತಿಳಿಸುತ್ತಾನೆ.

ಈ ವೇಶ್ಯೆಯರು ಮಾಡಿಕೊಳ್ಳುತ್ತಿದ್ದ ಅಲಂಕಾರವು ಎಂತಹವರನ್ನೂ ತನ್ನೆಡೆಗೆ ಸೆಳೆಯುವಂತಿತ್ತು. ಆ ರೀತಿಯ ಅಲಂಕಾರವನ್ನು ಕುರಿತು ಕವಿಯು ಈ ರೀತಿಯಾಗಿ ವರ್ಣಿಸಿದ್ದಾನೆ.

ಪರಿಮಳವೆರದಿಂಪಿನ ದಿವ್ಯಪುಷ್ಪವ
ಪರಿಕೊಂಡತಿ ಹರುಷದಲಿ
ಸರಗಟ್ಟಿ ಬೆಲೆಗೆ ಮಾರುವ ಮಾಲೆಗಾತಿಯ
ರಿರವ ನಾನೇನ ಬಣ್ಣಿಪೆನು? ಎಂದು ವರ್ಣಿಸಿದ್ದಾನೆ.[೧೫೦]

ಮುಂದುವರೆದು ಈ ವೇಶ್ಯೆಯರು ವಾಸಮಾಡುತ್ತಿದ್ದ ಮನೆಗಳ ಸಂಕೀರ್ಣವನ್ನು ಕುರಿತು ಈ ರೀತಿಯಾಗಿ ವರ್ಣಿಸಿದ್ದಾನೆ.

ಸಾಲು ಗೊಂಡೆಸೆವ ಬಾಗಿಲ ಪಟ್ಟಸಾಲೆಯ
ನೀಲ ಕುಟ್ಟಿ ಮದೊತ್ತಿನೊಳನೆ
ಮೇಲೆ ಸಿಂಗರಗೈದೊಲೊತ್ತೆಗೆ ನಿಂದಿಹ
ಬಾಲೆಯರು ಗಳೊಪ್ಪಿಹರು.[೧೫೧]
ಜಡೆಯೊಳಗೆ ಮಲ್ಲಿಗೆಯ ಹೂವಿನ ಸರ
ಬಿಡದುಟ್ಟ ಸಾಲಿಯ ಸೀರೆ
ಕಡುಪರಿಮಳವಾಂತ ದಿವ್ಯಾಂಗದ ಚೈಲ್ವ
ಮಡದಿ ರನ್ನೆಯರೊಪ್ಪಿದರು.[೧೫೨]

ಎಂದು ಅವರ ಅಲಂಕಾರದ ಶೈಲಿಯನ್ನು ಕುರಿತು ತಿಳಿಸಿತ್ತಾನೆ. ಅದೇ ರೀತಿ ಚಿಕ್ಕ ವಯಸ್ಸಿನ ವೇಶ್ಯೆಯರ ಅಲಂಕಾರವು ಈ ರೀತಿಯಾಗಿತ್ತು.

ಕಾಲಂದುಗೆ ಕಟಿಸೂತ ಕಂಕಣ ಸಣ್ಣ
ಸಾಲಿಯ ಸೀರೆಯ ನೆರಯಾ
ಬಾಲಕಿಯೋರ್ವಳು ಬಹು ಸಿಂಗಾರದ

ಜಾಲವ ಬೀಸಿದಳ್ವಿಟಗೆ ಎಂದಿದ್ದಾನೆ.[೧೫೩] ಇದು ವೇಶ್ಯೆಯು ವಿಟಪುರುಷನನ್ನು ಆಕರ್ಷಿಸುವಂತಹ ವಿಧಾನವಾಗಿದ್ದಿತು. ಅದರಲ್ಲೂ ವಿಟಪುರುಷರು ಅಂದವಾದ ಹಾಗೂ ಚಿಕ್ಕವಯಸ್ಸಿನ ಗಣಿಕಾಸ್ತ್ರೀಯರ ಮೇಲೆ ತಮ್ಮ ಆಸೆಯ ಪ್ರಭಾವದಿಂದ ಅವರೊಂದಿಗೆ ಸೇರುತ್ತಿದ್ದರು. ಒಟ್ಟಿನಲ್ಲಿ ಮೈಸೂರಿನಲ್ಲಿದ್ದ ಪ್ರತ್ಯೇಕ ವೇಶ್ಯಾವಾಟಿಕೆಯ ಕೇರಿಗಳು ಅರಸನ ಅರಮನೆಯಂತೆ ಕಂಗೋಳಿಸುತ್ತಿದ್ದು ಸಕಲ ಐಶ್ವರ್ಯವನ್ನು ಹೊಂದಿದ ಮೋಹದ ಬಲೆಯಲ್ಲಿ ಪುರುಷರನ್ನು ಸೆಳೆಯುವ ಜೇಡರ ಬಲೆಯಂತಿದ್ದವು. ಇದು ಒಂದುಕಡೆಯಾದರೆ ಮತ್ತೊಂದೆಡೆಯಲ್ಲಿ ಅದೇ ವೇಶ್ಯಾಸ್ತ್ರೀಯರು ವಯಸ್ಸಿನ ಕಾರಣದಿಂದ ತಮ್ಮ ಕಾರ್ಯದಿಂದ ವಿಮುಖರಾಗಿದ್ದರು. ಕಾರಣ ಅವರು ಅತಿಹೆಚ್ಚು ವಯಸ್ಸಾಗಿ ದೈಹಿಕ ಶಕ್ತಿಯನ್ನು ಕಳೆದುಕೊಂಡಿದ್ದರು. ಅವರ ವರ್ಣನೆಯು ಈ ರೀತಿಯಾಗಿದೆ.

ಬುತ್ತಿಗಲ್ಲಿ ಹತ್ತಿದ ಮೊಲೆ ನೆಲದೊಳ
ಗೊತ್ತಿ ಹೂಡಿದ ಕೈಗೋಲು
ಹೊತ್ತ ಬೆಳ್ಳರೆಕೂದಲೂ ಮುದಿಸೂಳೆಯರ
ಮೊತ್ತವೊಪ್ಪಿದುದಾಗಲ್ಲಿ[೧೫೪]
ಮಾಸಿದ ಸೀರೆ ಮಸಿಯ ತಿಲಕದ ಹೊರ
ಸೂಸುವ ಬಾಯ ಜೊಲ್ಲಿಂದ
ಕೇಶ ತುಂಬಿದ ಬೆಳ್ಳರೆಯ ಹಾಸ್ಯದ ಮುದಿ
ವೇಶಿಯರೆಡೆಯಾಡುತಿಹರು[೧೫೫]

ಕಣ್ಣುಗಳು ಮಂಜಾಗಿ, ಕಣ್ಣುಹುಬ್ಬು ಮತ್ತು ರೆಪ್ಪೆಗಳಿಗೆ ಕಾಡಿಗೆಯನ್ನು ಹಚ್ಚಿ ಮುಖವು ಹೊಳೆಯಲು ಎಣ್ಣೆಯನ್ನು ಹಚ್ಚಿ ಪ್ರಸಾಧನವನ್ನು ಲೇಪಿಸುತ್ತಿದ್ದರು. ತಾವು ಧರಿಸಿದ್ದ ಸೀರೆಯು ಅಲ್ಲಲ್ಲಿ ಹರಿದು ಹುಣ್ಣುಗಳೇನೋ ಎಂಬಂತೆ ಗಂಟುಗಳನ್ನು ಹಾಕಿದಂತೆ ಹೊಲಿಗೆಯನ್ನು ಹಾಕಲಾಗಿತ್ತು.

ಬಿದ್ದ ಮೊಲೆಯ ರವಿಕೆಯೊಳೇರಿಸಿ ಕಟ್ಟಿ
ಯೊದ್ದು ಸುಮ್ಮಾನದಲಿ ನೆಲನ
ಸುದ್ದಾಂಗದ ಪಾತ್ರವೆಣ್ಣುಗಳ್ತಾವೆಂದು
ಹೊದ್ದಿ ವಿಟರ ನಗಿಸುವರು[೧೫೬]

ಈ ರೀತಿಯಾಗಿ ವಯಸ್ಸಾದ ನಂತರವೂ ತಾವು ವೇಶ್ಯಾವಾಟಿಕೆಯನ್ನು ಬಿಡಲಾರದೆ ವಿಟಪುರುಷರನ್ನು ನಗಿಸುವ, ಹಾಡು, ನೃತ್ಯ, ಸಂಗೀತಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿ ತಮ್ಮ ಕೊನೆಯ ಜೀವನವನ್ನು ಸಾಗಿಸುತ್ತಿದ್ದರು.

ರಾಜಒಡೆಯರ ಕಾಲಾವಧಿಯಲ್ಲಿ ಮೊದಲಿಗೆ ವೇಶ್ಯಾಸ್ತ್ರೀಯರ ಉಲ್ಲೇಖವು ದಸರಾ ಉತ್ಸವದ ಸಂದರ್ಭದಲ್ಲಿ ಕಂಡುಬರುತ್ತದೆ. ಈ ವೇಶ್ಯಾಸ್ತ್ರೀಯರು ಗಾಯನ ನರ್ತನಗಳಲ್ಲಿ ಪರಿಣಿತರಾಗಿದ್ದು

ಉತ್ಸವವು ಅರಮನೆಯಿಂದ ಕೆಮ್ಮಣ್ಣು ಮಟ್ಟೆಯವರೆಗೂ ಹೊರಡುವಾಗ ಕಳಸ ಕನ್ನಡಿಗಳನ್ನು ಹಿಡಿದಿರುತ್ತಿದ್ದರು.[೧೫೭] ನವರಾತ್ರಿಯ ಸಂದರ್ಭದಲ್ಲಿ ಅವರವರ ಯೋಗ್ಯತೆ ಮತ್ತು ಮರ್ಯಾದೆಗಳಿಗೆ ತಕ್ಕಂತೆ ವಿವಿಧ ಭಾಗಗಳಿಂದ ಬಂದ ವೇಶ್ಯಾಸ್ತ್ರೀಯರಿಗೆ ಅರಸರು ಉಡುಗೊರೆಗಳನ್ನು ನೀಡುತ್ತಿದ್ದರು.[೧೫೮] ಅರಮನೆಯ ನಿತ್ಯಕಟ್ಟಳೆಯಾದ ಸಂಚಿಯ(ಎಲೆಅಡಿಕೆ) ಊಳಿಗ ಮತ್ತು ಕನ್ನಡಿಯ ಹಾಸಿಗೆಯ ಊಳಿಗವನ್ನು[೧೫೯] ನೇಮಿಸಿದರು. ಕ್ರಿ.ಶ.೧೬೮೭ರಲ್ಲಿ ಚಿಕ್ಕದೇವರಾಜ ಒಡೆಯರು ಸೈನ್ಯದ ಸಂಖ್ಯೆಯನ್ನು ಹೆಚ್ಚಿಸಿದರು. ಅದರಲ್ಲಿ ೧೨,೦೦೦ ಅಶ್ವದಳ ಮತ್ತು ಒಂದುಲಕ್ಷ ಕಾಲ್ದಳ ಹಾಗೂ ಅದಕ್ಕೆ ತಕ್ಕ ಹಾಗೆ ಕಾಮಾಟಿಗಳನ್ನು ಕೂಡ ನೇಮಿಸಿದರು.[೧೬೦] ಈ ಕಾಮಾಟಿಗಳಿಗೆ ಅವರವರ ಕೆಲಸಗಳಿಗೆ ಅನುಗುಣವಾಗಿ ವೇತನವು ಅರೆವಾಸಿಯಾಗಿದ್ದು, ಉಳಿದದ್ದು ಧಾನ್ಯರೂಪದಲ್ಲಿ ಸಲ್ಲುತ್ತಿತ್ತು.[೧೬೧] ಅಷ್ಟೇ ಅಲ್ಲದೆ ಉಳಿದ ಹದಿನಾರು ಚಾವಡಿಗಳಿಗೂ ಸಹ ಸೈನಿಕರನ್ನು ನೇಮಿಸಿ ಅವರಿಗೆ ತಕ್ಕಂತೆ ಶ್ರೀರಂಗಪಟ್ಟಣದ ಕೋಟೆಗೆ ಕಾಮಾಟಿಗಳು ಮತ್ತು ಚಂಗೂಲಿಗಳನ್ನು ಪಟ್ಟಣದ ಚಾವಡಿಯ ಅಧೀನದಲ್ಲಿ ನೇಮಿಸಿದ್ದು[೧೬೨] ಸೈನಿಕ ಕರ್ತವ್ಯ ನಿರ್ವಹಣೆಗೆ ಉಪಯುಕ್ತವಾಯಿತು. ಜೊತೆಗೆ ಅವರ ಒತ್ತಡವೂ ಕಡಿಮೆಯಾಗಿ ದಕ್ಷವಾಗಿ ಕಾರ್ಯನಿರ್ವಹಿಸಲು ಅವಕಾಶವನ್ನು ಒದಗಿಸಿತು. ಕಾಮಾಟಿಗಳು ಮತ್ತು ಚಂಗೂಲಿಗಳ ಕಾರ್ಯನಿರ್ವಹಣೆಯ ನಿಯಂತ್ರಣ ವೇತನಗಳು ಪಟ್ಟಣದ ಚಾವಡಿಗೆ ಸೇರಿದ್ದಿತು.[೧೬೩] ಉಗ್ರಾಣಗಳಲ್ಲಿ ಅಂದರೆ ಗುರಿಕಾರರು ಕರಣಿಕರು ಅಳತೆ ಮತ್ತು ತೂಕದವರ ಜೊತೆಗೆ ಕಾಮಾಟಿಗಳು ಚಂಗೂಲಿಗಳಿದ್ದರು. ಹುಲ್ಲುಮೆದೆಗಳಿಗೆ ಕಾಮಾಟಿಗಳಿಂದ ರಕ್ಷಣೆ ಒದಗಿಸಲಾಗುತ್ತಿತ್ತು.

ಖಾಸಾ ಚಾಮರಾಜ ಒಡೆಯರ ಅಧಿಕಾರಾವಧಿಯಲ್ಲಿ ಹೈದರ್ ಅಲಿಯು ಅರಮನೆಯ ಚಾಕರಿಯಲ್ಲಿದ್ದ ಪ್ರಾಕ್‌ಮುತ್ತಾದೆಯರು, ಅವ್ವೆಯರುಗಳಿಗೆ ಸಹ ಆಡಳಿತದಲ್ಲಿದ್ದಂತಹ ಅಧಿಕಾರಿಗಳಿಗೆ ನೀಡಿದಂತೆ ಉಂಬಳಿಗಳನ್ನಾಗಿ ಗಡಿಗಳಲ್ಲಿ ಅಲ್ಲಲ್ಲಿ ಉಂಬಳಿ ಗ್ರಾಮ ಭೂಮಿಗಳನ್ನು ನೀಡುವಂತೆ ನಿಬಂಧನೆ ಮಾಡಿದನು.[೧೬೪] ಕ್ರಿ.ಶ.೧೭೮೦ರಲ್ಲಿ ಆರ್ಕಾಟನ್ನು ಸಾಧಿಸಲು ಹೊರಟಾಗ ಎರಡು ಲಕ್ಷದ ಇಪ್ಪತ್ತು ಸಾವಿರ ಸೈನಿಕರ ಜೊತೆಗೆ ಆರುಸಾವಿರ ದಂಡಿನ ಕಾಮಾಟಿಗಳನ್ನು ನೇಮಕ ಮಾಡಿದನು.[೧೬೫] ಈ ಕಾಮಾಟಿಗಳನ್ನು ನೇಮಕ ಮಾಡಿದುದರ ಉದ್ದೇಶವೆಂದರೆ ಸೈನಿಕರನ್ನು ಮನೋಕಾಮನೆಗಳಿಂದ ಮತ್ತು ಒತ್ತಡಗಳಿಂದ ವಿಮುಕ್ತರನ್ನಾಗಿಸಿ ಅವರು ಉತ್ಸಾಹದಿಂದ ಯುದ್ಧಗಳಲ್ಲಿ ಪಾಲ್ಗೊಳ್ಳುವಂತೆ ಮಾಡುವುದಾಗಿತ್ತು. ಟಿಪ್ಪುವಿನ ಮರಣಾನಂತರ ಕ್ರಿ.ಶ.೧೭೯೯ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಪಟ್ಟಾಭಿಷೇಕ ಮಾಡುವ ಸಂದರ್ಭದಲ್ಲಿ ನರ್ತನ ಮಾಡುವ ವಾರಾಂಗನೆಯರು ಸಹ ಪಾಲ್ಗೊಂಡಿದ್ದರು ಈ ವಾರಾಂಗನೆಯರು. ನರ್ತಕಿಯರಾಗಿ ಹೆಸರುಗಳಿಸಿದ್ದರು. ಸಿಂಹಾಸನಾರೋಹಣ, ಅವರೋಹಣ ಕಾಲದಲ್ಲಿ ಇವರು ಅರಸರಿಗೆ ಕದಲಾರತಿ ಮತ್ತು ನವರತ್ನದ ಆರತಿಗಳನ್ನು ಎತ್ತುತ್ತಿದ್ದರು.

### ೩.೭.೨. ಗಣಿಕೆಯರ ಜೀವನ ಪದ್ಧತಿ

ಮೈಸೂರು ಒಡೆಯರ ಕಾಲದಲ್ಲಿ ಗಣಿಕೆಯರ ಜೀವನಕ್ಕೆ ಹಾಗೂ ಜೀವನ ಶೈಲಿಗೆ ತಿರಸ್ಕಾರದ ಮನೋಭಾವ ಇರಲಿಲ್ಲ. ಅಂದಿನ ಸಮಾಜದಲ್ಲಿ ರಾಜ್ಯವನ್ನು ರಕ್ಷಿಸುತ್ತಿದ್ದ ಸೈನಿಕರ ದೈಹಿಕ ಕಾಮನೆಗಳನ್ನು ತೀರಿಸುವಂತಹ ಒಂದು ಅತ್ಯವಶ್ಯಕ ಭಾಗವಾಗಿ ಇವರು ಸೇನೆಯಲ್ಲಿ ಕೆಲಸವನ್ನು ನಿರ್ವಹಿಸುತ್ತಿದ್ದರು. ಮೈಸೂರು ಒಡೆಯರ ಕಾಲದಲ್ಲಿ ಗೋವಿಂದ ವೈದ್ಯ, ಮಲ್ಲಿಕಾರ್ಜುನ, ತಿರುಮಲಾರ್ಯ, ಕೆಳದಿಯ ಲಿಂಗಣ್ಣ ಕವಿಯನ್ನೂ ಒಳಗೊಂಡಂತೆ ಮೈಸೂರು ಅರಸರ ಸಮಕಾಲೀನ ಕವಿಗಳ ಕಾವ್ಯಗಳಲ್ಲಿ ವೇಶ್ಯೆಯರು ಮತ್ತು ಅವರ ಸುದೀರ್ಘವಾದ ವರ್ಣನೆಗಳಿವೆ. ಸಮಾಜದಲ್ಲಿ ಎಲ್ಲರಿಗೂ ಒಂದು ನಿರ್ದಿಷ್ಠ ಸ್ಥಾನವಿದ್ದರೆ ಕಾಲಾನಂತರದಲ್ಲಿ ಗಣಿಕೆಯರಿಗೆ ಅತ್ಯಂತ ನಿಕೃಷ್ಟವಾದ ಮತ್ತು ಸಮಾಜದ ಕೆಳಹಂತದಲ್ಲಿ ಇವರು ಕೇವಲ ಭೋಗವಸ್ತುವಾಗಿ ಜೀವನ ನಡೆಸುತ್ತಿದ್ದರು.

ಗಣಿಕೆಯರಿಗೆ ತಮ್ಮದೇ ಆದ ಹಕ್ಕುಬಾದ್ಯತೆಗಳಿದ್ದರು ಸಹ ಅವರ ವ್ಯವಹಾರದಲ್ಲಿ ಗೌಪುತೆಯೇನೂ ಇರಲಿಲ್ಲ. ಆ ಕಾಲದಲ್ಲಿ ರಚನೆಯಾದ ಸಾಹಿತ್ಯಗಳಲ್ಲಿ ಉಲ್ಲೇಖವಿರುವಂತೆ ಶ್ರೀರಂಗಪಟ್ಟಣದಲ್ಲಿ ಉನ್ನತವರ್ಗದ ಗಣಿಕೆಯರೂ ಮತ್ತು ಸಾಮಾನ್ಯವರ್ಗದ ಗಣಿಕೆಯರೂ ಇದ್ದರು. ಇವರು ಸಂಗೀತ, ನೃತ್ಯ, ಬುದ್ದಿಶಕ್ತಿ ಹಾಗೂ ದೇಹಪೌಷ್ಠವಕ್ಕೂ ಗಮನಹರಿಸಬೇಕಾಗಿತ್ತು. ಪಗಡೆ, ಚದುರಂಗಗಳಂತಹ ಆಟಗಳಲ್ಲೂ ಮತ್ತು ದ್ಯೂತವಿನೋದಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಇದು ಅವರ ಮನೋರಂಜನಾ ಹವ್ಯಾಸಗಳಾಗಿದ್ದವು. ಇವರು ನಗರವಾಸಿಗಳಾಗಿದ್ದು, ಅವರಲ್ಲಿ ಹಲವರು ಸೌಂದರ್ಯವಂತರಾಗಿದ್ದರೆ, ಮತ್ತೆ ಹಲವಾರು ಮಂದಿ ಐಶ್ವರ್ಯವಂತೆಯರಾಗಿದ್ದರು. ಆಸ್ಥಾನದ ಪ್ರತಿಷ್ಠಿತರು, ಜನಸಾಮಾನ್ಯರು ಹಾಗೂ ಸೈನಿಕರು ಅವರ ಸಹವಾಸಕ್ಕೆ ಹಾತೊರೆಯುತ್ತಿದ್ದರು. ಯುದ್ಧ ಸಂದರ್ಭಗಳಲ್ಲಿ ಇವರಲ್ಲಿ ಸಾವಿರಾರು ಜನರು ಸೈನಿಕರನ್ನು ಹುರಿದುಂಬಿಸುವ ಮತ್ತು ಸೈನ್ಯದಲ್ಲಿ ಸೇವೆಸಲ್ಲಿಸುವ ಕಾರ್ಯವನ್ನು ಮಾಡಿದರೆ ಪ್ರತಿಷ್ಠಿತರೆನಿಸಿದ ಗಣಿಕೆಯರು ನಗರದಲ್ಲೇ ಉಳಿಯುತ್ತಿದ್ದರು. ಅಂದರೆ ನಗರದ ಸಂಪತ್ತು ಹೆಚ್ಚಿದಂತೆಲ್ಲ ವಿಲಾಸ ಜೀವನ ಬೆಳೆದು ಪುರುಷಪ್ರಧಾನ ಕುಟುಂಬಗಳ ಅಸ್ತಿತ್ವದಿಂದ ಮತ್ತು ಶತ್ರುಗಳ ಮೇಲೆ ಆಕ್ರಮಣ ಮಾಡಿದಾಗ ಕೈಗೆ ಸೆರೆಸಿಕ್ಕ ಸ್ತ್ರೀಯರನ್ನು ಹಿಡಿದುತಂದು ಬಲವಂತವಾಗಿ ಅವರನ್ನು ಈ ವೃತ್ತಿಯಲ್ಲಿ ತೊಡಗುವಂತೆ ಮಾಡಲಾಗುತ್ತಿತ್ತು. ಮಿತಿಮೀರಿದ ಭೋಗಲಾಲಸೆಯು ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರಗತಿಗೆ ಪ್ರತಿಬಂಧಕವಾಗುವುದೆಂದು ಸೂಚಿಸುವುದೇ ಗೋವಿಂದ ವೈದ್ಯನು ಕಂಠೀರವ ನರಸರಾಜ ವಿಜಯದಲ್ಲಿ ನೀಡಿರುವ ವೇಶ್ಯಾವಾಟಿಕೆ ವರ್ಣನೆಯ ಉದ್ದೇಶವಾಗಿರಬೇಕು. ದಿನನಿತ್ಯದ ರಾಜನ ಒಡ್ಡೋಲಗದಲ್ಲಿ ಉಪಸ್ಥಿತರಿದ್ದು ವಿಶೇಷ ಸಂದರ್ಭಗಳಾದ ಪಟ್ಟಾಭಿಷೇಕ, ಪುತ್ರೋತ್ಸವ, ವಿವಾಹ, ನವರಾತ್ರಿ, ಉತ್ಸವಗಳಂತಹ ಸಮಾರಂಭಗಳಲ್ಲಿ ರಾಜನ ಆಸ್ಥಾನದಲ್ಲಿ ಗಾನ, ನೃತ್ಯಗಳಿಂದ ಸಭಾಸದರ ಮನಸ್ಸನ್ನು ಸಂತೋಷಪಡಿಸಬೇಕಿತ್ತು.

ರಾಜನ ಆಸ್ಥಾನದಲ್ಲಿದ್ದ ಗಣಿಕೆಯರು ಅಂತಃಪುರದ ಪರಿಚಾರಿಕೆಯರಾಗಿ, ಸಜ್ಜೆವಳ್ತಿಯರಾಗಿ, ಅರಸರ ಅಂಗಮರ್ಧನ ಕಾರ್ಯವನ್ನು ಮಾಡುತ್ತಿದ್ದರು. ಅರಸರಿಗೆ ಗಂಧಜಲ ಮಾಲ್ಯಾಧಿಗಳನ್ನು ಒದಗಿಸುವುದು ಅವರ ಕಾಲೋಚಿತ ವೇಷಭೂಷಣಗಳನ್ನು ಸಜ್ಜುಗೊಳಿಸುವುದೇ ಮೊದಲಾದ ಕರ್ತವ್ಯಗಳು ಅವರಿಗೆ ಮೀಸಲಾಗಿದ್ದವು. ಅರಮನೆಯ ಊಳಿಗದಲ್ಲಿದ್ದ ಇವರು ಸಂಗೀತ ನೀತಿ ಕೋವಿದೆಯರೆಂದು ನಾನಾ ವಿದ್ಯಾವಂತೆಯರು ಮತ್ತು ಸರ್ವಶಾಸ್ತ್ರ ಕೋವಿದೆಯರೆಂದೂ ವರ್ಣಿತರಾಗಿದ್ದಾರೆ. ಸುಶಿಕ್ಷಿತೆಯರಾದ ಕೆಲವರು ಭಾಗವತ, ರಾಮಾಯಣ, ಮಹಾಭಾರತಗಳಂತಹ ಕಾವ್ಯವಾಚನವನ್ನು ಮಾಡುತ್ತಿದ್ದರೆಂದು ಕಂಠೀರವ ನರಸರಾಜ ವಿಜಯಂ ತಿಳಿಸುತ್ತದೆ. ಅದರಲ್ಲಿ ಸಂಚಿಯ ಹೊನ್ನಮ್ಮಳು ಅರಮನೆಯ ಸಂಚಿಯ(ಎಲೆಅಡಿಕೆ ನೀಡುವ) ಕಾಯಕದಲ್ಲಿದ್ದವಳು ತನ್ನ ಪ್ರತಿಭೆಯ ಫಲವಾಗಿ ಶೂದ್ರ ಜಾತಿಯವಳಾದರು ರಾಜರಾಣಿಯರು ಇಬ್ಬರ ಕೃಪೆಗೆ ಪಾತ್ರಳಾಗಿ ಕವಿಯಿತ್ರಿಯಾಗಿ ಹೆಸರು ಮಾಡಿದ್ದಳು. ಆದರೆ ಮೈಸೂರು ಒಡೆಯರ ಕಾಲದಲ್ಲಿ ಮೈಸೂರು ಸಂಸ್ಥಾನದ ರಾಜಧಾನಿಯನ್ನೊಳಗೊಂಡಂತೆ ಮೈಸೂರು ಪ್ರಾಂತ್ಯದಲ್ಲಿ ದೇವದಾಸಿ ಪದ್ಧತಿಯು ಅಸ್ತಿತ್ವದಲ್ಲಿರಲಿಲ್ಲ ಎಂದು ಕ್ರಿ.ಶ. ೧೭೫೭ರಿಂದ ೧೭೬೧ರ ವರೆಗೆ ಪ್ರವಾಸಿಯಾಗಿದ್ದ ಫಾದರ್ ಸಿನ್ನಾಮಿ[೧೬] ಮತ್ತು ಟಿಪ್ಪುವಿನ ನಂತರ ಮೈಸೂರು ಸಂಸ್ಥಾನಕ್ಕೆ ಭೇಟಿನೀಡಿದ್ದ ಬುಕಾನನ್ ತಮ್ಮ ವರದಿಗಳಲ್ಲಿ ತಿಳಿಸಿದ್ದಾರೆ.[೧೬]

ಕ್ರಿ.ಶ. ೧೭೯೯ ನಂತರ ದೇವದಾಸಿ ಪದ್ಧತಿಯು ಒಂದು ಪಿಡುಗಾಗಿ ಬೆಳೆಯ ತೊಡಗಿತು. ದೇವಾಲಯಗಳಲ್ಲಿ ದೇವದಾಸಿಯರ ನೇಮಕವಾಗುತ್ತಿದ್ದ ಈ ದೇವದಾಸಿಯರು ಟಿಪ್ಪು ಸುಲ್ತಾನನ ಮರಣದ ನಂತರ ಸನಾತನ ಧರ್ಮದ ವಿಷಯ ಲಂಪಟತನಕ್ಕೆ ಬಲಿಯಾಗಿ ಸಮಾಜದ ಮುಖಂಡರ ಕಾಮತೃಪ್ತಿಗಾಗಿ ಬೇಕಾಗಿದ್ದ ಬೋಗದ ವಸ್ತುಗಳಾಗಿ ರೂಪಿತವಾದರು. ಈ ಹೇಯಪದ್ಧತಿಯನ್ನು ಕೊನೆಗಾಣಿಸಲು ಬ್ರಿಟಿಷ್ ಸರ್ಕಾರದೊಡನೆ ಕ್ರಿ.ಶ. ೧೯೦೯ರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಒಂದು ಸುತ್ತೋಲೆಯನ್ನು ಹೊರಡಿಸಿದರು. ಇದು ದಿಟ್ಟತನದ ತೀರ್ಮಾನವಾಗಿದ್ದು. ಅಂದಿನ ಬ್ರಿಟಿಷರ ಅಧೀನದಲ್ಲಿದ್ದ ಆಂಗ್ಲ ಪತ್ರಿಕೆಗಳು ನಾಲ್ವಡಿಯವರನ್ನು ಪ್ರಶಂಸಿದವು. ಪ್ರಾಚೀನ ಕಾಲದಿಂದಲೂ ಈ ದೇವದಾಸಿ ಪದ್ಧತಿ ಅಸ್ತಿತ್ವದಲ್ಲಿದ್ದರೂ ಸಹ ಅದು ಅನಿಷ್ಠ ಪದ್ಧತಿಯಾಗಿರಲಿಲ್ಲ. ಸಮಾಜದಲ್ಲಿ ಗೌರವ ಮತ್ತು ಉನ್ನತಸ್ಥಾನವನ್ನು ಹೊಂದಿದ್ದ ಈ ಪದ್ಧತಿಯು ಮುಂದೆ ಕ್ರಿ.ಶ. ೧೮ ಮತ್ತು ೧೯ನೆಯ ಶತಮಾನದಲ್ಲಿ ತನ್ನ ಮೂಲ ಸ್ವರೂಪವನ್ನು ಸಂಪೂರ್ಣವಾಗಿ ಕಳೆದುಕೊಂಡು ಅವರು ಸಲ್ಲಿಸುವ ಸೇವೆ ಮತ್ತು ಸ್ಥಾನಗಳು ಕೀಳುಮಟ್ಟಕ್ಕಿಳಿದು ವೇಶ್ಯೆಯರಾದರೆಂದು ತಿಳಿದುಬರುತ್ತದೆ.

ಸಾಮಾನ್ಯವಾಗಿ ಈ ದೇವದಾಸಿಯರೆಲ್ಲ ಮೂಲತಃ ಸಮಾಜದ ಕೆಳವರ್ಗದ ಶೋಷಿತ ಸಮುದಾಯದವರಾಗಿದ್ದರು. ಇದೇ ರೀತಿ ಬಸವಿ ಬಿಡುವ ಪದ್ಧತಿಯು ಸಹ ಅಸ್ತಿತ್ವದಲ್ಲಿದ್ದು, ಗ್ರಾಮ ದೇವತೆಗಳ ದೇವಾಲಯಗಳಲ್ಲಿನ ಸೇವೆಗಾಗಿ ಅವರನ್ನು ಅರ್ಪಿಸಲಾಗುತ್ತಿತ್ತು. ಈ

ಪದ್ಧತಿಯನ್ನು ಕ್ರಿ.ಶ.೧೮೯೨ರಲ್ಲಿ ನಂಜನಗೂಡಿನ ಭೋಗನಂದೀಶ್ವರ ದೇವಾಲಯದಲ್ಲಿ ಕಾನೂನಾತ್ಮಕವಾಗಿ ನಿಷೇಧಿಸಲಾಯಿತು. ಕ್ರಿಶ. ೧೯೦೯ರಲ್ಲಿ ನಾಲ್ವಡಿಯವರು ತನ್ನ ಪಾವಿತ್ರತೆಯನ್ನು ಕಳೆದುಕೊಂಡಿರುವ ದುಷ್ಟ ಪದ್ಧತಿಯೆಂದು ಸರ್ಕಾರ ಆಜ್ಞೆಯನ್ನು ಹೊರಡಿಸಿದರು. ಕ್ರಿ.ಶ. ೧೯೧೦ರಲ್ಲಿ ಮುಜರಾಯಿ ಇಲಾಖೆಯ ಅಡಿಯಲ್ಲಿ ಬರುವ ದೇವಾಲಯಗಳಲ್ಲಿ ಗೆಜ್ಜೆಪೂಜೆ ಸಮಾರಂಭ ಏರ್ಪಡಿಸಬಾರದೆಂದು ಆಜ್ಞೆಯನ್ನು ಹೊರಡಿಸಿತು.[೧೬]

ವೇಶ್ಯಾವೃತ್ತಿಯನ್ನು ತಡೆಯಲು ಆಧುನಿಕ ಕಾಲದ ಮೈಸೂರಿನಲ್ಲಿ ಪ್ರಯತ್ನಗಳು ನಡೆದವು. ವೇಶ್ಯಾವೃತ್ತಿಯನ್ನು ತಡೆಗಟ್ಟಲು ಮೊದಲು ಪ್ರಮುಖ ನಗರಗಳಲ್ಲಿನ ವೇಶ್ಯಾವೃತ್ತಿಯ ವ್ಯವಸ್ಥೆಯನ್ನು ಕುರಿತು ಅಧ್ಯಯನ ಮಾಡಲು ಒಂದು ಪ್ರತ್ಯೇಕ ಸಮಿತಿಯನ್ನು ನೇಮಿಸಲಾಯಿತು. ಬೆಂಗಳೂರು, ಮೈಸೂರುಗಳಲ್ಲಿ ವೇಶ್ಯಾವೃತ್ತಿಯನ್ನು ತೊಡೆದುಹಾಕಲು ಕಾನೂನುಗಳನ್ನು ಜಾರಿಗೆ ತರಬೇಕೆಂದು. ಈ ಸಮಿತಿಯು ತಿಳಿಸಿತು. ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದ ಹೆಚ್.ಸಿ.ದಾಸಪ್ಪನವರು ಕೂಡ ವೇಶ್ಯಾವೃತ್ತಿಯನ್ನು ಸಂಪೂರ್ಣವಾಗಿ ತೊಡೆದುಹಾಕಲು ಸಾಧ್ಯವಿಲ್ಲ. ಆದ್ದರಿಂದ ಸರ್ಕಾರ ಕಾನೂನನ್ನು ಜಾರಿಗೆತರಬೇಕೆಂದು ತಮ್ಮ ಅಭಿಮತವನ್ನು ಸೂಚಿಸಿದರು. ಆದರೆ ಹೆಚ್ಚಿನ ಸಂಖ್ಯೆಯ ಸದಸ್ಯರು ವಿರೋಧಿಸಿದ್ದರಿಂದ ಕ್ರಿಶ.೧೯೩೫ರಲ್ಲಿ ಆತಂಕಕಾರಿ ಬೆಳವಣಿಗೆಯು ಈ ವೃತ್ತಿಯಲ್ಲಿ ಆಗಿದ್ದರಿಂದ ಕ್ರಿಶ. ೧೯೩೬ ಜುಲೈ ೧೪ರಂದು Suppersion of Immoral Act ಎಂಬ ಕಾಯ್ದೆಯನ್ನು ಜಾರಿಗೆ ತಂದರು. ಈ ಕಾಯ್ದೆಯ ಪ್ರಕಾರ ಸಾರ್ವಜನಿಕ ಸ್ಥಳಗಳಲ್ಲಿ ವೇಶ್ಯಾಕಾರ್ಯಕ್ಕೆ ಕೈ ಹಾಕಿದರೆ ಹಾಗೂ ಇದರ ಮೂಲಕ ಸಾರ್ವಜನಿಕರಿಗೆ ತೊಂದರೆ ನೀಡಿದರೆ ಎರಡು ತಿಂಗಳ ಸೆರೆವಾಸ ಮತ್ತು ೨೦೦ ರೂಪಾಯಿಗಳ ದಂಡವನ್ನು ವಿಧಿಸುವ ಅಧಿಕಾರವನ್ನು ಹೊಂದಿತ್ತು. ಹೀಗೆ ಕಾನೂನನ್ನು ಜಾರಿಗೆ ತರುವ ಮೂಲಕ ವೇಶ್ಯಾವೃತ್ತಿಯನ್ನು ನಿಯಂತ್ರಿಸಲು ಪ್ರಯತ್ನಿಸಲಾಯಿತು. ಮೇಲ್ಕಂಡ ಎಲ್ಲಾ ಅಂಶಗಳು ಸಹ ಮೈಸೂರು ಒಡೆಯರ ಕಾಲದ ವೇಶ್ಯಾವೃತ್ತಿ ನಿಯಂತ್ರಣದಲ್ಲಿ ಪ್ರಮುಖ ಪಾತ್ರವನ್ನುವಹಿಸಿವೆ.

ಹೀಗೆ ಮೈಸೂರು ಒಡೆಯರ ಕಾಲದಲ್ಲಿ ಸೈನಿಕ ಆಡಳಿತದಲ್ಲಿ ಆದಂತಹ ವಿವಿಧ ರೀತಿಯ ಬದಲಾವಣೆಗಳನ್ನು ಕುರಿತು ಚರ್ಚಿಸಲಾಗಿದೆ.

ಟಿಪ್ಪಣಿಗಳು

೧. ಸೋಮಶೇಖರ್ ಎಸ್.ವೈ., ೨೦೦೯., ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿ., ಪು.೭೦
೨. ಅದೇ, ಪು.೭೦
೩. ರಾಮಕೃಷ್ಣರಾವ್ ಬಿ., ೧೯೧೬., ಶ್ರೀಮನ್ಮಹಾರಾಜರ ವಂಶಾವಳಿ-ಭಾಗ-೧., ಪು. ೪೨-೪೩
೪. ಸೋಮಶೇಖರ್ ಎಸ್.ವೈ., ೨೦೦೯.,ಪೂರ್ವೋಕ್ತ, ಪು.೭೩
೫. ಅದೇ., ಪು.೭೩
೬. ರಾಮಕೃಷ್ಣರಾವ್ ಬಿ., ಪೂರ್ವೋಕ್ತ., ಪು.೧೭೧
೭. ಸೋಮಶೇಖರ್ ಎಸ್.ವೈ., ಪೂರ್ವೋಕ್ತ., ಪು.೭೪
೮. ಸೋಮಶೇಖರ್ ಎಸ್.ವೈ., ೨೦೧೬., ಕರ್ನಾಟಕದ ಬಿರುದಾವಳಿಗಳು., ಪು.೨೦೧
೯. ರಾಮಕೃಷ್ಣರಾವ್ ಬಿ., ಪೂರ್ವೋಕ್ತ., ಪು.೫೪
೧೦. ಅದೇ, ಪು.೫೮
೧೧. ಅದೇ, ಪು.೬೨
೧೨. ಅದೇ, ಪು.೯
೧೩. ಅದೇ, ಪು.೧೦೩
೧೪. ಗೋಪಾಲ್ ಆರ್(ಸಂ)., ೨೦೦೮., ದಿವಾನ್ ಪೂರ್ಣಯ್ಯ., ಪು.೧೯೦
೧೫. ಶ್ಯಾಮಲಾ ಸಿ.ಆರ್., ೨೦೧೭., ಪೂರ್ವ ಕರ್ನಾಟಕದ ಪಾಳೆಯಗಾರರು., ಪು.೨೭೩
೧೬. ರಾಮಕೃಷ್ಣರಾವ್ ಬಿ., ಪೂರ್ವೋಕ್ತ., ಪು.೨೧೮
೧೭. ಅದೇ., ಪು.೨೪೮-೨೫೭
೧೮. ಅದೇ., ಪು.೧೭೧
೧೯. ಅದೇ., ಪು.೨೯-೩೦
೨೦. ಅದೇ., ಪು.೨೧೮-೨೧೯
೨೧. ಗೋಪಾಲ್ ಆರ್.(ಸಂ)., ಸ್ವಾಮಿ ಲ.ನಾ(ಲೇ)., ೨೦೧೦., ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೩೧೭
೨೨. ಅದೇ., ಪು.೩೩೦
೨೩. ಅದೇ., ಪು.೩೩೧.
೨೪. ಅದೇ., ಪು.೩೩೨-೩೩೩
೨೫. ಗೋಪಾಲ್ ಆರ್(ಸಂ)., ೨೦೧೦., ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೩೩೫-೩೩೭
೨೬. ಅದೇ., ಪು.೩೩೭-೩೩೮

೨೭. ಸುಧಾಮಣಿ ಬಿ.ವಿ., ೨೦೦೯., ದಳವಾಯಿ ನಂಜಯ್ಯನ ಕಾಲದ ಮೈಸೂರು., ಪು.೧೦

೨೮. ರೈಸ್ ಬಿ.ಎಲ್., ೧೮೭೮., ಮೈಸೂರು ಗೆಜೆಟಿಯರ್ ಸಂಪುಟ-೧., ಪು.೩೭೦

೨೯. ರಾಮಕೃಷ್ಣರಾವ್ ಬಿ., ಪೂರ್ವೋಕ್ತ., ಪು.೪೫-೪೬

೩೦. ಹಯವದನ್‌ರಾವ್ ಸಿ., ಹಿಸ್ಟರಿ ಆಫ್ ಮೈಸೂರು-ಸಂ.೧., ಪು.೬೯

೩೧. ರಾಮಕೃಷ್ಣರಾವ್ ಬಿ., ಪೂರ್ವೋಕ್ತ., ಪು.೪೭

೩೨. ಸುಧಾಮಣಿ ಬಿ.ವಿ., ಪೂರ್ವೋಕ್ತ., ಪು.೨೭

೩೩. ಅದೇ., ಪು.೨೮

೩೪. ರಾಮಕೃಷ್ಣರಾವ್ ಬಿ., ಪೂರ್ವೋಕ್ತ., ಪು.೬೮

೩೫. Miles. W., A History of Hyder naik or Keermani's Hyder naama page no 123

೩೬. ರಾಮಕೃಷ್ಣರಾವ್ ಬಿ., ಪೂರ್ವೋಕ್ತ., ಪು.೬೮

೩೭. ಅದೇ., ಪು.೩೬

೩೮. ಅದೇ., ಪು.,೧೦೩

೩೯. ಸುಧಾಮಣಿ ಬಿ.ವಿ., ಪೂರ್ವೋಕ್ತ., ಪು.೧೮೬

೪೦. ಅದೇ., ಪು.೧೬೪

೪೧. ಅದೇ., ಪು.೧೬೭

೪೨. Vikram Sampath, 2008, Splendours of Royal Mysore – The untold Story of the wodeyars, page no 222

೪೩. Sydenham., 1914., India and the War., page no.651

೪೪. Ibd. Page no 654

೪೫. ಸುಧಾಮಣಿ ಬಿ.ವಿ., ಪೂರ್ವೋಕ್ತ., ಪು.೫೮

೪೬. ರಾಮಕೃಷ್ಣರಾವ್ ಬಿ., ಪೂರ್ವೋಕ್ತ., ಪು.೧೮೨

೪೭. ಅದೇ., ಪು.೧೮೩

೪೮. ಅದೇ., ಪು.೧೮೭

೪೯. ಅದೇ., ಪು.೧೮೭

೫೦. ಮುದ್ದಾಚಾರಿ ಬಿ., ೨೦೦೧., ಮರಾಠರ ಆಕ್ರಮಣ ಮೈಸೂರಿನ ಪ್ರತಿಭಟನೆ., ಪು.೧೨೯

೫೧. ಗೋಪಾಲ್ ಆರ್(ಸಂ), ಮೊಹಮ್ಮದ್ ಶರೀಫ್ ಕೆ(ಲೇ)., ೨೦೦೮., ದಿವಾನ್ ಪೂರ್ಣಯ್ಯ., ಪು.೧೫

೫೨. ಅದೇ., ಪು.೧೬

೫೩. ಅದೇ., ಪು.೧೭

೫೪. ಗೋಪಾಲ್ ಆರ್(ಸಂ), ಸದಾಶಿವ ಕೆ.(ಲೇ)., ೨೦೧೦., ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೫೦೭

೫೫. ಅದೇ., ಪು.೫೦೮

೫೬. ಫ್ರಾನ್ಸಿಸ್ ಬುಕಾನನ್., ೧೮೭೦., ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದ ಕಂಟ್ರೀಸ್ ಆಫ್ ಮೈಸೂರು ಕೆನರಾ ಅಂಡ್ ಮಲಬಾರ್., ಪು.೨೯೮

೫೭. ಸುಂದರರಾವ್ ಬ.ನ., ೨೦೧೧., ಬೆಂಗಳೂರಿನ ಇತಿಹಾಸ., ಪು.೧೦೪

೫೮. ಅದೇ., ಪು.೧೦೮

೫೯. ರಾಮಕೃಷ್ಣರಾವ್ ಬಿ., ಪೂರ್ವೋಕ್ತ., ಪು.೯೯೧

೬೦. ಸುಂದರರಾವ್ ಬ.ನ., ಪೂರ್ವೋಕ್ತ., ಪು.೧೬೪-೧೬೫

೬೧. ತಿಪ್ಪೇಸ್ವಾಮಿ ಎಸ್., ೨೦೦೪., ರಕ್ಷಣಾ ವಾಸ್ತುಶಿಲ್ಪ - ಚಿತ್ರದುರ್ಗ ಜಿಲ್ಲೆ, ಅಪ್ರಕಟಿತ ಪಿಹೆಚ್.ಡಿ. ಮಹಾಪ್ರಬಂಧ., ಪು.೭೭

೬೨. Talboys Wheeles. J.,1886., India under the British rule., Page no 423

೬೩. ಸೋಮಶೇಖರ್ ಎಸ್.ವೈ., ೨೦೦೯., ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧ ನೀತಿ. ಪು.೪೩-೪೫

೬೪. ಶರ್ಮಾ ತಿ.ತಾ., ೧೯೭೯., ಗೋವಿಂದ ವೈದ್ಯಕೃತ ಕಂಠೀರವ ನರಸರಾಜ ವಿಜಯಂ., ಪು.೩೨

೬೫. ರಾಮಕೃಷ್ಣರಾವ್.ಬಿ., ಪೂರ್ವೋಕ್ತ, ಪು ೧೦೧

೬೬. ಅದೇ, ಪು. ೧೦೩

೬೭. ಅದೇ, ಸಂಪುಟ ೨, ಪು.೧೩

೬೮ ಅದೇ, ಭಾಗ ೧ ಪು. ೧೨೮

೬೯. ಅದೇ, ಪು. ೧೪೬

೭೦. ಸುಂದರ ರಾವ್ ಬ.ನ., ೨೦೧೧, ಬೆಂಗಳೂರಿನ ಇತಿಹಾಸ ಪು. ೧೧೦

೭೧. ಅದೇ, ಪು ೧೩೮-೧೩೯. ೧೧೮-೧೨೦

೭೨. Sham rao ., History Of Mysore. Page no 232

೭೩. ಸುಂದರ ರಾವ್ ಬ.ನ., ೨೦೧೧ ಪೂರ್ವೋಕ್ತ ಪು.೧೭೯-೧೮೦

೭೪. ಅದೇ ಪು. ೨೩೫

೭೫. ರಾಜ್ಯ ಪತ್ರಾಗಾರ ಇಲಾಖೆ, ಕಿಲ್ಲೆ ಕಛೇರಿ ಕಡತಸಂಖ್ಯೆ ೧೯೧೩/೩ ಪುಟ.೪

೭೬. ಕಿಲ್ಲೆ ಕಛೇರಿ. ಮಿಲಿಟರಿ ಕಡತ ಕಡತ ಸಂಖ್ಯೆ ೧/೧೯೧೪ ಪು.೧-೩

೭೭. ಅದೇ, ಪು. ೧/೧೯೧೫

೭೮. ಅದೇ, ಪು. ೩/೧೯೧೫

೭೯. ಅದೇ, ಪು. ೭/೧೯೧೫

೮೦. ಅದೇ, ಪು. ೪/೧೯೧೯

೮೧. ಅದೇ, ಪು. ೪/೧೯೧೯
೮೨. ಅದೇ, ಪು. ೨/೧೯೧೮
೮೩. ಅದೇ, ಪು. ೧/೧೯೧೯
೮೪. ಅದೇ, ಪು. ೪/೧೯೧೯
೮೫. ಅದೇ, ಪು. ೨/೧೯೧೯
೮೬. ಅದೇ, ಪು. ೪/೧೯೧೯
೮೭. ಜಿಲ್ಲಾ ಕಛೇರಿ ಮಿಲಿಟರಿ ಕಡತ ಸಂಖ್ಯೆ ೨/೧೯೧೬
೮೮. ಅದೇ, ಪು. ೨/೧೯೧೬
೮೯. ಅದೇ, ಪು. ೨/೧೯೧೬
೯೦. ಅದೇ, ಪು. ೨/೧೯೧೩
೯೧. ಅದೇ, ಪು. ೩/೧೯೧೨
೯೨. ಅದೇ, ಪು. ೩/೧೯೧೩
೯೩. ಅದೇ, ಪು. ೩/೧೯೧೩
೯೪. ಅದೇ, ಪು. ೩/೧೯೧೩
೯೫. ಅದೇ, ಪು. ೩/೧೯೧೩
೯೬. ಅದೇ, ಪು. ೩/೧೯೧೩
೯೭. ಅದೇ, ಪು. ೩/೧೯೧೩
೯೮. ಅದೇ, ಪು. ೩/೧೯೧೩
೯೯. ಅದೇ, ಪು. ೩/೧೯೧೩
೧೦೦. ಅದೇ, ಪು. ೩/೧೯೧೩
೧೦೧. ಅದೇ, ಪು. ೩/೧೯೧೩
೧೦೨. ಅದೇ, ಪು. ೩/೧೯೧೩
೧೦೩. ರಾಮಕೃಷ್ಣರಾವ್ ಬಿ., ೧೯೧೬., ಶ್ರೀಮನ್ಮಹಾರಾಜರ ವಂಶಾವಳಿ ಬಾಗ-೧, ಪು.೪೫
೧೦೪. ಅದೇ, ಪು. ೮೯
೧೦೫. ಅದೇ, ಪು. ೧೧೭
೧೦೬. ಅದೇ, ಪು. ೧೧೯
೧೦೭. ಅದೇ, ಪು. ೧೨೦-೧೨೧
೧೦೮. ಅದೇ, ಪು. ೧೨೬
೧೦೯. ಅದೇ, ಪು. ೧೪೭
೧೧೦. ಅದೇ, ಪು. ೧೪೯
೧೧೧. ಅದೇ, ಸಂಪುಟ ೧., ಪು ೧೯-೩೦
೧೧೨. ಅದೇ, ಪು. ೨೭
೧೧೩. ಪ್ರಾಚೀನ ಕರ್ನಾಟಕದ ಪೊಲೀಸ್ ವ್ಯವಸ್ಥೆ; ಪುಟ. ೧೧೯

೧೧೪. ಸೋಮಶೇಖರ್ ಎಸ್.ವೈ., ೨೦೦೯ ಪೂರ್ವೋಕ್ತ, ಪುಟ. ೯೩

೧೧೫. ಮಂಜಪ್ಪ ಶೆಟ್ಟಿ ಎಂ.ಪಿ., ೧೯೯೬, ಮದ್ದಗಿರಿ ನಂಜಪ್ಪ ವಿರಚಿತ ಕೃಷ್ಣರಾಜ ವಿಲಾಸ, ಪುಟ. ೨೫

೧೧೬. ರಾಮಕೃಷ್ಣರಾವ್ ಬಿ., ೧೯೧೬ ಪೂರ್ವೋಕ್ತ (ಭಾಗ೧) ಪು–೧೪೨

೧೧೭. ಭೋಯಿ ಮ.ಬಾ., ೧೯೯೯, ತಿರುಮಲಾರ್ಯ ವಿರಚಿತ ಚಿಕ್ಕದೇವರಾಯ ವಂಶಾವಳಿ, ಪು.೯೮

೧೧೮. ಸುಂದರಾವ್ ಬ.ನ., ಪೂರ್ವೋಕ್ತ ಪು.೧೯೧

೧೧೯. ರಾಮಕೃಷ್ಣರಾವ್ ಬಿ., ಪೂರ್ವೋಕ್ತ, ಪು.೧೭೬

೧೨೦. ಭಾನುಮತಿ ವೈ.ಸಿ., ೧೯೯೬, ಕೃಷ್ಣಶರ್ಮ ವಿರಚಿತ ಸರಜಾ ಹನುಮೇಂದ್ರ ಯಶೋವಿಲಾಸಂ, ಪು.೧೫

೧೨೧. ಅದೇ ಪು. ೧೬

೧೨೨. ಸೋಮಶೇಖರ್ ಎಸ್.ವೈ., ಪೂರ್ವೋಕ್ತ ಪು–೯೫–೯೭

೧೨೩. ರಾಮಕೃಷ್ಣರಾವ್ ಬಿ., ಪೂರ್ವೋಕ್ತ ಪು–೧೧೭

೧೨೪. ಅದೇ, ಪು. ೧೪೨–೧೪೫

೧೨೫. ಅದೇ, ಪು. ೧೪೪

೧೨೬. ಅದೇ, ಪು. ೧೪೫–೧೪೬

೧೨೭. ಅದೇ, ಪು. ೧೪೯

೧೨೮. ಅದೇ, ಪು. ೧೮೯

೧೨೯. ಅದೇ, ಪು. ೨೧೨

೧೩೦. ಅದೇ, ಪು. ೨೨೪

೧೩೧. ಅದೇ, ಪು. ೨೨೭

೧೩೨. ಅದೇ, ಪು. ೨೪೧

೧೩೩. ಗೋಪಾಲ್ ಆರ್ ಮತ್ತು ನರೇಂದ್ರ ಪ್ರಸಾದ್ ಎಸ್., ೨೦೦೪, ಮುಮ್ಮಡಿ ಕೃಷ್ಣರಾಜ ಒಡೆಯರು ಒಂದು ಚಾರಿತ್ರಿಕ ಅಧ್ಯಯನ, ಪು ೪೦–೪೧

೧೩೪. ಪುಟ್ಟಸ್ವಾಮಿ ಬಿ.ಎಸ್., ೨೦೦೭, ಕೈಫಿಯತ್ತು ಕಂಡ ರಾಜಕೀಯ ಚರಿತ್ರೆ, ಪುಟ ೧೩೭–೧೩೮

೧೩೫. ರಾಮೇಗೌಡ, ೨೦೧೦ ಕನ್ನಡ ಕಾವ್ಯಗಳಲ್ಲಿ ಐಹಾಸಿಕ ವಿಚಾರಗಳು, ಪು–೨೭೭

೧೩೬. ಅದೇ ಪು. ೨೯೬

೧೩೭. ಅನಂತರಾಮಯ್ಯ ಆರ್.ಎಲ್., (ಅನು) ಮರಾಠರ ಆಡಳಿತ ವ್ಯವಸ್ಥೆ ಸಂ.೨, ಪು ೩೬೭

೧೩೮. Thurston .E 1913 The madrass presidency with the Mysore, coorg and the associated states Page no 435

೧೩೯. ಸುಂದರಾವ್ ಬ.ನ., ೨೦೧೧, ಬೆಂಗಳೂರಿನ ಇತಿಹಾಸ, ಪುಟ ೧೨೩

೧೪೦. Sydenham., 1914., India and the War., 124

೧೪೧. Meadows Taylor.,1840 .,Tippoo sultan –Vol-I., 454

೧೪೨. Macmunn G.F., 1911., Armouries of India., 244

೧೪೩. ಸೋಮಶೇಖರ್ ಎಸ್.ವೈ., ಪೂರ್ವೋಕ್ತ ಪುಟ ೨೫

೧೪೪. ಶಾಮಾಶಾಸ್ತ್ರಿ ಆರ್.,೧೯೭೧, ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯಂ ಪುಟ.೧೯

೧೪೫. ಅದೇ, ಪು. ೨೧

೧೪೬. ಅದೇ, ಪು. ೨೩

೧೪೭. ಅದೇ, ಪು. ೧೧೫

೧೪೮. ಅದೇ, ಪು. ೧೧೦

೧೪೯. ಅದೇ, ಪು. ೧೧೬

೧೫೦. ರಾಮಕೃಷ್ಣರಾವ್ ಬಿ., ಪೂರ್ವೋಕ್ತ ೧೩೬

೧೫೧. ಸುಂದರರಾವ್ ಬಿ.ನ., ಪೂರ್ವೋಕ್ತ ಪುಟ ೨೩೦

೧೫೨. ರಾಮಕೃಷ್ಣರಾವ್ ಬಿ. ಪೂರ್ವೋಕ್ತ ಪುಟ ೧೪೨

೧೫೩. ಅದೇ, ಪು. ೪೨

೧೫೪. ಅದೇ, ಪು. ೭೨

೧೫೫. ಅದೇ, ಭಾಗ-೨ ಪುಟ ೧೭

೧೫೬. ಅದೇ, ಪು. ೨೧

೧೫೭. ಅದೇ, ಪು. ೩೭

೧೫೮. ಶಾಮಾಶಾಸ್ತ್ರಿ ಆರ್, ೧೯೭೧ ಪೂರ್ವೋಕ್ತ

೧೫೯. ಅದೇ, ಪು. ೨೭

೧೬೦. ಅದೇ, ಪು. ೨೮

೧೬೧. Heming waly 1907 Trichinopoly., Page no 253

೧೬೨. Gribble G.B., 1896.,History of Deccan., page no 545

೧೬೩. Ibd., Page no 431

೧೬೪. ರಾಮಕೃಷ್ಣರಾವ್ ಬಿ. ಪೂರ್ವೋಕ್ತ, ಪು. ೧೮೩

೧೬೫. ಗೋಪಾಲ್ ಆರ್ ಮತ್ತು ನರೇಂದ್ರಪ್ರಸಾದ್ ಪೂರ್ವೋಕ್ತ ಪು. ೧೮೩

೧೬೬. ಅದೇ, ಪು. ೧೩೪

೧೬೭. ಸುಂದರರಾವ್ ಬ.ನ. ಪೂರ್ವೋಕ್ತ ಪು. ೨೮೩

ಅಧ್ಯಾಯ : ನಾಲ್ಕು

# ಯುದ್ಧ ವ್ಯವಸ್ಥೆ ಮತ್ತು ಯುದ್ಧೋಪಕರಣಗಳು

ಅಧ್ಯಾಯ : ನಾಲ್ಕು

# ಯುದ್ಧ ವ್ಯವಸ್ಥೆ ಮತ್ತು ಯುದ್ಧೋಪಕರಣಗಳು

ಪ್ರಾಚೀನ ಕಾಲದಿಂದಲೂ ನಿರ್ದಿಷ್ಟವಾದ ಒಂದು ಭೂಪ್ರದೇಶದಲ್ಲಿ ಒಬ್ಬ ವ್ಯಕ್ತಿಯಿಂದ ಅಥವಾ ವ್ಯಕ್ತಿಗಳಿಂದ ಪಾಳೆಯಪಟ್ಟುಗಳು, ರಾಜ್ಯಗಳು ಮತ್ತು ಸಾಮ್ರಾಜ್ಯಗಳು ಸ್ಥಾಪನೆಯಾಗಿವೆ. ಇವುಗಳನ್ನು ನಿಯಂತ್ರಿಸಲು ದಕ್ಷನೂ, ಸಮರ್ಥನೂ ಆದಂತಹ ವ್ಯಕ್ತಿಯ ಅಗತ್ಯವಿದೆ. ಇಲ್ಲಿ ಅಧಿಕಾರವು ಏಕವ್ಯಕ್ತಿಯಲ್ಲಿ ಕೇಂದ್ರೀಕೃತವಾಗಿರುವುದರಿಂದ ಅವನು ಪ್ರಬಲನಾಗಿರುವ ಅವಶ್ಯಕತೆಯಿದೆ. ಇವರು ನೆರೆಹೊರೆಯ ರಾಜ್ಯಗಳಿಂದ ಆಕಸ್ಮಿಕವಾದ ಅಥವಾ ಉದ್ದೇಶಪೂರ್ವಕವಾದ ದಾಳಿ, ಆಕ್ರಮಣ ಹಾಗೂ ಯುದ್ಧಗಳನ್ನು ಎದುರಿಸಬೇಕಾದ ಸಂದರ್ಭಗಳು ಒದಗಿಬರುತ್ತಿದ್ದವು. ಕೆಲವೊಮ್ಮೆ ಯಾವುದೇ ಉದ್ದೇಶಗಳಿಗಲ್ಲದೆ ಒಮ್ಮಿಂದೊಮ್ಮೆಲೇ ದಾಳಿಗಳನ್ನು ನಡೆಸಲಾಗುತ್ತಿತ್ತು. ಇವುಗಳಿಂದ ತಪ್ಪಿಸಿಕೊಳ್ಳಲು ಮಾಡುತ್ತಿದ್ದ ಹೋರಾಟದ ರಕ್ಷಣಾ ವಿಧಾನವೇ ಯುದ್ಧವಾಗಿದ್ದಿತು.

ಯಾವುದೇ ಯುದ್ಧಗಳು ಪ್ರಭುತ್ವದ ಮೇಲೆ ಅಧಿಕಾರ ಚಲಾಯಿಸುವಂತಹ ಪ್ರಬಲವಾದ ಮಾಧ್ಯಮಗಳಾಗಿದ್ದವು. ಯುದ್ಧವೆಂದರೆ ಕದನ, ಹೋರಾಟ, ಆಕ್ರಮಣ ಎಂಬ ಅರ್ಥಗಳನ್ನು ಹೊಂದಿದ್ದರೂ ಅದು ತನ್ನ ಪ್ರಭುತ್ವ ರಕ್ಷಿಸಿಕೊಳ್ಳಲು ಅಗತ್ಯವಾದ ರಕ್ಷಣಾ ವಿಧಾನವಾಗಿರುತ್ತಿತ್ತು. ಕೌಟಿಲ್ಯ ಹೇಳುವಂತೆ ರಾಜ್ಯಾಡಳಿತದ ನಾಲ್ಕು ರಾಜ್ಯರಕ್ಷಣಾ ಸಾಧನಗಳಲ್ಲಿ ದಂಡವೂ ಕೂಡ ಒಂದು. ಅವುಗಳಲ್ಲಿ ಸಾಮ, ಧಾನ, ಭೇದಗಳು ಮೊದಲ ಮೂರು ಮುಖ್ಯ ಅಂಶಗಳು. ಈ ಮೂರು ಪ್ರಯತ್ನಗಳು ವಿಫಲವಾದಾಗ ಕೊನೆಯಲ್ಲಿ ಬಳಕೆಯಾಗುವುದೇ ದಂಡ. ದಂಡವು ರಾಜ್ಯರಕ್ಷಣೆಯ ಚತುರೋಪಾಯಗಳಲ್ಲಿ ಒಂದಾಗಿದೆ. ಈ ಕೊನೆಯ ಚತುರೋಪಾಯವೇ ಯುದ್ಧದ ಮೂಲಾಂಶವಾಗಿದ್ದು, ಯುದ್ಧಕ್ಕೆ ಸೈನ್ಯವನ್ನು ಸಿದ್ಧಗೊಳಿಸುವ ಮೂಲಭೂತ ಕ್ರಮಗಳ ಯೋಜನೆಯು ಯುದ್ಧ ವ್ಯವಸ್ಥೆಯಾಗಿದೆ. ಯುದ್ಧವ್ಯವಸ್ಥೆ ಎಂದರೆ ಕಾರಣ, ಆರಂಭ, ಘಟನೆ, ನೀತಿ, ಅಂತ್ಯ ಹಾಗೂ ಯುದ್ಧದ ಫಲಿತಾಂಶ ಮತ್ತು ಪರಿಣಾಮಗಳನ್ನು ಒಳಗೊಂಡ ವ್ಯವಸ್ಥೆ ಎಂದು

ಹೇಳಬಹುದು. ಆದರೆ ಯುದ್ಧವು ದಂಡೋಪಾಯದ ವ್ಯಕ್ತರೂಪ ಮತ್ತು ರಾಜಕೀಯದ ಹಿಂಸಾತ್ಮಕವಾದ ಕ್ರೂರ ಘಟನೆಗಳ ಸರಮಾಲೆಯಾಗಿದೆ.[೧]

### ೪.೧. ಯುದ್ಧ ವ್ಯವಸ್ಥೆ

ಮೈಸೂರು ಒಡೆಯರ ರಾಜಕೀಯ ಇತಿಹಾಸವು ಚಿಕ್ಕ-ಪುಟ್ಟ ಜಗಳಗಳಿಂದ ಆರಂಭವಾಗಿದೆಯೆಂದು ಇತಿಹಾಸದ ಪುಟಗಳು ಹೇಳುತ್ತವೆ. ಪ್ರಾರಂಭದಲ್ಲಿ ಮೈಸೂರನ್ನು ಚಾಮರಾಜನೆಂಬ ಅರಸ ಆಳುತ್ತಿದ್ದನು. ಈತನ ಮರಣದ ತರುವಾಯ, ಆತನ ಸೇನಾಧಿಪತಿಯಾದ ಕಾರುಗಳ್ಳಿಯ ಮಾರಪ್ಪನಾಯಕ ಎಂಬುವವನು ಮೈಸೂರಿನ ಅಧಿಕಾರವನ್ನು ವಹಿಸಿಕೊಂಡು ಚಾಮರಾಜನ ಹೆಂಡತಿ ಮತ್ತು ಮಗಳಿಗೆ ಚಿತ್ರಹಿಂಸೆಯನ್ನು ನೀಡುತ್ತಿದ್ದನು.[೨] ಈ ವಿಷಯವನ್ನು ತಿಳಿದ ಯದುರಾಯನು ತನ್ನ ಸೋದರನಾದ ಕೃಷ್ಣರಾಯನೊಂದಿಗೆ ಮೈಸೂರು ಪುರವನ್ನು ಪ್ರವೇಶಿಸಿದನು.[೩] ಈ ವಿಷಯವನ್ನು ತಿಳಿದ ಮಾರನಾಯಕನ ಕಡೆಯ ಸೇವಕರು ಯದುರಾಯನನ್ನು ತಡೆದರು. ಆಗ ಯದುರಾಯ ಮತ್ತು ಕೃಷ್ಣರಾಯರು ಆ ಪಾಳೆಯಗಾರನನ್ನು ಸಂಹರಿಸಿದರು.[೪] ಈ ವಿಷಯವನ್ನು ತಿಳಿದ ಮಾರನಾಯಕನು ಕುಪಿತನಾಗಿ ಸೇನೆಯೊಡನೆ ಬಂದು ಯದುರಾಯ ಮತ್ತು ಕೃಷ್ಣರಾಯರನ್ನು ನೀವು ಯಾರು? ಎಲ್ಲಿಂದ ಬಂದಿರುವಿರಿ? ಕಾರಣವಿಲ್ಲದೆ ನಮ್ಮ ಕಡೆಯ ಜನರನ್ನು ನೀವು ಏಕೆ ಸಂಹಾರ ಮಾಡಿದಿರಿ? ಎಂದು ಪ್ರಶ್ನಿಸಿದನು. ನೀವು ಮಾಡಿದ ಈ ಅಪರಾಧಕ್ಕಾಗಿ ನಿಮ್ಮನ್ನು ನಾನೇ ಸಂಹರಿಸುತ್ತೇನೆ ಎಂದು ಖಡ್ಗವನ್ನು ಹಿಡಿದು ಯುದ್ಧಕ್ಕೆ ಬಂದನು. ಆದರೆ ಮಾರನಾಯಕನ ವಿರುದ್ಧವಾಗಿ ಯದುರಾಯ ಮತ್ತು ಚಾಮರಾಜನ ಹೆಂಡತಿಗೆ ಸಹಾಯ ಮಾಡಲು ಇಬ್ಬರು ಕರಣಿಕರಿದ್ದರು. ಈ ಕರಣಿಕರ ಸಹಕಾರದಿಂದ ಅರಮನೆಯ ತೊಟ್ಟಿಯಲ್ಲಿ ಅಡಗಿಸಿಟ್ಟಿದ್ದ ತಮ್ಮ ಸೇನೆಯ ಸಹಾಯದಿಂದ ಮಾರನಾಯಕನನ್ನು ಯುದ್ಧಕ್ಕೆ ಆಹ್ವಾನಿಸಿ ಅವನನ್ನು ಕೊಂದು ಹಾಕಿದರು.[೫]

ಕ್ರಿ.ಶ.೧೫೧೧ರಲ್ಲಿ ಅಧಿಕಾರಕ್ಕೆ ಬಂದ ತಿಮ್ಮರಾಜ ಒಡೆಯರು ಸಿಂಧುವಳ್ಳಿ, ಹುಣಸನಾಳುಗಳ ಪಾಳೆಯಗಾರರು ಹೊಂದಿದ್ದ ಬಿರುದುಗಳು ತಮ್ಮ ದೊರೆಗಳಿಗೆ ಸೇರಿದವೆಂದು ಅವು ನಿಮಗೆ ಏಕೆ ಅವಶ್ಯಕವಾಗಿವೆ? ಎಂದು ಮೈಸೂರು ಸೆಟ್ಟಿಯು ಪ್ರಶ್ನಿಸಿದನು. ಇದರಿಂದ ಕುಪಿತರಾದ ಪಾಳೆಯಗಾರರು ಮೈಸೂರಿನ ಸೆಟ್ಟಿಯನ್ನು ಬಂಧಿಸಿದರು. ಈ ವಿಷಯವನ್ನು ತಿಳಿದ ತಿಮ್ಮರಾಜ ಒಡೆಯರ್ ಪಾಳೆಯಗಾರರನ್ನು ಸೋಲಿಸಿ ಅವರಿಂದ ಆನೆ, ಕುದುರೆಗಳನ್ನು ತಮ್ಮ ವಶಮಾಡಿಕೊಂಡರು.[೬] ರಾಜಒಡೆಯರು (ಕ್ರಿ.ಶ.೧೪೭೫) ಅಧಿಕಾರಕ್ಕೆ ಬರುವ ಕಾಲಾವಧಿಯವರೆಗೆ ಯಾವುದೇ ಯುದ್ಧಗಳು ನಡೆಯಲಿಲ್ಲ. ಹಾಗೂ ಅವುಗಳ ಉಲ್ಲೇಖಗಳು ಕೂಡ ನಮಗೆ ದೊರೆಯುವುದಿಲ್ಲ. ಅದಕ್ಕೆ ಪ್ರಮುಖ ಕಾರಣ ಇವರು ವಿಜಯನಗರ ಅರಸರ ಮಾಂಡಲಿಕರಾಗಿ ಆಳ್ವಿಕೆಯನ್ನು ನಡೆಸುತ್ತಿದ್ದರು. ಇದರಿಂದ ವಿಜಯನಗರ ಸಾಮ್ರಾಜ್ಯದ ವಿರುದ್ಧವಾಗಿ ಯುದ್ಧ ಮಾಡುವ ಅಥವಾ ಅವರೊಂದಿಗೆ ಶತ್ರುತ್ವವನ್ನು ಬೆಳೆಸಿಕೊಳ್ಳುವ ಉದ್ದೇಶ ಇವರಿಗೆ ಇರಲಿಲ್ಲ.

ಆದ್ದರಿಂದ ವಿಜಯನಗರ ಅರಸರ ಸಾಮಂತರಾಗಿದ್ದುಕೊಂಡೇ ತಾವು ಅಧಿಕಾರದಲ್ಲಿ ಉಳಿಯ ಬಯಸಿದರು ಎಂದರೆ ತಪ್ಪಾಗಲಾರದು.

ಕ್ರಿ.ಶ.೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯದ ಕೊನೆಯ ಯುದ್ಧವಾದ ರಕ್ಕಸಗಿ-ತಂಗಡಗಿಯ ಹೋರಾಟದಲ್ಲಿ ಭಾಗವಹಿಸಿದ್ದ ಸೈನ್ಯವು ಯುದ್ಧದಲ್ಲಿ ಸೋಲಲ್ಪಟ್ಟಿತು. ವಿದೇಶಿ ಪ್ರವಾಸಿಗರು ತಿಳಿಸುವಂತೆ ಪ್ರಾರಂಭದಿಂದಲೂ ವಿಜಯನಗರ ಮತ್ತು ಬಹಮನಿ ಸುಲ್ತಾನರ ನಡುವೆ ಅನೇಕ ಯುದ್ಧಗಳು ಸಂಭವಿಸಿದವು. ಅದರಲ್ಲಿ ವಿಜಯನಗರದ ಅವಸಾನಕ್ಕೆ ಕಾರಣವಾದ ಕ್ರಿ.ಶ.೧೫೬೫ರ ರಕ್ಕಸಗಿ- ತಂಗಡಗಿ ಯುದ್ಧವು ಪ್ರಮುಖವಾಗಿದೆ.

ರಾಯಚೂರು ಮತ್ತು ಮುದಗಲ್ ಕೋಟೆಗಳನ್ನು ತಮ್ಮ ವಶಮಾಡಿಕೊಳ್ಳಲು ವಿಜಯನಗರ ಮತ್ತು ಬಹಮನಿ ಸುಲ್ತಾನರು ನಿರಂತರವಾಗಿ ಹೋರಾಟ ಮಾಡುವುದು ಅನಿವಾರ್ಯವಾಗಿತ್ತು. ಅದಕ್ಕೆ ಪ್ರಮುಖ ಕಾರಣ ವಿಜಯನಗರ ಮತ್ತು ಬಹಮನಿ ಸುಲ್ತಾನರ ಸಾಮ್ರಾಜ್ಯದ ನಡುವೆಯಿದ್ದ ಅತ್ಯಂತ ಫಲವತ್ತಾದ 'ರಾಯಚೂರು ದೋ-ಅಬ್ ಪ್ರದೇಶವು ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವೆಯಿದ್ದ ಫಲವತ್ತಾದ ಸಂಪದ್ಭರಿತ ಆಯಕಟ್ಟಿನ ಪ್ರದೇಶವಾಗಿತ್ತು.[7] ಇದು ವಿಜಯನಗರ ಸಾಮ್ರಾಜ್ಯದ ಅವನತಿಯವರೆಗೆ ಮುಂದುವರಿಯಿತು. ಆದಕಾರಣದಿಂದ ವಿಶಾಲ ಸಾಮ್ರಾಜ್ಯವನ್ನು ನಿರ್ಮಿಸುವ ಉದ್ದೇಶದಿಂದ ರಾಜಒಡೆಯರು ಅಧಿಕಾರಕ್ಕೆ ಬಂದ ಪ್ರಾರಂಭದಲ್ಲಿಯೇ ತಮ್ಮ ಸುತ್ತಮುತ್ತಲಿನ ಪಾಳೆಯಗಾರರ ಮೇಲೆ ಯುದ್ಧಮಾಡುವ ಯೋಜನೆಯನ್ನು ರೂಪಿಸಿಕೊಂಡು ಆಕ್ರಮಣಗಳನ್ನು ನಡೆಸಿದರು. ಇದರಿಂದ ಅಲ್ಪಕಾಲದಲ್ಲಿಯೇ ಸಾಮ್ರಾಜ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕುವಂತಹ ಗುರುತರವಾದ ಜವಾಬ್ದಾರಿಯನ್ನು ಸಮರ್ಥವಾಗಿ ನಿಭಾಯಿಸಿದರು. ಕ್ರಮವಾಗಿ 'ನರಸೀಪುರದ ನರಸಿಂಹನಾಯಕನಿಂದ ಕ್ರಿ.ಶ. ೧೫೮೪ರಲ್ಲಿ ಅಕ್ಕಿ ಹೆಬ್ಬಾಳು, ತಿರುಮಲ ರಾಜಯ್ಯನಿಂದ ಕ್ರಿ.ಶ. ೧೫೮೬ರಲ್ಲಿ ರಂಗಸಮುದ್ರ, ಕ್ರಿ.ಶ.೧೫೯೫ರಲ್ಲಿ ನರನಳ್ಳಿಯನ್ನು ಮಲ್ಲರಾಜಯ್ಯನಿಂದ ಜಗದೇಕರಾಯನ ಕಡೆಯ ಆಧಾಟರಾಯನಿಂದ ಕ್ರಿ.ಶ. ೧೬೦೦ರಲ್ಲಿ ಅರಕೆರೆಯನ್ನು, ಕ್ರಿ.ಶ. ೧೬೦೬ರಲ್ಲಿ ಸೋಸಲೆ, ಬನ್ನೂರುಗಳು,[8] ಕ್ರಿ.ಶ.೧೬೦೮ರಲ್ಲಿ ಕೃಷ್ಣಪ್ಪನಾಯಕನಿಂದ ಬೇಲೂರು, ವೀರರಾಜಯ್ಯನಿಂದ ಗ್ರಾಮ, ಇಮ್ಮಡಿ ರಾಮರಾಜಯ್ಯ ನಾಯಕನಿಂದ ಯಳಂದೂರು, ಆಲಂಬಾಡಿಯನ್ನು ಕರಾಚೂರಿ ನಂಜರಾಜಯ್ಯನಿಂದ ಸತ್ಯಗಾಲಗಳನ್ನು ವಶಮಾಡಿಕೊಂಡರು.[9] ಹಾಗೆಯೇ ಮುಂದುವರಿದು ಕ್ರಿ.ಶ.೧೫೯೯ರಲ್ಲಿ ಲಕ್ಷ್ಮಣಪ್ಪ ನಾಯಕನಿಂದ ನರಸೀಪುರವನ್ನು, ಕ್ರಿ.ಶ. ೧೬೧೦ರಲ್ಲಿ ಶ್ರೀರಂಗಪಟ್ಟಣವನ್ನು ಶ್ರೀರಂಗರಾಯನಿಂದ, ವೀರರಾಜಯ್ಯನಿಂದ ಕಾರುಗಳ್ಳಿಯನ್ನು ಪಿರಿಯಾ ಪಟ್ಟಣದ ನಂಜುಂಡ ಅರಸನಿಂದ ಸಿರಿಯೂರನ್ನು ಕ್ರಿ.ಶ.೧೬೧೨ರಲ್ಲಿ ಶ್ರೀಕಂಠರಾಜಯ್ಯನಿಂದ ಸರಗೂರು, ಕ್ರಿ.ಶ.೧೬೧೪ರಲ್ಲಿ ಹದಿನಾಡು ನಂಜರಾಜಯ್ಯನಿಂದ ತೆರಕಣಾಂಬಿ, ಉಮ್ಮತ್ತೂರು, ಕ್ರಿ.ಶ.೧೬೧೫ರಲ್ಲಿ ಹುರ, ಹರದನಹಳ್ಳಿಗಳನ್ನು ಲಿಂಗಪಾದಯ್ಯನ ಮಕ್ಕಳಾದ ನಂಜರಾಜಯ್ಯ ಮತ್ತು ಶ್ರೀಕಂಠಯ್ಯರಿಂದ ಕ್ರಮವಾಗಿ

ವಶಮಾಡಿಕೊಳ್ಳಲಾಯಿತು.[೧೦] ಅದೇ ವರ್ಷದಲ್ಲಿಯೇ ಸೋಮರಾಜಯ್ಯನಿಂದ ಕಳಲೆ, ಚನ್ನರಾಜಯ್ಯನಿಂದ ಹೆಗ್ಗಡದೇವನಕೋಟೆ, ಗೋಪಾಲ ರಾಜಯ್ಯನಿಂದ ಮಳಲವಾಡಿ, ಶಾಂತಯ್ಯನಿಂದ ಬಿಳಿಕೆರೆ, ಬಸವರಾಜಯ್ಯನಿಂದ ಮೂಗೂರು, ಕಡೆಯದಾಗಿ ಜಗದೇವರಾಯನಿಂದ ಕಿಕ್ಕೇರಿ ಮತ್ತು ಹೊಸಹೊಳಲುಗಳನ್ನು ಗೆದ್ದುಕೊಳ್ಳಲಾಯಿತು. ಕ್ರಿ.ಶ. ೧೬೧೬ರಲ್ಲಿ ಹದಿನಾಡಿನ ಚಂದ್ರಶೇಖರ ನಾಯಕನಿಂದ ರಾಯಸಮುದ್ರವನ್ನು ಗೆದ್ದುಕೊಂಡು ಗಡಿಗಳಿಗೆ ವಿವಿಧ ಅಧಿಕಾರಿಗಳನ್ನು ನೇಮಿಸಲಾಯಿತು.[೧೧]

ರಾಜಒಡೆಯರು ವಿವಿಧ ಕಾಲಗಟ್ಟಗಳಲ್ಲಿ ಹಲವಾರು ಪಾಳೆಯಗಾರರ ಮೇಲೆ ಯುದ್ಧ ಕೈಗೊಂಡು ತಮ್ಮ ಸೈನ್ಯ ಬಲದ ಪ್ರಭಾವದಿಂದ ಹಾಗೂ ಸಮರ್ಥ ನಾಯಕತ್ವದಿಂದ ಹೋದೆಡೆಯಲ್ಲೆಲ್ಲಾ ವಿಜಯವನ್ನು ಸಾಧಿಸಿದರು. ಈ ವಿಜಯಗಳೇ ಮುಂದೆ ಮೈಸೂರು ಒಡೆಯರ ಸಾಮ್ರಾಜ್ಯದ ಭದ್ರಬುನಾದಿಗೆ ಅಸ್ತಿಭಾರವಾಯಿತು. ವಿಜಯನಗರದ ಅವನತಿಯ ಪರಿಸ್ಥಿತಿಯು ಕೂಡ ಇವರಿಗೆ ಸಹಕರಿಸಿತು. ಇದು ರಾಜಒಡೆಯರ್ ಅವರ ಸೈನ್ಯದ ವಿಜಯಕ್ಕೆ ಕಾರಣವಾದ ಪ್ರಮುಖ ಅಂಶವಾಗಿತ್ತು. ಅಲ್ಲದೆ ಪ್ರಾರಂಭದಲ್ಲಿದ್ದ ಸೈನ್ಯದ ಕೊರತೆಯನ್ನು ನೀಗಿಸಿ ತಮ್ಮ ಕಾಲದಲ್ಲಿ ಸೈನಿಕ ಶಕ್ತಿಯನ್ನು ಬಲಪಡಿಸಿದರು.

ರಾಜಒಡೆಯರ ನಂತರ ಅಧಿಕಾರಕ್ಕೆ ಬಂದ ಚಾಮರಾಜ ಒಡೆಯರ್ (ಕ್ರಿ.ಶ.೧೬೧೭) ವಿವಿಧ ಪ್ರಾಂತ್ಯಗಳನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಳ್ಳುವ ಪ್ರಯತ್ನವನ್ನು ಮಾಡಿದರು. ತಲಕಾಡು ಸೀಮೆಯ ವೀರಣ್ಣನಿಂದ ಕೆಸರಗೋಡು, ಜಗದೇವರಾಯನಿಂದ ಮಳವಳ್ಳಿ, ಕಾನಕಾನಹಳ್ಳಿ, ಚನ್ನಪಟ್ಟಣ, ಬೂಕಿನಿಕೆರೆ, ಸಿಂಧುಗಟ್ಟಗಳನ್ನು ಗೆದ್ದುಕೊಂಡರು.[೧೨] ಚಿಕ್ಕನಾಯಕನ ಹಳ್ಳಿಯ ಪಾಳೆಯಗಾರನಿಂದ ನಾಗಮಂಗಲವನ್ನು ವಶಮಾಡಿಕೊಂಡರು.[೧೩] ತಲಕಾಡಿನ ನಂಜರಾಜಯ್ಯನಿಂದ ಮದ್ದೂರು, ತಲಕಾಡು ಹವಾಲ್ ಸೀಮೆಯ ವೀರಣ್ಣನಿಂದ ಕೆರಗೋಡು, ಬಾಳೋಜಿ ನಾಯಕನಿಂದ ಅರಿಕುಠಾರ, ನಂಜರಾಜಯ್ಯನಿಂದ ಅಮಚವಾಡಿ, ಹೊಂಗನೂರುಗಳು, ನಂಜುಂಡರಸಿಯಿಂದ ಹಾಡ್ಯದ ಪ್ರಭುದೇವನಿಂದ ತಗಡೂರು, ಲಿಂಗರಾಜಯ್ಯನಿಂದ ಕೊತ್ತಗಾಲಕೋಟೆ ಚನ್ನರಾಜಯ್ಯನಿಂದ ಜಾಡಲೆ, ಪರಮಾರಾವುತನಿಂದ ಬೆಳ್ಳೂರು ಬೇಲೂರಿನ ವೆಂಕಟಪ್ಪ ನಾಯಕನಿಂದ ಚನ್ನರಾಯಪಟ್ಟಣವನ್ನು[೧೪] ವಶಪಡಿಸಿಕೊಂಡು ತಮ್ಮ ರಾಜ್ಯದ ಗಡಿಗಳನ್ನು ವಿವಿಧ ಭಾಗಗಳಿಗೆ ವಿಸ್ತರಿಸಿದರು.

ಕಂಠೀರವ ನರಸರಾಜ ಒಡೆಯರ್(ಕ್ರಿ.ಶ. ೧೬೩೮–೧೬೫೯) ಉತ್ತಮವಾದ ಚತುರ ಆಡಳಿತಗಾರನೂ ಯುದ್ಧ ಪ್ರವೀಣನೂ ಆಗಿದ್ದು, ಕಠಿಣ ತರಬೇತಿಯನ್ನು ಪಡೆದಿದ್ದ ಅರಸ. ತಿರುಚನಾಪಳ್ಳಿಯ ಜಟ್ಟಿಯೊಬ್ಬನು ಅಹಂಕಾರದಿಂದ ತನ್ನ ದಟ್ಟಚೆಲ್ಲಣವನ್ನು ಊರಿನ ಅಗಸೆ ಬಾಗಿಲಿಗೆ ಕಟ್ಟಿದನು. ಈ ವಿಷಯವನ್ನು ತಿಳಿದ ಕಂಠೀರವ ನರಸರಾಜನು ಬ್ರಾಹ್ಮಣನೊಬ್ಬನೊಂದಿಗೆ ವೇಶಮರೆಸಿಕೊಂಡು ಬಂದು ತಿರುಚನಾಪಳ್ಳಿಯ ಅಗಸೆಬಾಗಿಲಿಗೆ ಕಟ್ಟಿದ್ದ ದಟ್ಟಚೆಲ್ಲಣವನ್ನು

ಕಿತ್ತುಹಾಕಿ, ಆ ಊರಿನ ಜಟ್ಟಿಯನ್ನು ಕಾಳಗಕ್ಕೆ ಆಹ್ವಾನಿಸಿ ಅರಸನು ಇವರಿಬ್ಬರ ಕಾಳಗವನ್ನು ಉಪ್ಪರಿಗೆಯ ಮೇಲೆ ಕುಳಿತು ವೀಕ್ಷಿಸಿದನು. ಈ ಇಬ್ಬರೂ ಜಟ್ಟಿಗಳು ವಜ್ರಮುಷ್ಠಿಗಳನ್ನು ಕೈಗಳಲ್ಲಿ ಹಿಡಿದು ಹೋರಾಡಿದರು.[೧೫] ಆದರೆ ಕಂಠೀರವ ನರಸರಾಜ ಒಡೆಯರ್ ಯಾರಿಗೂ ತಿಳಿಯದಂತೆ ತಮ್ಮ ಸೊಂಟದಲ್ಲಿ ಧರಿಸಿದ್ದ ವಿಜಯನಾರಸಿಂಹ ಎಂಬ ಖಡ್ಗದಿಂದ ಎದುರಾಳಿಯ ಕೊರಳನ್ನು ಕೊಯ್ದದ್ದನ್ನು ಗಮನಿಸದ ತಿರುಚನಾಪಳ್ಳಿಯ ಅರಸ ಏಕೆ ಸುಮ್ಮನೆ ನಿಂತಿದ್ದೀರಿ? ಎಂದು ಪ್ರಶ್ನಿಸಿದನು. ಕಂಠೀರವ ನರಸರಾಜನು ತನ್ನಲ್ಲಿದ್ದ ಬೆತ್ತದಿಂದ ಜಟ್ಟಿಯ ಮುಖಕ್ಕೆ ತಿವಿದ ತಕ್ಷಣವೇ ರುಂಡಮುಂಡಗಳು ಬೇರೆಯಾದವು.[೧೬] ಇದು ಕಂಠೀರವ ನರಸರಾಜ ಒಡೆಯರ್‌ನ ಯುದ್ಧ ನೈಪುಣ್ಯತೆಗೆ ಒಂದು ಉದಾಹರಣೆಯಾಗಿದೆ. ಈತ ಅಧಿಕಾರಕ್ಕೆ ಬಂದಕೂಡಲೇ ದಳವಾಯಿಯಾಗಿದ್ದ ವಿಕ್ರಮರಾಯನನ್ನು ಅಧಿಕಾರದಿಂದ ವಜಾಗೊಳಿಸಿ ತಿಮ್ಮಪ್ಪನಾಯಕ ಎಂಬಾತನನ್ನು ಹೊಸ ದಳವಾಯಿಯಾಗಿ ನೇಮಕ ಮಾಡಿದನು.[೧೭]

ಕಂಠೀರವ ನರಸರಾಜ ಒಡೆಯರ್ ಅಧಿಕಾರಕ್ಕೆ ಬಂದಾಗ ದಕ್ಷಿಣ ಭಾರತದಲ್ಲಿ ಪ್ರಕ್ಷುಬ್ಧವಾದ ವಾತಾವರಣವು ಏರ್ಪಟ್ಟಿತ್ತು. ಮರಾಠರು, ಬಹಮನಿಯ ಸುಲ್ತಾನರು, ಕೆಳದಿಯ ಅರಸರು ಮೈಸೂರು ಅರಸರೊಂದಿಗೆ ವೈಮನಸ್ಸನ್ನು ಹೊಂದಿದ್ದರು. ಇದು ಮೈಸೂರಿನ ಮೇಲೆ ಪದೇಪದೇ ಆಕ್ರಮಣಗಳು ನಡೆಯುತ್ತಿದ್ದವು. ಇದರಿಂದ ದಕ್ಷಿಣ ಭಾರತದ ರಾಜಕೀಯ ಸ್ಥಿತಿಗತಿಗಳು ಬದಲಾವಣೆಯಾಗುವಲ್ಲಿ ಮಹತ್ವದ ಕಾಲವೆಂದು ಹೇಳಬಹುದು. ಬಿಜಾಪುರದ ಮಹಮದ್ ಆದಿಲ್‌ಷಾನ ದಂಡನಾಯಕನಾಗಿದ್ದ ರಣದುಲ್ಲಾಖಾನ್ ಒಮ್ಮಿಂದೊಮ್ಮೆಲೇ ಬಿರುಗಾಳಿಯಂತೆ ರಾಜ್ಯಗಳ ಮೇಲೆ ಎರಗುತ್ತಿದ್ದನು. ಈ ರಣದುಲ್ಲಾಖಾನನಿಗೆ ಮೈಸೂರು ಮತ್ತು ಇಕ್ಕೇರಿಯ ಮೇಲೆ ಆಕ್ರಮಣ ಮಾಡುವಂತೆ ಆಹ್ವಾನ ನೀಡಿದವನು ಬಸವಪಟ್ಟಣದ ಹನುಮಪ್ಪನಾಯಕ. ಈತನು ಇಕ್ಕೇರಿಯ ವೀರಭದ್ರ ನಾಯಕನೊಂದಿಗೆ ಹೊಂದಿದ್ದ ಪರಸ್ಪರ ದ್ವೇಷದ ಭಾವನೆಗಳು ಉತ್ತುಂಗಕ್ಕೆ ಏರಿದ್ದವು. ಇಕ್ಕೇರಿಯ ವೀರಭದ್ರ ನಾಯಕನನ್ನು ಗೆಲ್ಲುವುದು ಅಸಾಧ್ಯವೆಂದು ತಿಳಿದು ತನ್ನ ಮಂತ್ರಿಯಾದ ವೆಂಕಟಪತಿದೇವನಲ್ಲಿ ೩,೦೦೦ ವರಹಗಳೊಂದಿಗೆ ವಸ್ತ್ರಾಭರಣಗಳನ್ನು ನೀಡಿ ಬಿಜಾಪುರದ ಸುಲ್ತಾನನನ್ನು ಇಕ್ಕೇರಿಯ ಮೇಲೆ ದಾಳಿ ಮಾಡುವಂತೆ ಕೇಳಿಕೊಂಡನು.[೧೮] ಇದು ಬಿಜಾಪುರದ ಸುಲ್ತಾನನಿಗೆ ಬಯಸದೇ ಒದಗಿಬಂದ ಅವಕಾಶವಾಗಿತ್ತು.

ಗುರಿಕಾರ ಚನ್ನಯ್ಯ ಎಂಬುವವನು ಚಾಮರಾಜ ಒಡೆಯರ್ ಆಳ್ವಿಕೆಯಲ್ಲಿ ಯುದ್ಧ ಮಾಡಿ ಓಡಿಹೋಗಿ ಬಿಜಾಪುರದ ಸುಲ್ತಾನನ ಬಳಿ ೨೦೦ ಕುದುರೆಗಳಿಗೆ ಗೊತ್ತುದಾರನಾಗಿದ್ದನು. ಈತ ನೀಡಿದ ಸಲಹೆಯಂತೆ ಮೈಸೂರು ಅರಸರಾದ ಕಂಠೀರವ ನರಸರಾಜ ಒಡೆಯರು ದಳವಾಯಿಯು ತನ್ನ ಸಂಬಂಧಿ ಎಂಬ ವಿಷಯವನ್ನು ತಿಳಿದಿದ್ದರೂ ಸಹ ವಿಕ್ರಮರಾಯನನ್ನು ಕೊಂದುಹಾಕಿದರು. ನಂತರ ತಿಮ್ಮಪ್ಪನಾಯಕನನ್ನು ದಳವಾಯಿಯನ್ನಾಗಿ ನಿಯೋಜಿಸಿದರು. ಇಂತಹ ವಿಷಮ ಪರಿಸ್ಥಿತಿಯ ಲಾಭವನ್ನು ಪಡೆದು ಶ್ರೀರಂಗಪಟ್ಟಣವನ್ನು ಸಾಧಿಸಲು ಇದೇ ಸರಿಯಾದ ಸಮಯ ಎಂದು

ಹೇಳಿದನು. ಈ ಸಮಯದ ಮಹತ್ವವನ್ನು ಅರಿತ ಬಿಜಾಪುರದ ಸುಲ್ತಾನನು ದಂಡಯಾತ್ರೆಗೆ ಅನುಮತಿಯನ್ನು ನೀಡಿದನು. ಅಲ್ಲದೆ ಹನುಮಪ್ಪನಾಯಕನು ತನ್ನ ಸ್ವಾರ್ಥಸಾನೆಗಾಗಿ ಸುಲ್ತಾನರ ಆಳ್ವಿಕೆಗೆ ಕರ್ನಾಟಕವನ್ನು ಒಳಪಡಿಸುವ ಕಾರ್ಯಕೈಗೊಂಡನು. ಇದು ಒಂದುಕಡೆ ತನ್ನ ಸ್ವಕಾರ್ಯವಾದ ದಂಡಯಾತ್ರೆಯ ಜೊತೆಗೆ ಧಾರ್ಮಿಕ ಭಾವನೆಗಳು ಸಹ ಅಧಿಕವಾಗಿದ್ದವು. ಆದ್ದರಿಂದ ಇದೊಂದು ಧಾರ್ಮಿಕ ಮತ್ತು ಆಡಳಿತಾತ್ಮಕ ಚತುರತೆಯ ಒಂದು ಒಪ್ಪಂದವಾಗಿದೆ. ಈ ಅಂಶವು **'ಮಹಮದ್ ನಾಮಾ'**[೧೯] ಕೃತಿಯಿಂದ ನಮಗೆ ತಿಳಿದು ಬರುತ್ತದೆ.

ಕಂಠೀರವ ನರಸರಾಜ ಒಡೆಯರ್ ಕಾಲದಲ್ಲಿನ ಯುದ್ಧವ್ಯವಸ್ಥೆಯನ್ನು ತಿಳಿಯಲು ನಮಗೆ ವಿವಿಧ ಸಾಹಿತ್ಯ ಆಕರಗಳು ದೊರೆಯುತ್ತವೆ. ಅದರಲ್ಲಿ ಪ್ರಮುಖವಾದ ಕೆಲವು ಸಾಹಿತ್ಯ ಕೃತಿಗಳು ಕಂಠೀರವ ನರಸರಾಜ ಒಡೆಯರ ಕಾಲದಲ್ಲೇ ರಚನೆಯಾದವುಗಳಾಗಿವೆ. ಅವುಗಳಲ್ಲಿ ಗೋವಿಂದ ವೈದ್ಯನು ರಚಿಸಿದ ಕಂಠೀರವ ನರಸರಾಜ ವಿಜಯಂ, ಕೆಳದಿಯ ಲಿಂಗಣ್ಣ ಕವಿಯು ರಚಿಸಿದ ಕೆಳದಿ ನೃಪವಿಜಯ ಕೃತಿಗಳು ಅಂದಿನ ಕಾಲದಲ್ಲಿ ಬಿಜಾಪುರದ ಸುಲ್ತಾನರ ದಾಳಿ ಮತ್ತು ಮೈಸೂರು ಒಡೆಯರಿಗೂ ಮತ್ತು ಕೆಳದಿಯ ಅರಸರಿಗೂ ನಡೆದ ಹೋರಾಟಗಳ ಕುರಿತು ಮಾಹಿತಿಗಳನ್ನು ಒದಗಿಸುತ್ತವೆ. ಅಲ್ಲದೆ ಈ ಹೋರಾಟಗಳಿಗೆ ಸೈನ್ಯವನ್ನು ಸಿದ್ಧಗೊಳಿಸುತ್ತಿದ್ದ ರೀತಿಯನ್ನು ಗಮನಿಸಬಹುದು. ಇದೇ ಅಂಶವನ್ನು ಗೋವಿಂದ ವೈದ್ಯನು ತನ್ನ ಕೃತಿಯಾದ ಕಂಠೀರವ ನರಸರಾಜ ವಿಜಯಂ ಕೃತಿಯಲ್ಲಿ ತಿಳಿಸುವಂತೆ ರಣದುಲ್ಲಾಖಾನನು ದಕ್ಷಿಣ ಕರ್ನಾಟಕದ ಮೇಲೆ ದಾಳಿಮಾಡಲು ಅವನು ಒಂದು ಒಕ್ಕೂಟವನ್ನು ರಚಿಸಿಕೊಂಡಿದ್ದನ್ನು ಇಲ್ಲಿ ಗಮನಿಸಬಹುದು. ಅಲ್ಲದೆ ಸೈನ್ಯದಲ್ಲಿ ಗಜದಳ, ಅಶ್ವದಳ, ಮತ್ತು ಕಾಲಾಳು ಪಡೆಗಳ ಉಪಯೋಗವನ್ನು ಗೋವಿಂದ ವೈದ್ಯನು ಉದಾಹರಿಸುತ್ತಾನೆ.

ಬಿಜಾಪುರದ ಸೈನ್ಯದೊಂದಿಗೆ ಬಸವಪಟ್ಟಣದ ಹನುಮನಾಯಕ ಹರಪನಹಳ್ಳಿ ಕನಕಗಿರಿ, ಸಂಡೂರು, ರಾಯದುರ್ಗಗಳ ನಾಯಕರೂ, ಹಟ್ಟಿಯ ವೀರಭದ್ರನಾಯಕ, ದೊಡ್ಡೇರಿಯ ಅರಸ, ಹಿರಿಯೂರಿನ ತಮ್ಮಣ್ಣ ನಾಯಕ, ಚಿಕ್ಕನಾಯಕನಹಳ್ಳಿಯ ಭೈರಪ್ಪನಾಯಕರು ಸೇರಿದ್ದರು. ಇವರಷ್ಟೇ ಅಲ್ಲದೆ ಬೇಲೂರು, ನರಸೀಪುರ ಪಾಲುಪರೆಯ ಸೈನ್ಯಗಳು ಒಟ್ಟಾಗಿ ಸೇರಿಕೊಂಡು ಒಂದು ಒಕ್ಕೂಟವನ್ನು ರಚಿಸಿಕೊಂಡವು.[೨೦] ಅದೇ ರೀತಿಯಾಗಿ ಅದೇ ಒಕ್ಕೂಟದಲ್ಲಿ ನುಗ್ಗೆಹಳ್ಳಿಯ ದಾಸನಾಯಕ, ಕೆಂಗೇಂದ್ರ, ತಿರುಮಲರಾಜರಷ್ಟೇ ಅಲ್ಲದೆ ಕೋಳಾಲ, ಬಳಲಾಪುರ, ಬೆಂಗಳೂರಿನ ಅರಸರು ಇದರಲ್ಲಿ ಸೇರಿಕೊಂಡಿದ್ದರು.[೨೧] ಈ ಕೂಟಗಳು ರಚನೆಯಾಗಲು ಪ್ರಮುಖವಾದ ಕಾರಣವೆಂದರೆ ಗೆದ್ದವರು ಸೋತರಾಜರಿಗೆ ವಿಧಿಸುತ್ತಿದ್ದ ಷರತ್ತುಗಳು ಪ್ರಮುಖವಾಗಿದ್ದವು. ಅಷ್ಟೇ ಅಲ್ಲದೆ ಸೋಲಿಸಲ್ಪಟ್ಟ ರಾಜ ಅಥವಾ ಸೈನ್ಯವು ವಿಧಿಯಿಲ್ಲದೆ ವಿಜಯಿಯಾದ ಸೈನ್ಯದ ಅಥವಾ ಅರಸನ ಅಧೀನವಾಗಿರಬೇಕಿತ್ತು. ಯುದ್ಧಕ್ಕೆ ತರಬೇತಿ ಹೊಂದಿದ ಹೋರಾಟದಲ್ಲಿ ನುರಿತ ಮೂಲ ಸೇನೆಯ ಜೊತೆಗೆ ಮಿತ್ರ ಅಥವಾ ಸಾಮಂತರ ಸೇನೆಗಳೂ ಬಂದು

ಸೇರಿಕೊಳ್ಳುತ್ತಿದ್ದವು.[೨೨] ಕೆಲವೊಮ್ಮೆ ಈ ಸೈನ್ಯದಲ್ಲಿ ನುರಿತ ಸೈನ್ಯದ ಜೊತೆಗೆ ವಿವಿಧ ಕಾರ್ಯಗಳಲ್ಲಿ ತೊಡಗಿಕೊಂಡಿರುತ್ತಿದ್ದ ತರಬೇತಿಯಿಲ್ಲದವರನ್ನೂ ಕೂಡ ಅನಿವಾರ್ಯ ಸಂದರ್ಭಗಳಲ್ಲಿ ಸೈನಿಕರಿಗೆ ನೆರವು ನೀಡಲು, ರಸ್ತೆ ಮತ್ತು ಗುಡಾರಗಳ ನಿರ್ಮಾಣ, ಆನೆ ಹಾಗೂ ಕುದುರೆಗಳ ಲಾಯ ನಿರ್ಮಾಣವಲ್ಲದೆ ಅಡಿಗೆ ಸಹಾಯಕರಾಗಿ ಹಾಗೂ ಶಸ್ತ್ರಾಸ್ತ್ರಗಳನ್ನು ಪೂರೈಕೆ ಮಾಡಲು ಬಳಸಿಕೊಳ್ಳಲಾಗುತ್ತಿತ್ತು. ರಾಮರಾಜನ ಬಖೈರು ತಿಳಿಸುವಂತೆ ರಾಜನು ಅಷ್ಟಪ್ರಧಾನಿಗಳು, ಸೇನಾನಾಯಕರು, ದಳವಾಯಿಗಳು, ಕಂದಾಚಾರಿಗಳು ಮೊದಲಾದವರನ್ನು ಕರೆಸಿ ಸೈನ್ಯ ಸಿದ್ಧಗೊಳಿಸುವಂತೆ ರಾಜನು ಆದೇಶಿಸುತ್ತಿದ್ದನು. ಸಕಲ ಸೈನ್ಯವೂ ಸಿದ್ಧವಾಗಿ ತಮ್ಮತಮ್ಮ ಪೇಷುಖಾನೆ ಸಂಗಡ ಝೂಂಡಾವನ್ನು ಹೊರಗೆ ಹಾಕಿಸಿದರು.[೨೩] ಲಿಂಗಣ್ಣ ಕವಿಯು ಯುದ್ಧ ವ್ಯವಸ್ಥೆಯ ಬಗ್ಗೆ ತನ್ನ ಕೆಳದಿ ನೃಪವಿಜಯ ಕೃತಿಯಲ್ಲಿ ಈ ರೀತಿಯಾಗಿ ವಿವರಸಿದ್ದಾನೆ. ರಾಯನು ತನ್ನ ಅಧೀನ ಪಾಳೆಯಗಾರರಿಗೆ ಕುದುರೆ, ರಥ, ಛತ್ರಿಚಾಮರಗಳಂತಹ ಉಚಿತವಾದ ಉಡುಗೊರೆಗಳೊಂದಿಗೆ ಕುದುರೆ, ಕಾಲಾಳುಗಳೊಂದಿಗೆ ತನ್ನಲ್ಲಿ ಅವರನ್ನು ಅಧಿನಿಯಮಗೊಳಿಸಿಕೊಂಡನು[೨೪] ಎಂದು ಹೇಳುತ್ತಾನೆ.

ಗೋವಿಂದವೈದ್ಯನು ಯುದ್ಧ ಸಂದರ್ಭದಲ್ಲಿ ಸೇನಾ ಪಡೆಯನ್ನು ಪ್ರತ್ಯಕ್ಷವಾಗಿ ಕಂಡಿರುವುದನ್ನು ಕುರಿತು ಈ ರೀತಿಯಾಗಿ ವರ್ಣಿಸುತ್ತಾನೆ.

ಕಾಲಾಲು ಹತ್ತುಸಾವಿರ ಗಜವಿಪ್ಪತ್ತು.
ಮೇಲಾದ ತುರಗ ವೈನೂರು
ಮೇಳದೆ ತಿರುಮಲೇಶ್ವರನ ಕೂಟಕೆಬಂದ
ಸಾಲನಾಯಕನ ಭೈರೇಂದ್ರ[೨೫] ಎಂದು ತಿಳಿಸಿದ್ದಾನೆ. ಅಂದರೆ ಇಲ್ಲಿ ಕಾಲಾಳುಗಳು ಗಜಗಳ ಮತ್ತು ಅಶ್ವದಳಗಳು ಮಾತ್ರ ಕಂಡುಬರುತ್ತವೆ. ಬಹಮನಿ ಸುಲ್ತಾನರು ಯುದ್ಧಕ್ಕೆ ಅಂದಿನ ಪದ್ಧತಿಯಂತೆ ಒಬ್ಬ ಮುಸ್ಲಿಂ ಸೇನಾಧಿಪತಿಯೊಂದಿಗೆ ಒಬ್ಬ ಹಿಂದೂ ಸೇನಾಧಿಪತಿಯನ್ನು ಕಳುಹಿಸಬೇಕಾಗಿತ್ತು. ಅದರಂತೆ ರಣದುಲ್ಲಾಖಾನ್ ಮತ್ತು ಷಹಜಿಯನ್ನು ಸುಲ್ತಾನನು ನೇಮಿಸಿದನು.[೨೬] ಬೆಂಗಳೂರಿನ ಕೆಂಪೇಗೌಡನು ತನ್ನ ನೆರೆಯ ಪಾಳೆಯಗಾರರು ಮಾಡಿದ ಮೋಸದಿಂದಾಗಿ ಸೋತನು. ಸೈನ್ಯದಲ್ಲಿ ನಾಲ್ಕೆಂಟು ಸಾವಿರದಷ್ಟು ದಾಳಿಯ ಕುದುರೆಗಳಿದ್ದವು. ಎಲ್ಲೆಲ್ಲೂ ಆಗಾಗ ತೊಳುವ ಬೊಬ್ಬೆಯಿಂದ ಆಕಾಶ ಮಂಡಲವೇ ಘೀಳಿಟ್ಟಿತು. ಆನೆಗಳ ಮೇಲಿನ ತೊಟ್ಟಿಲು ಚಪ್ಪರ(ಅಂಬಾರಿ)ಗಳಲ್ಲಿ ಸುಮ್ಮಾನದ ಬಿಬ್ಬಿಯರೊಂದಿಗೆ ಕುಳಿತು ಬರುತ್ತಿರುವರು. ಅಶ್ವದಳದ ಸೈನ್ಯದ ಮೇಲಾಧಿಕಾರಿಗಳಾದ ಖಾನರ ವಲ್ಲಭೆಯರು ಪಲ್ಲಕಿ, ದಂಡಿಗೆಗಳಲ್ಲಿ ಬರುತ್ತಿರುವರು. ಪ್ರಮಾಣ ಬಿಗಿದ ಅಗಣಿತ ಒಂಟೆಗಳೂ ಝುಗಮುಗಿಸುವ ಕಾಂತಿಯಿಂದ ಸೊಗಸುವ ಕೊಲ್ಲಾರಗಳೂ ದಂಡಿನೊಂದಿಗಿದ್ದವು.

ಕೂಳೆಪಾಳೆಯದ ಸಂಗಡ ಕುದುರೆಯ ಮೇಲೆ ಕಾಲಪುಪ್ಪಸ, ಪಾಪೋಸು, ಜೋಲುವ ರವಿಕೆಯ ಮೊಲೆಕಟ್ಟು ಇವುಗಳಿಂದ ಕೂಡಿದ ಚಲುವೆಯರಾದ ಗಣಿಕಾಸ್ತ್ರೀಯರು ಬರುತ್ತಿದ್ದರು. ಹೂಡಿದ ಬಂಡಿಗಳೊಳಗೆ ತುಂಬಿದ ಪಿರಂಗಿಗಳು ಅಗಮಿತವಾಗಿ ನಡೆದಿದ್ದವು. ಬಾಣಗಳು, ಬತ್ತಳಿಕೆಗಳು ಸಾವಿರಾರು ಬಂಡಿಗಳಲ್ಲಿ ತುಂಬಿ ಸಾಗಿದ್ದವು. ಅದರಂತೆಯೇ ಕರಿಯ ಮದ್ದಿನ ತಿತ್ತಿಬಾಣದ ಹೇರುಗಳೂ ಅಪೀಮಿನ ಸಾಲು ಮೂಟೆಗಳೂ ಲಕ್ಷಸಂಖ್ಯೆಯಲ್ಲಿ ಬರುತ್ತಿದ್ದವು. ಬಂಗಿಯ ಹೇರುಗಳೂ, ಸಾಸಿರಗಟ್ಟಲೆ ಗಂಗಸಾರ(ಒಂದು ಜಾತಿಯ ಹೆಂಡ), ಸಾರಾಯಿಗಳು ತುಂಬಿ ಸೂಸುವ ಪೀಪಗಳೂ, ಲೆಕ್ಕವೀಸೆಂದು ಹೇಳಲಿಕ್ಕೆ ಬಾರದಷ್ಟು ದಂಡಿನೊಂದಿಗೆ ಇದ್ದವು. ದಂಡಿನ ಸಂಜೋಗಗಳನ್ನು ಎತ್ತಿನ ಮೇಲೆ ಹೇರಿಕೊಂಡು ವಾಣಿಜಿಕರ ಮೊತ್ತವೇ ಹೊರಟಿದ್ದಿತು. ಸೈನ್ಯವು ಪಾಳೆಯಬಿಟ್ಟಲ್ಲೆಲ್ಲ ಕೆಲಸಮಾಡಲು ಕಲಾಸಿಗಳು ಕೊಡಲಿ, ಮಚ್ಚು, ಗುದ್ದಲಿ ಮೊನೆಹಾರೆ, ಕುಡುಗೋಲು, ತಡಿಕೆ, ಬುಟ್ಟಿ ಇವುಗಳನ್ನೆಲ್ಲ ತೆಗೆದುಕೊಂಡು ಹೊರಟಿದ್ದರು. ಇವರಲ್ಲದೆ ಕೊಟ್ವಾಣಿಕರು(ಕುಟ್ಟುವ ಮತ್ತು ಬೀಸುವವರು), ಬಗೆಬಗೆಯ ರೊಟ್ಟಿ, ಸಕ್ಕರೆ, ತುಪ್ಪ, ಮೊಟ್ಟೆಗಳನ್ನೆಲ್ಲ ಮಾರುವ ಬೀಹಾರಿಗರೂ(ವ್ಯಾಪಾರಿಗಳು) ಮೊದಲಾದವರು ಸೈನ್ಯದ ಜೊತೆ ಯುದ್ಧಸಂದರ್ಭದಲ್ಲಿ ಹೊರಡುತ್ತಿದ್ದರು.[೨೭]

ಅಲ್ಲದೆ ಡೋಲಿನ ಕುದುರೆಗಳೂ, ಡಮಾನ(ದೊಡ್ಡ ನಗಾರಿಗಳ), ಮದಕರಿಗಳೂ, ಚಿಕ್ಕನಗಾರಿಯ ಒಂಟೆಗಳೂ, ಪಾಳೆಯದ ಅಂಗರಕ್ಷಣೆಯ ರಾವುತರ ಕೂಡ ಸಪ್ಪಳ ಮಾಡುತ್ತ ತಿರುಗುತ್ತಿದ್ದವು. ದಂಡಿನ ಎಚ್ಚರಿಕೆಯ ಕಾವಲಿಗೆಂದು ಹೊಸಮನುಷ್ಯರ ವಾಸನೆಗೆ ಮುಸುಕಿ ಮುಂಬರುವ ನಾಯಿಗಳೂ ಶೋಭಿಸುತ್ತಿದ್ದವು. ತನ್ನ ಸೈನ್ಯವನ್ನು ವೀಕ್ಷಿಸಲು ಅರಸನು ಉಪ್ಪರಿಗೆಯ ಮೇಲೇರಿದನು. ದೊಡ್ಡಸೇನೆಯು ಊರಮುಂದಿನ ವೈಹಾಲಿಯ ಬಯಲಿನಲ್ಲಿಯೂ ಹೊಳೆದಂಡೆಯ ತೋಪುಗಳಲ್ಲಿಯೂ ಇಳಿಯಿತು. ಬಳ್ಳಾಪುರ, ಕೋಳಲ, ಪುಂಗನೂರು, ಮಾಗಡಿ, ಬೆಂಗಳೂರು ಮೊದಲಾದ ಮೊರಸುನಾಡ ಸೈನ್ಯದಲ್ಲಿ ಇಪ್ಪತ್ತು ಆನೆಗಳು, ಎರಡುಸಾವಿರ ಕುದುರೆ ಇಪ್ಪತ್ತು ಸಾವಿರ ಕಾಲಾಳುಗಳು, ತಲಕಾಡು, ಎಳಂದೂರು, ಅಮ್ಮಚವಾಡಿ, ತೆಂಕಣಾಂಬಿಕೋಟೆ ಮೊದಲಾದ ಒಳನಾಡ ದಳದಲ್ಲಿ ಹತ್ತುಆನೆಗಳು, ಆರುನೂರು ಕುದುರೆಗಳು, ಹತ್ತುಸಾವಿರ ಕಾಲಾಳುಗಳು, ಕಳಲೆ, ಬೇಲೂರು, ಕೆಳದಿ, ಮೊದಲಾದ ಬೇಡಪಡೆಯಲ್ಲಿ ಐದಾನೆ, ಐನೂರು ಕುದುರೆ, ಎರಡುಸಾವಿರ ಕಾಲಾಳುಗಳೂ ಇದ್ದರು. ರಾಜಜಗದೇವ, ಕೆರೆಯೂರ ತಿಮ್ಮನಾಯಕ ಮೊದಲಾದ ರಾವುತ ಕಾಲ್ಬಲದವರಲ್ಲಿ ಹದಿನೈದು ಆನೆಗಳು, ನಾಲ್ಕುಸಾವಿರ ಕುದುರೆಗಳು, ಇಪ್ಪತ್ನಾಲ್ಕು ಸಾವಿರ ಕಾಲಾಳುಗಳೂ, ಮೂಲಬಲದಲ್ಲಿ ಮುವ್ವತ್ತಾನೆ, ಮೂರುಸಾವಿರ ಕುದುರೆಗಳು, ಮುವ್ವತ್ತು ಸಾವಿರ ಕಾಲಾಳುಗಳೂ ಅಷ್ಟೂ ಸೇರಿ ನೂರಾನೆಗಳು, ಹನ್ನೆರಡು ಸಾವಿರ ಕುದುರೆ, ಲಕ್ಷ ಕಾಲ್ಬಲವಾಯಿತೆಂದು ಲೆಕ್ಕಿಗನು ಭಿನ್ನವಿಸಿದನು. ರಾಜನು ಕೇಳಿದವರೆಲ್ಲರಿಗೂ ವೀಳೆಯವನಿತ್ತು ಅವರವರ ಪಾಳೆಯಕ್ಕೆ ಕಳಿಸಿ ಅರಮನೆಗೆ ಬಂದು ತಮ್ಮ ದಂಡಾಧಿಕಾರಿಯನ್ನು ಕರೆದು ಪ್ರಯಾಣ ವ್ಯವಸ್ಥೆಯನ್ನು

ಮಾಡೆಂದು ಆಜ್ಞೆಯನ್ನು ಹೊರಡಿಸಿದನು. ಕೂಡಲೇ ಗುಡಿ-ಗುಡಾರ, ಹೇರೆತ್ತು, ಚೂರಿ, ಬಾಣ, ಬತ್ತಿ ಮೊದಲಾದವನ್ನೂ ಕೂಡಿಸುವುದನ್ನೂ ಆನೆ, ಕುದುರೆ, ಕಾಲಾಳುಗಳನ್ನು ಸಂಗ್ರಹಿಸುತ್ತಿದ್ದಾರೆಂದು ಸೈನ್ಯಾಧಿಕಾರಿಯು ಯುದ್ಧದ ಸಿದ್ಧತೆಯನ್ನು ತಿಳಿಸಿದನು.[೨೫]

ಅರಸನು ಕೂಡಲೇ ಮೈಸೂರು, ಕೆಸರೆಕೋಟೆಯ ಅಗಳು ಆಳ್ವೇರಿಗಳನ್ನು ಪರೀಕ್ಷಿಸಿ ಹೊರವಲಯದ ಮರೆತೆರೆಗಳನ್ನು ತೆಗೆಯಿಸಿ ಸಕಲ ಸಿದ್ಧತೆಗಳನ್ನು ಸಜ್ಜುಗೊಳಿಸಲು ಯುವರಾಜನನ್ನೂ ಹೊಸ ಕಾಲಾಳುಗಳನ್ನು ಒಗ್ಗೂಡಿಸಲು ಚೆನ್ನರಾಜಯ್ಯನನ್ನು ಇರಿಸಿ ಹೊಳೆಯವರೆಗೆ ಹೋಗಿ ನಿಂತಲ್ಲಿಗೆ ಶತ್ರುಗಳು ಬಂದು ಎದುರಾದರೆ ದಾಳಿ ಮಾಡುವುದು ಎಂದು ಆಜ್ಞೆಯಾಯಿತು. ಇದನ್ನು ತಮ್ಮ ಪಾಳೆಯದ ಎಲ್ಲ ಮುಖಂಡರಿಗೂ ಪತ್ರದ ಮುಖಾಂತರ ತಿಳಿಯಪಡಿಸಲಾಯಿತು. ಚಿಕ್ಕದೇವರಾಜ ಒಡೆಯರು ಮುಂಚೆ ಇದ್ದಂತಹ ತಮ್ಮ ಸೇನೆಯು ಸಾಲದೆಂದು ತಿಳಿದು ಹೊಸದಾಗಿ ಸೇನೆಯನ್ನು ಅಭಿವೃದ್ಧಿಗೊಳಿಸಲು ತಮ್ಮ ಸೀಮೆಯ ಆಯವ್ಯಯವನ್ನು ನೋಡಿಕೊಂಡು ಹಿಂದೆ ಇದ್ದಂತಹ ಸೈನ್ಯವಲ್ಲದೆ ಹೊಸದಾಗಿ ೧೩,೦೦೦ ಕುದುರೆ, ೧ ಲಕ್ಷ ಕಾಲ್ಬಲ ಇದಕ್ಕೆ ತಕ್ಕ ಕಾಮಾಟಿಗಳು ಮತ್ತು ಕಲಾಸಿಗಳಲ್ಲದೆ ಪಿರಂಗಿ, ಕತ್ತಿ, ತುಪಾಕಿ, ಕಠಾರಿ, ಗುರಾಣಿ, ಈಟಿ ಆಯುಧಗಳನ್ನು ಮದ್ದುಗುಂಡು, ಆನೆ, ಒಂಟೆ, ಎತ್ತುಬಂಡಿ, ಗುಡಾರ[೨೬] ಮುಂತಾದ ಯುದ್ಧಸಾಮಗ್ರಿಗಳನ್ನು ಸಿದ್ಧಮಾಡಿದರು.

ಔರಂಗಜೇಬನ ಆಡಳಿತಾವಧಿಯಲ್ಲಿ ಬಿಜಾಪುರ ಸುಲ್ತಾನರ ಆಳ್ವಿಕೆಯು ಅಂತ್ಯಗೊಂಡಿತು. ಇದರ ಬೆನ್ನಲ್ಲೇ ತುಂಗಭದ್ರೆಯ ದಕ್ಷಿಣ ಪ್ರಾಂತ್ಯಗಳನ್ನು ವಶಮಾಡಿಕೊಳ್ಳಲು ಮೊಘಲ್ ಸೇನೆಯನ್ನು ರವಾನಿಸಲಾಯಿತು. ಕ್ರಿ.ಶ.೧೬೮೭ರಲ್ಲಿ ದಕ್ಷಿಣದ ಪ್ರಾಂತ್ಯಗಳನ್ನು ಒಗ್ಗೂಡಿಸಿ ನೂತನ ಪ್ರಾಂತ್ಯವನ್ನು ರಚಿಸಿ, ಸಿರಾವನ್ನು ಅದರ ಆಡಳಿತ ಕೇಂದ್ರವನ್ನಾಗಿ ಮಾಡಲಾಯಿತು. ಬಸವಾಪಟ್ಟಣ, ಬೂದಿಹಾಳ, ಸಿರಾ, ಪೆನುಗೊಂಡ, ದೊಡ್ಡಬಳ್ಳಾಪುರ, ಹೊಸಕೋಟೆ, ಕೋಲಾರ ಪರಗಣಗಳನ್ನು ಅದು ಒಳಗೊಂಡಿತ್ತು.

ಹೈದರ್ ಅಲಿಯು ಕ್ರಿ.ಶ.೧೭೬೦ರಲ್ಲಿ ಗುಮ್ಮನಾಯಕನ ಪಾಳ್ಯದ ಮೇಲೆ ಯುದ್ಧಮಾಡಿ ದುರ್ಗವನ್ನು ವಶಮಾಡಿಕೊಂಡು ಸೂರೆಮಾಡಿದನು. ನಾಯಕ ಮತ್ತು ಅವನ ರಾಣಿಯನ್ನು ಬಂಧಿಸಿ ಶ್ರೀರಂಗಪಟ್ಟಣಕ್ಕೆ ವರ್ಗಾಯಿಸುವಾಗ ಮಾರ್ಗಮಧ್ಯದಲ್ಲಿಯೇ ನಾಯಕನು ಸಾವನ್ನಪ್ಪಿದನು. ಹೈದರ್ ಅಲಿಯು ಕ್ರಿ.ಶ.೧೭೬೨ರಲ್ಲಿ ಚಿಕ್ಕಬಳ್ಳಾಪುರದ ಕೋಟೆಗೆ ಮುತ್ತಿಗೆಹಾಕಿ ಅದನ್ನು ವಶಪಡಿಸಿಕೊಳ್ಳಲು ಮೂರುತಿಂಗಳ ಕಾಲ ಹರಸಾಹಸ ಮಾಡಿದರೂ ಕೋಟೆಯನ್ನು ಸ್ವಾಧೀನ ಪಡಿಸಿಕೊಳ್ಳಲಾಗಲಿಲ್ಲ. ಈ ಸಂದರ್ಭದಲ್ಲಿ ಸಂಧಿಯೇರ್ಪಟ್ಟು ಪಾಳೆಗಾರನು ಐದುಲಕ್ಷ ಪಗೋಡಗಳನ್ನು ಪೊಗಧಿಯಾಗಿ ನೀಡುವಂತಾಗಿ ಚಿಕ್ಕಬಳ್ಳಾಪುರದ ಮುತ್ತಿಗೆಯನ್ನು ಹಿಂತೆಗೆದುಕೊಂಡನು. ಒಪ್ಪಂದದಂತೆ ಅರ್ಧ ಹಣವನ್ನು ಆ ಕ್ಷಣದಲ್ಲಿಯೇ ಪಾವತಿಸಲಾಯಿತು. ಉಳಿದ ಮೊತ್ತದ ಹಣದ ವಸೂಲಾತಿಗಾಗಿ ಅಧಿಕಾರಿಯೊಬ್ಬನನ್ನು ಚಿಕ್ಕಬಳ್ಳಾಪುರದಲ್ಲೇ

ಉಳಿಸಲಾಯಿತು. ಆದರೆ ಹೈದರ್ ಅಲಿಯ ನಿರ್ಗಮನದಿಂದ ಚಿಕ್ಕಪ್ಪಗೌಡನು ಗುತ್ತಿಯ ಮರಾಠರ ಮುರಾರಿರಾಯನು, ಮರಾಠರ ಸೇನಾತುಕಡಿಯನ್ನು ಚಿಕ್ಕಪ್ಪನಾಯಕನ ಸಹಾಯಕ್ಕಾಗಿ ಚಿಕ್ಕಬಳ್ಳಾಪುರದಲ್ಲಿ ನೇಮಿಸಿದನು. ಆ ಸೇನಾತುಕಡಿಯ ಕಟ್ಟೆಚ್ಚರದ ಕಾವಲಿಗೆ ಚಿಕ್ಕಬಳ್ಳಾಪುರವನ್ನು ವಹಿಸಿಕೊಂಡ ನಾಯಕನು ರಾಜಪರಿವಾರದೊಂದಿಗೆ ನಂದಿದುರ್ಗದಲ್ಲಿ ಆಶ್ರಯವನ್ನು ಪಡೆದನು. ಈ ಬೆಳವಣಿಗೆಯನ್ನು ತಿಳಿದ ಹೈದರ್ ಅಲಿಯು ತಕ್ಷಣವೇ ಚಿಕ್ಕಬಳ್ಳಾಪುರಕ್ಕೆ ಮರುಮುತ್ತಿಗೆಯನ್ನು ಹಾಕಿ ಕೋಟೆಯನ್ನು ವಶಪಡಿಸಿಕೊಂಡು ಅದರ ರಕ್ಷಣೆಗೆ ನಿಯೋಜಿಸಿದ್ದ ಮರಾಠರ ಸೈನಿಕರನ್ನು ತೀವ್ರವಾಗಿ ಶಿಕ್ಷಿಸಿದನು. ಅದರ ಬೆನ್ನಲ್ಲೇ ನಂದಿದುರ್ಗ, ಕಳವಾರದುರ್ಗ, ಗುಡಿಬಂಡೆ, ಇಟಿಕಲ್‌ದುರ್ಗ, ಕೋಟೆಕೊಂಡಗಳಿಗೂ ಮುತ್ತಿಗೆಹಾಕಿ ಚಿಕ್ಕಪ್ಪಗೌಡನನ್ನು ಮತ್ತು ಅವನ ಬಂಧುಗಳನ್ನು ಬಂಧಿಸಿ ಬೆಂಗಳೂರಿಗೆ ವರ್ಗಾಯಿಸಿದನು. ಆನಂತರ ಅವರನ್ನು ಕೋಯಮತ್ತೂರಿಗೆ ವರ್ಗಾಯಿಸಲಾಯಿತು.

ಮರಾಠರ ಸೈನ್ಯವು ಕಲಿಸಗೆರೆ, ಕೊತ್ತತ್ತಿ ಗ್ರಾಮಗಳ ಬಳಿ ಬೀಡುಬಿಟ್ಟಿದ್ದಾಗ ರಾತ್ರಿ ವೇಳೆಯಲ್ಲಿ ತನ್ನ ಸೈನ್ಯದಲ್ಲಿದ್ದ ೩ ಸಾವಿರ ಆವಿನದನದ ಎತ್ತುಗಳ ಕೊಂಬಿಗೆ ಪಂಜುಗಳನ್ನು ಕಟ್ಟಿಸಿ ಮರಾಠರ ಮೇಲೆ ದಾಳಿಮಾಡಿದನು.[೩೦] ಹಾಗೆಯೇ ಅರಮನೆಯಲ್ಲಿ ಬೊಕ್ಕಸಗಳನ್ನು ಪ್ರಾರಂಭಿಸಿದರು. ಈ ಬೊಕ್ಕಸಗಳಲ್ಲಿ ಯುದ್ಧಗಳಿಗೆ ಮತ್ತು ಸೈನ್ಯಕ್ಕೆ ಅಗತ್ಯವಾಗಿದ್ದ ಕತ್ತಿಯ ಬೊಕ್ಕಸ, ಕುದುರೆಲಾಯ, ಆನೆಸಾಲು, ಒಂಟೆಲಾಯ ಕೋಟೆಯೆತ್ತು, ಸಮುಖದ ಊಳಿಗ, ಖಾಸಾಮೈಗಾವಲ ಜನಗಳು, ನಾಮಾಂತರ ಖಾಸ್‌ರಾವುತರು ಮುಂತಾದವರನ್ನು ನೇಮಿಸಿದರು.[೩೧] ಕ್ರಿ.ಶ.೧೭೯೪ರಲ್ಲಿ ಮೈಸೂರಿನ ಮೇಲೆ ಮರಾಠರ ಶಿದ್ದೋಜಿ ಘೋರ್ಪಡೆ ಎಂಬುವವನು ಆಕ್ರಮಣ ಮಾಡಿದಾಗ ಯುದ್ಧದಲ್ಲಿ ಕೋವಿ, ಫಿರಂಗಿ, ಜಂಜಾಲು ತುಪಾಕಿ, ಮಕರಡಿಬ್ಬಿ, ಜಬರಜಂಗಿ ಮೊದಲಾದ ಆಯುಧಗಳನ್ನು ಬಳಸಿ ಯುದ್ಧಮಾಡಿ ಮರಾಠರನ್ನು ಸೋಲಿಸಿದರು. ಮರಾಠರ ಸರದಾರನು ನಾವು ಕತ್ತಿಯಿಂದ ಯುದ್ಧ ಮಾಡಿದರೆ ಇವರು ಮದ್ದುಗುಂಡುಗಳಿಂದ ಯುದ್ಧಮಾಡುತ್ತಾರೆಂದು ಭಯಭೀತರಾಗಿ ಕಂಗೆಟ್ಟು ಇದು ಶ್ರೀರಂಗಪಟ್ಟಣವಲ್ಲ ಫಿರಂಗಿಪಟ್ಟಣ ಎಂದು ಯುದ್ಧವಾಡಲಾರದೆ ಓಡಿಹೋದರು.[೩೨] ಚಾಮರಾಜ ಒಡೆಯರ ಆಳ್ವಿಕೆಯ ಕಾಲಾವಧಿಯಲ್ಲಿ ದಳವಾಯಿ ದೇವರಾಜಯ್ಯನು ಸೇನೆಯಲ್ಲಿದ್ದ ಶೂರರಾದಂತಹ ಕೆಲವು ಮುಖಂಡರ ಬಳಿಗೆ ರಾತ್ರಿವೇಳೆಯಲ್ಲಿ ಬಂದು ಸೇನಾಮುಖ್ಯಸ್ಥನಾಗಿದ್ದ ಗುಲಾಂ ಹೈದರ್ ಎಂಬ ಜಮಾದಾರನ ಬಳಿ ಸ್ವಾಮಿದ್ರೋಹ ಮಾಡುವಂತೆ ಒಂದು ಒಪ್ಪಂದವನ್ನು ಮಾಡಿಕೊಂಡನು. ಆ ಒಪ್ಪಂದದ ಪ್ರಕಾರ ಅರಮನೆಯಲ್ಲಿ ನಿಮ್ಮ ಪೂರ್ವಿಕರ ಕಾಲದಿಂದಲೂ ಚಾಕರಿ ಮಾಡಿಕೊಂಡು ಬಂದಿದ್ದೀರಿ. ದೊರೆಗಳ ಬಳಿಯಲ್ಲಿ ಇನ್ನು ಚಾಕರಿ ಮಾಡುವುದಿಲ್ಲ ಎಂದು ಹೊರಟು ಬಂದರೆ ಅಧಿಕ ವೇತನವನ್ನು ನಾವು ನಮ್ಮಕೈಯಿಂದ ನೀಡುತ್ತೇವೆಂದು ೩,೦೦೦ ಕುದುರೆಗಳು ಮತ್ತು ೬,೦೦೦ ಬಾರಿನವರನ್ನು ಸೇನೆಯಿಂದ ಹೊರಬರುವಂತೆ ಮಾಡಿ, ಅವರುಗಳು ಯಾವಾಗಲೂ ಯುದ್ಧಸನ್ನದ್ದರಾಗಿದ್ದು ಯಾವಾಗ ಹೇಳಿ ಕಳುಹಿಸಿದರೂ ಬರಬೇಕೆಂದು[೩೩] ಒಪ್ಪಂದವನ್ನು ಮಾಡಿಕೊಂಡನು.

ಹೈದರ್ ಅಲಿಯು ಆರ್ಕಾಟಿಗೆ ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಅಪಾರವಾದ ಸಂಪತ್ತನ್ನು ಲೂಟಿಮಾಡಿ ಅವರ ಸೈನ್ಯದಲ್ಲಿದ್ದ ಆನೆ, ಕುದುರೆ, ಒಂಟೆಗಳನ್ನು ತೆಗೆದುಕೊಂಡು ಶ್ರೀರಂಗಪಟ್ಟಣಕ್ಕೆ ೧೫ ಒಂಟೆಗಳ ಮೇಲೆ ಸಂಪತ್ತನ್ನು ಹೇರಿಕೊಂಡು ಬಂದನು. ಆರ್ಕಾಟಿನ ಅಂತರ್ಕಲಹದಲ್ಲಿ ಹೈದರನು ಅತ್ಯಂತ ಬುದ್ಧಿವಂತಿಕೆಯಿಂದ ನಡೆದುಕೊಂಡು ತನ್ನ ಸೈನ್ಯವನ್ನು ಬಲಪಡಿಸುವ ಕಾರ್ಯವನ್ನು ಮಾಡಿದನು. ಮೈಸೂರಿನ ಆಡಳಿತಕ್ಕೆ ಹೈದರ್ ಅಲಿಯು ಪ್ರವೇಶವಾದ ಕೂಡಲೇ ಯುದ್ಧಗಳ ಪರಿಸ್ಥಿತಿ ಹಾಗೂ ಅವುಗಳ ಸ್ವರೂಪವೇ ಬದಲಾಯಿತು. ಅದಕ್ಕೆ ಪ್ರಮುಖವಾದ ಕಾರಣ ಅವನ ಕುಟಿಲತೆ, ಮುಂದಾಲೋಚನೆ ಮತ್ತು ಚಾಣಾಕ್ಷತೆಗಳೇ ಪ್ರಮುಖ ಕಾರಣವೆಂದು ಹೇಳಬಹುದು. ಕೆಲವೇ ಕ್ಷಣಗಳಲ್ಲಿ ಯುದ್ಧದ ಸ್ಥಿಗತಿಗಳನ್ನು ಬದಲಾಯಿಸುವ ಶಕ್ತಿ ಹೈದರನಿಗೆ ರೂಢಿಗತವಾಗಿತ್ತು. ಜೊತೆಗೆ ಯುದ್ಧದಲ್ಲಿ ಗೆದ್ದು ಅಪಾರವಾದ ಸಂಪತ್ತನ್ನು ಹೊತ್ತು ತರುವಾಗ ಅವರ ಮೇಲೆ ತನ್ನ ಖಾಸಗಿ ಸೇನೆಯನ್ನು ಬಿಟ್ಟು ಅವರನ್ನು ಲೂಟಿಮಾಡಿಸುತ್ತಿದ್ದನು. ದಳವಾಯಿ ನಂಜರಾಜಯ್ಯನು ಸರ್ವಾಧಿಕಾರಿಯಾಗಿದ್ದಾಗ ಶ್ರೀರಂಗಪಟ್ಟಣದ ಕೋಟೆಗೆ ನಾಲ್ಕು ಫಿರಂಗಿಗಳಿಂದ ಗುಂಡುಗಳನ್ನು ಹೊಡೆಸಿ ತಾನು ಆಂತರಿಕ ಕಲಹಗಳಲ್ಲಿ ಪ್ರಮುಖ ಪಾತ್ರಧಾರನೆಂದು ತಿಳಿಯ ಪಡಿಸುವ ಪ್ರಯತ್ನಗಳನ್ನು ಮಾಡಿದ್ದನು. ಇಲ್ಲಿಂದಲೇ ಆಂತರಿಕ ಕಲಹಗಳು ಯುದ್ಧವಾಗುವ ಮಟ್ಟವನ್ನು ತಲುಪಿದ್ದವು. ಸತ್ಯಮಂಗಲದ ಕೋಟೆಯಲ್ಲಿ ದೇವರಾಜಯ್ಯನು ತನ್ನ ಸ್ವಂತ ಸೈನ್ಯದೊಂದಿಗೆ ಹೋಗಿ ಅಡಗಿಕೊಂಡಾಗ ಹೈದರ್ ಅಲಿಯು ಕೋಟೆಯ ಬಾಗಿಲಿಗೆ ಮೊರ್ಚೆಕಟ್ಟಿ ತೋಪುಗಳಿಂದ ಗುಂಡು ಹಾರಿಸಿದನು.[೩೪]

ಹೈದರ್ ಅಲಿಯು ಎಲ್ಲಾ ಅಧಿಕಾರಿಗಳನ್ನು ತನ್ನ ಅಧಿಕಾರಾವಧಿಯಲ್ಲಿ ದೊರೆಗಳ ಮುಂದೆ ನಯವಾಗಿ ಮತ್ತು ಗೌರವದಿಂದ ನಜರಾಣೆ ಮಾಡಿಸಿ ಹೇರಳವಾಗಿ ಹಣವನ್ನು ತೆಗೆದುಕೊಂಡು ಫೌಜಿನವರಿಗೆ ಹಣವನ್ನು ವೇತನವಾಗಿ ಬಟವಾಡೆ ಮಾಡಿ ತನ್ನೆಡೆಗೆ ಸೆಳೆಯುವ ಪ್ರಯತ್ನನ್ನು ಮಾಡಿ ಅದರಲ್ಲಿ ಯಶಸ್ವಿಯಾದನು. ಸೈನ್ಯದಲ್ಲಿ ನಾಲ್ಕುಸಾವಿರ ಕುದುರೆಗಳನ್ನು ಬಿಡುಗಡೆಗೊಳಿಸಿ ಮೂರುಸಾವಿರ ಕುದುರೆಗಳನ್ನು ಸೇನೆಯಲ್ಲಿ ಉಳಿಸಿಕೊಂಡನು. ಸೇನೆಯಿಂದ ಬಿಡುಗಡೆಯಾದವರನ್ನು ಖಾಯಂ ಸೈನ್ಯದಿಂದ ಲೂಟಿಮಾಡಿಸಿದನು.[೩೫] ಮರಾಠರು ಮಿರ್ಜಿ ಗೋಪಾಲರಾಯನ ನೇತೃತ್ವದಲ್ಲಿ ಬೆಂಗಳೂರನ್ನು ವಶಮಾಡಿಕೊಂಡು ವಿಶಾಲವಾದ ಪ್ರದೇಶದಲ್ಲಿ ಕೊಳ್ಳೆ ಹೊಡೆಯುತ್ತಿದ್ದರು. ಹೈದರನು ತನ್ನ ಸೇನೆಯೊಂದಿಗೆ ಚನ್ನಪಟ್ಟಣದ ಕಾಡಿನಲ್ಲಿ ಉಳಿದುಕೊಂಡು ರಾತ್ರಿಯ ವೇಳೆಯಲ್ಲಿ ಶತ್ರುಗಳ ಮೇಲೆ ಅನಿರೀಕ್ಷಿತ ದಾಳಿಗಳನ್ನು ನಡೆಸಿ ಹಗಲಿನಲ್ಲಿ ಕಾಡಿನಲ್ಲಿ ಅವಿತುಕೊಳ್ಳುತ್ತಿದ್ದರು. ಹೈದರ್ ಅಲಿ ಮತ್ತವನ ಸೈನಿಕರು ರಾತ್ರಿವೇಳೆಯಲ್ಲಿ ಗಸ್ತುತಿರುಗುವ ಸಂದರ್ಭದಲ್ಲಿ ಕೈಗೆಸಿಕ್ಕ ಶತ್ರುಸೈನಿಕರನ್ನು ಕೊಲ್ಲುತ್ತಿದ್ದರು.[೩೬] ಮರಾಠರು ತಮ್ಮ ಸೈನ್ಯದ ಖರ್ಚಿಗೆ ಮತ್ತು ಅದರ ನಷ್ಟಪರಿಹಾರವಾಗಿ ೩೦ ಲಕ್ಷರೂಗಳಿಗೆ ಬೇಡಿಕೆಯಿಟ್ಟರೆ, ಹೈದರನು ಮರಾಠರಿಗೆ ಕೊಟ್ಟಿದ್ದು ಕೇವಲ ೨೬ಲಕ್ಷಗಳು ಮಾತ್ರ, ಮರಾಠರು ಶ್ರೀರಂಗಪಟ್ಟಣಕ್ಕೆ ದಾಳಿಮಾಡಿದಾಗ ಹೈದರ್ ಅಲಿಯು

ಹಗಲು ಹೊತ್ತಿನಲ್ಲಿ ಸಾಧ್ಯವಿದ್ದಷ್ಟು ದೋಣಿಗಳನ್ನು ಸಂಗ್ರಹ ಮಾಡಿ ಸಂಸಾರ ಸಮೇತ ಮದ್ದುಗುಂಡುಗಳನ್ನು ತನ್ನ ಜೊತೆಯಲ್ಲಿಯೇ ಕೊಂಡೊಯ್ದನು.[೩೬] ಯುದ್ಧಕ್ಕಾಗಿ ಖರ್ಚುಮಾಡಿದ ಹಣದ ಜೊತೆಗೆ ಕಪ್ಪಕಾಣಿಕೆ ಮತ್ತು ಮೈಸೂರಿನವರು ಗೆದ್ದುಕೊಂಡಂತಹ ಮರಾಠರ ಠಾಣ್ಯಗಳನ್ನು ಅವರಿಗೆ ವಾಪಸ್ಸು ನೀಡಲಾಯಿತು.

ಹೈದರ್ ಅಲಿಯು ತನ್ನ ಭಾವನಾದ ಮಖ್ದುಂಸಾಹೇಬನನ್ನು ಕೋಟೆಯೊಂದಕ್ಕೆ ಕಿಲ್ಲೆದಾರನನ್ನಾಗಿ ನೇಮಿಸಿ ರಾಜನನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಅವನಿಗೇ ನೀಡಿದ್ದನು. ಇದರ ಜೊತೆಗೆ ಹಣಕಾಸು ಪರಿಸ್ಥಿತಿಯ ನಿರ್ವಹಣೆ ಮತ್ತು ತನ್ನ ಸಶಸ್ತ್ರ ಸೈನಿಕರನ್ನು ಪೂರ್ತಿಯಾಗಿ ಸಜ್ಜುಗೊಳಿಸುವ ಕೆಲಸ ಹಾಗೂ ಒಂದೇ ಸಮನೆ ನಡೆದ ಯುದ್ಧಗಳಿಂದಾಗಿ ಬತ್ತಿ ಹೋಗಿದ್ದ ರಾಜ್ಯದ ಖಜಾನೆಯನ್ನು ತುಂಬಿಸುವ ಸಲುವಾಗಿ ಶತ್ರುಗಳಿಂದ ಮದ್ದುಗುಂಡುಗಳ ಮತ್ತು ಧಾನ್ಯದ ಉಗ್ರಾಣಗಳನ್ನೂ ತನ್ನ ವಶಕ್ಕೆ ತೆಗೆದುಕೊಂಡನು. ಅವುಗಳ ಸುಸ್ಥಿತಿಯ ಮೇಲೆ ಮುಂದಿನ ಯೋಜನೆಗಳು ನಿಂತಿದ್ದವು. ಸೈನ್ಯವನ್ನು ಚೆನ್ನಾಗಿ ಇಟ್ಟುಕೊಳ್ಳುವುದು. ಒಳ್ಳೆಯ ರೀತಿಯಲ್ಲಿ ತನ್ನ ಸೈನ್ಯಕ್ಕೆ ತರಬೇತಿ ದೊರೆಯುವಂತೆ ಮಾಡುವುದು, ಸದಾ ಶಿಸ್ತಿನಲ್ಲಿರುವಂತೆ ನೋಡಿಕೊಳ್ಳುವುದು ಅವನ ಪ್ರಮುಖ ಕರ್ತವ್ಯಗಳಾಗಿದ್ದವು. ಇದಕ್ಕಾಗಿ ಭಾರತದ ವಿವಿಧ ಭಾಗಗಳ ಸಮರ್ಥ ಜನರನ್ನು ತನ್ನ ಸೇನೆಗೆ ಸೇರಿಸಿಕೊಳ್ಳಲು ಆಹ್ವಾನಿಸಿ, ಬಹಳ ಧಾರಾಳವಾಗಿ ಅವರಿಗೆ ವೇತನವನ್ನು ನೀಡಿದನು. ಕೀರ್ಮಾನಿಯು ಹೇಳುವಂತೆ "ಹಲವಾರು ಬುಡಕಟ್ಟುಗಳಿಗೆ ಮತ್ತು ರಾಜ್ಯಗಳಿಗೆ ಸೇರಿದ ಸಮರ್ಥ ಯೋಧರು, ಕುಶಲಕರ್ಮಿಗಳು, ಉದ್ವೇಗವಿಲ್ಲದೆ, ಒರೆಯೊಳಕ್ಕೆ ಸೇರಿಕೊಂಡ ಕತ್ತಿಯಂತೆ ಎಲ್ಲೋ ಮೂಲೆಯಲ್ಲಿ ಹುದುಗಿಕೊಂಡಿದ್ದವರೇ ಜಾಸ್ತಿಯಿದ್ದರು. ಈ ಆಹ್ವಾನದಿಂದ ಮೇಲೆದ್ದ ಅವರು ತಮ್ಮ ಅದೃಷ್ಟದ ಮುಖಕ್ಕೆ ಮೆತ್ತಿದ್ದ ದೂಳನ್ನೂ, ತುಕ್ಕನ್ನೂ ಸೀಟಿ ಹಾಕಿದರು. ತಲೆಯನ್ನು ಮೆಲಕ್ಕೆತ್ತಿಕೊಂಡು ಹೈದರನ ಮುಂದೆ ಬಂದರು. ಅವನು ಅವರವರ ಸಾಮರ್ಥ್ಯ ಮತ್ತು ಅರ್ಹತೆಗಳಿಗೆ ಅನುಗುಣವಾಗಿ ತನ್ನ ಸೇನೆಯಲ್ಲಿ ಉದ್ಯೋಗ ನೀಡಿದನು"[೩೭] ಎಂದು ಹೇಲಿಕೆಯನ್ನು ನೀಡಿದ್ದಾರೆ.

ಹೈದರನು ಯಾವುದೇ ವಿಜಯಯಾತ್ರೆಯನ್ನು ಕೈಗೊಳ್ಳುವ ಮೊದಲು ಆ ಪ್ರದೇಶಗಳ ಭೌಗೋಳಿಕ ಪರಿಸರವನ್ನು ಮತ್ತು ರಾಜಕೀಯ ಸ್ಥಿತಿಗತಿಗಳನ್ನೂ ಚೆನ್ನಾಗಿ ಪರಿಚಯ ಮಾಡಿಕೊಳ್ಳುತ್ತಿದ್ದನು. ಬೇಹುಗಾರರು ಆ ಪ್ರದೇಶದಲ್ಲೆಲ್ಲಾ ಸುತ್ತಾಡಿ ಅಗತ್ಯವಾದ ಎಲ್ಲಾ ಮಾಹಿತಿಗಳನ್ನು ಕಲೆಹಾಕಿ ಹೈದರನಿಗೆ ಒಪ್ಪಿಸಬೇಕಿತ್ತು. ಉಪಾಯವಾಗಿ ಶತ್ರುಗಳೊಂದಿಗೆ ಒಪ್ಪಂದ ಮಾಡಿಕೊಂಡು ಅವರಿಂದ ಅಪಾರವಾದ ಹಣವನ್ನು ವಸೂಲಿಮಾಡುವುದೇ ಒಂದು ಉದ್ಯೋಗವಾಗಿತ್ತು. ಅದು ಚಿಕ್ಕಬಳ್ಳಾಪುರದ ಪಾಳೆಯಗಾರ, ಮರಾಠರು ಮತ್ತು ಬಿದನೂರಿನ ನಾಯಕರೊಂದಿಗಿನ ಒಪ್ಪಂದಗಳೇ ಪ್ರಮುಖ ಉದಾಹರಣೆಗಳಾಗಿ ಕಂಡುಬರುತ್ತವೆ. ಶತ್ರುಗಳೊಂದಿಗೆ ಸೇರಿಕೊಂಡು ತಮ್ಮ ಸ್ವಂತ ರಾಜ್ಯಕ್ಕೆ ದ್ರೋಹವನ್ನು ಎಸಗುತ್ತಿದ್ದ ಅಧಿಕಾರಿಗಳಿಗೆ ಶತ್ರುರಾಜರು

ನೀಡುತ್ತಿದ್ದ ಆಮಿಷಗಳ ಬಹುಮಾನಗಳೇ ರೀತಿಯಲ್ಲಿ ಆಕ್ರಮಣಮಾಡಲು ಪ್ರಮುಖ ಅಸ್ತ್ರಗಳಾಗಿದ್ದವು. ಒಂದು ಸಾಮ್ರಾಜ್ಯದಲ್ಲಿ ರಾಜಧಾನಿಯ ಸುತ್ತಲೂ ಬಹುದೂರದವರೆಗೆ ಕಾವಲುಶಿಬಿರಗಳನ್ನು ಸ್ಥಾಪಿಸುವಂತಹ ಯೋಜನೆಯನ್ನು ಬಿದನೂರಿನ ಅರಸನಾದಂತಹ ಶಿವಪ್ಪನಾಯಕನ ಯೋಜನೆಗಳಿಂದ ಗಮನಿಸಬಹುದು.

ಹೈದರನು ಬಿದನೂರಿನ ರಾಣಿಚೆನ್ನಮ್ಮಳಿಂದ ಕ್ರಿ.ಶ.೧೭೬೩ರಲ್ಲಿ ಶಿವಮೊಗ್ಗವನ್ನು ವಶಪಡಿಸಿಕೊಂಡು ಸಂಪತ್ತನ್ನೆಲ್ಲಾ ಸೂರೆಮಾಡಿ ಸೈನಿಕರಿಗೆ ಹಂಚುವ ಕಾರ್ಯವನ್ನು ಮಾಡಿದನು. ಈ ರೀತಿಯ ಆಮಿಷಗಳನ್ನು ತೋರಿಸಿ ಸೈನಿಕರು ಯುದ್ಧಗಳಲ್ಲಿ ಸದಾ ಉತ್ಸಾಹದಿಂದ ಹೋರಾಡುವಂತೆ ನೋಡಿಕೊಳ್ಳಲಾಗುತ್ತಿತ್ತು.[೩೮] ಸವಣೂರು ನವಾಬನು ಹೈದರನೊಂದಿಗೆ ಒಂದು ಕೋಟಿ ರೂಪಾಯಿಗಳ ಶಾಂತಿಒಪ್ಪಂದವನ್ನು ಮಾಡಿಕೊಂಡನು. ಆದರೆ ಅಷ್ಟೊಂದು ಹಣ ಆತನಲ್ಲಿ ಇಲ್ಲದ ಕಾರಣ ಆತನಿಂದ ಆನೆಗಳು, ಒಂಟೆಗಳು, ಗುಡಾರಗಳು, ಮದ್ದುಗುಂಡುಗಳನ್ನು ವಶಮಾಡಿಕೊಂಡು ತನ್ನ ಸೈನ್ಯವನ್ನು ಬಲಪಡಿಸಿದನು. ಹೈದರನಿಗೆ ಯುದ್ಧವು ಅನಿವಾರ್ಯವಾದ ಸಂದರ್ಭಗಳಲ್ಲಿ ಆಕ್ರಮಣಗಳು ರಕ್ಷಣೆಯ ಅತ್ಯುತ್ತಮವಾದ ವಿಧಾನಗಳಾಗಿದ್ದವು. ಆದರೆ ಮಳೆಗಾಲದಲ್ಲಿ ಯುದ್ಧಮಾಡುವುದು ಕಷ್ಟಕರವಾಗಿದ್ದರೂ ಮರಾಠರು ಮಿರ್ಜಿಗೋಪಾಲರಾಯನ ನೇತೃತ್ವದಲ್ಲಿ ದಾಳಿಮಾಡಿದ್ದರು. ಮಲಬಾರ್ ಪ್ರಾಂತ್ಯವು ಸದಾಕಾಲವೂ ಯುದ್ಧಪ್ರೇಮಿಗಳಿಂದ ಕೂಡಿದ್ದಿತು. ಸಣ್ಣಸಣ್ಣ ಪಾಳೆಯಪಟ್ಟುಗಳಾಗಿ ಈ ಪ್ರಾಂತ್ಯವು ಒಡೆದುಹೋಗಿತ್ತು. ಅವು ಸದಾಕಾಲವೂ ತಮ್ಮ ತಮ್ಮೊಳಗೆ ಕಚ್ಚಾಡುತ್ತಿದ್ದ ಈ ಪಾಳೆಯಪಟ್ಟುಗಳ ನಾಯಕರು ತಮಗೆ ತಾವೇ ನಾಯಕರಾಗಿದ್ದರು. ಇವರು ಯದ್ಧೋತ್ಸಾಹಿಗಳಾಗಿದ್ದು ಪರಸ್ಪರ ಕಲಹ, ಕಿತ್ತಾಟ, ವೈರತ್ವ, ಮಾತ್ಸರ್ಯಗಳಲ್ಲೇ ನಿರತರಾಗಿದ್ದುದರಿಂದ ಅನೈಕ್ಯತೆಯು ಅವರ ಮೂಲ ದೌರ್ಬಲ್ಯವಾಗಿದ್ದಿತು. ಅವರ ಈ ಅವ್ಯವಸ್ಥಿತವಾದ ಯುದ್ಧಗಳಲ್ಲಿ ಅವರ ಶಕ್ತಿಸಾಮರ್ಥ್ಯಗಳು ಹಾಳಾಗುತ್ತಿದ್ದವು. ಪ್ರತಿಯೊಂದು ಘಟಕವೂ ತಾನು ಸ್ವತಂತ್ರ ರಾಜ್ಯವೆಂದು ಗುರ್ತಿಸಿಕೊಳ್ಳಲು ತೋರಿಸುತ್ತಿದ್ದ ಅತ್ಯುತ್ಸಾಹದಿಂದಾಗಿ ಇಡೀ ಮಲಬಾರ್ ಪ್ರಾಂತ್ಯವು ಸದಾಕಾಲವೂ ಯುದ್ಧಶಿಬಿರದಂತೆ ಕಂಗೊಳಿಸುತ್ತಿತ್ತು. ಈ ರಾಜ್ಯಗಳಲ್ಲಿದ್ದ ಪರಸ್ಪರ ವಿರುದ್ಧವಾದ ಹಿತಾಸಕ್ತಿಗಳು, ನಿರಂತರವಾದ ಒಳಸಂಚು, ಪಿತೂರಿಗಳು ಇಡೀ ಮಲಬಾರು ಪ್ರಾಂತ್ಯವನ್ನೇ ಅರಾಜಕತೆಯ ಅವ್ಯವಸ್ಥೆಗೆ ನೂಕಿದ್ದವು. ಒಂದು ಪಾಳೆಯಪಟ್ಟಿನ ವಿಸ್ತಾರ ಕೆಲವೇ ಮೈಲಿಗಳಿಗೆ ಮಾತ್ರ ಸೀಮಿತವಾಗಿತ್ತು.[೩೯] ಈ ಪರಿಸ್ಥಿತಿಯು ಮೈಸೂರಿನ ಸೈನ್ಯಕ್ಕೆ ಒಂದು ಅವಕಾಶವಾಗಿ ಒದಗಿಬಂದಿತು.

ಡಚ್ ಮೂಲಗಳ ಪ್ರಕಾರ ಮಲಬಾರ್ ದಂಡಯಾತ್ರೆಗೆ ಮೈಸೂರಿನ ಸೈನ್ಯದಲ್ಲಿ ನಲವತ್ತು ಸಾವಿರ ಯೋಧರು ೧೦,೦೦೦ ಕುದುರೆಗಳು ನಾಲ್ಕುನೂರ ಐವತ್ತುಜನ ಯೂರೋಪಿಯನ್ ಸೈನಿಕರಿದ್ದು, ನಾಲ್ಕುತಿಂಗಳುಗಳಿಗೆ ಸಾಕಾಗುವಷ್ಟು ದಿನಸಿ ಪದಾರ್ಥಗಳನ್ನು ಕೊಂಡೊಯ್ದಿದ್ದರು. ಪೋರ್ಚುಗೀಸ್ ಮೂಲಗಳ ಪ್ರಕಾರ ಮಂಗಳೂರಿನ ಮೂಲಕ ಮಲಬಾರನ್ನು ತಲುಪಲು

ಮೊದಲಬಾರಿಗೆ ಸೈನ್ಯ ಮತ್ತು ಸಾಮಾಗ್ರಿಗಳನ್ನು ಸಾಗಿಸಲು ನೌಕಾಬಲವನ್ನು ಬಳಸಲಾಗಿತ್ತು. ಅವನ ಈ ನೌಕಾಬಲದಲ್ಲಿ ೮೦ ಹಡುಗುಗಳು, ೧೩ ಹಾಯಿಹಡಗುಗಳು, ಯುದ್ಧನೌಕೆಗಳು, ಯುದ್ಧಸಾಮಗ್ರಿಗಳು ಮತ್ತು ಆಹಾರ ಪದಾರ್ಥಗಳನ್ನು ಸಾಗಿಸಲು ಸಣ್ಣ ದೋಣಿಗಳಿದ್ದವು. ಡಚ್ ನಿರೂಪಣೆಗಳ ಪ್ರಕಾರ ಹೈದರನ ನೌಕಾಬಲದಲ್ಲಿ ೩ ಹಡಗುಗಳು ೭ ಚಿಕ್ಕಹಡಗುಗಳು, ೪೦ ಗಲ್ಲಿವಾಟ್ (Gullivats) ಮತ್ತು ದಿನಸಿ ಪದಾರ್ಥಗಳನ್ನು ಹೇರಿದ ೫೦ ಇತರ ದೋಣಿಗಳಿದ್ದವು. ಈ ನೌಕಾಬಲಕ್ಕೆ ಒಬ್ಬ ಭಾರತೀಯ ಮತ್ತೊಬ್ಬ ಯೂರೋಪಿಯನ್‌ನ ಸೇನಾಪತಿಗಳು ಕಡ್ಡಾಯವಾಗಿ ಇರಲೇಬೇಕಿತ್ತು. ಆದರೆ ಭಾರತೀಯ ಅಧಿಕಾರಿಯೊಬ್ಬನು ಈ ಹಡಗುಗಳಿಗೆ ನಿರ್ದೇಶನ ನೀಡುತ್ತಿದ್ದನು. ನೌಕಾಸೇನೆಯ ಚಲನೆ ಅದಕ್ಕೆ ಸಂಬಂಧಿಸಿದ ವಿವರಗಳೆಲ್ಲವನ್ನೂ ಯೂರೋಪಿಯನ್ ದಳಪತಿ ಸ್ಟಾನೆಟ್[೪೦] ಎಂಬುವವನಿಗೆ ವಹಿಸಲಾಗಿತ್ತು.

ಕ್ರಿ.ಶ.೧೭೬೬ರಲ್ಲಿ ಮಲಬಾರನ್ನು ಹೈದರನು ಗೆದ್ದಮೇಲೆ ಸಂಚಾರಕ್ಕೆ ನೀರು ತುಂಬಿದ ಭತ್ತದ ಗದ್ದೆಗಳಲ್ಲಿ ಕಷ್ಟವಾದ್ದರಿಂದ ಯೋಧರು ಹೊದೆಯುವ ಕಂಬಳಿಯನ್ನು ಬಿಟ್ಟು ಬೇರೇನನ್ನೂ ಹೊತ್ತುಕೊಳ್ಳದ ಹಾಗೆ ಆದೇಶಿಸಿದನು. ಕುದುರೆಗಳಿಗೆ ತಡಿಹಾಕದೆ ಆನೆಗಳ ಮೇಲೆ ಮದ್ದುಗುಂಡುಗಳು ಮತ್ತು ದಿನಸಿಯನ್ನು ಸಾಗಿಸಲಾಯಿತು. ಸೇನೆ ಸಾಕಷ್ಟು ದೊಡ್ಡದೇ ಆಗಿದ್ದಿತು. ಸೇನೆಯಲ್ಲಿ ೧೦,೦೦೦ ಪದಾತಿದಳ, ೩,೦೦೦ ಅಶ್ವದಳ, ೩೦೦ ಯೂರೋಪಿಯನ್ನ್ ಸೈನಿಕರು ಮತ್ತು ೧೩ ತೋಪುಗಳಿದ್ದವು. ನಾಯರರು ತಮ್ಮ ೩,೦೦೦ ಯೋಧರ ಪಡೆಯ ಸಹಾಯದಿಂದ ಪೊನ್ನಾನಿನ ಬಳಿ ಸುತ್ತುವರೆದು ಶತ್ರುಗಳು ನಿಷ್ಕ್ರೀಯವಾಗುವಂತೆ ಮಾಡಿದ್ದರು. ನಾಯರರು ಕೋಟೆಯ ಸುತ್ತ ಕಂದಕವನ್ನು ಅಗೆದು ಅದರ ಹೊರಗೆ ಮೋಟು ಗೋಡೆಯನ್ನು ಕಟ್ಟಿಕೊಂಡು ಅದರಲ್ಲಿ ತೋಪುಗಳನ್ನು ಹುದುಗಿಸಿಕೊಂಡು ಯುದ್ಧಸನ್ನದ್ಧರಾಗಿದ್ದರು. ಅವರೆಲ್ಲಾ ಗೆರಿಲ್ಲಾ ಮಾದರಿಯ ಯುದ್ಧತಂತ್ರಕ್ಕೆ ಹೊಂದಿಕೊಂಡಿದ್ದರು.[೪೧]

ಮಲಬಾರಿನ ವಿಜಯದ ನಂತರ ಕೊಡಗು, ಬಳ್ಳಂ ಅಥವಾ ಮಂಜಿರಾಬಾದು ಕೋಟೆಯನ್ನು ವಶಮಾಡಿಕೊಂಡು ಬಳ್ಳಂ ಅನ್ನು ಅದರ ಅರಸನಿಗೆ ಮರಳಿಸಿ ಮೈಸೂರಿನ ಆಡಳಿತಕ್ಕೆ ನಿಷ್ಠೆಯಿಂದಿರುವಂತೆ ಆದೇಶಿಸಲಾಯಿತು. 'ಇಂಗ್ಲಿಷರು ಮಲಬಾರ್‌ನ ನಾಯಕರಿಗೆ ಮದ್ದುಗುಂಡುಗಳನ್ನು ಒದಗಿಸುತ್ತಿದ್ದು[೪೨] ತಮ್ಮ ವಸಾಹತುಗಳಲ್ಲಿ ಬಂಡುಕೋರರಿಗೆ ರಕ್ಷಣೆಯನ್ನು ನೀಡುತ್ತಿದ್ದರು. ಗುತ್ತಿ ಮತ್ತು ಬಳ್ಳಾರಿಗಳನ್ನು ಬುದ್ಧಿವಂತಿಕೆಯಿಂದ ವಶಪಡಿಸಿಕೊಂಡು ಅಲ್ಲಿನ ಉಗ್ರಾಣವನ್ನು ಲೂಟಿಮಾಡಿ ಅಪಾರವಾದ ಯುದ್ಧ ಸಾಮಾಗ್ರಿಗಳನ್ನು ಸೈನ್ಯಕ್ಕೆ ಬಳಕೆ ಮಾಡಿಕೊಳ್ಳಲಾಯಿತು. ಮೈಸೂರಿನ ಸೈನ್ಯವು ಹೈದರನ ನೇತೃತ್ವದಲ್ಲಿ ಕ್ರಿ.ಶ.೧೭೭೭ರಲ್ಲಿ ಚಿತ್ರದುರ್ಗದ ಕೊನೆಯ ಪಾಳೆಯಗಾರನಾದ ಮದಕರಿನಾಯಕನ ಆಡಳಿತಾವಧಿಯಲ್ಲಿ ಚಿತ್ರದುರ್ಗದ ಮೇಲೆ ದಾಳಿಮಾಡಿತ್ತಾದರೂ, ಒಂದು ವರ್ಷದವರೆಗೆ ಕೋಟೆಯನ್ನು ವಶಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಮದಕರಿನಾಯಕನು ಚನ್ನಗಿರಿ, ಬಸವಪಟ್ಟಣ, ಸಂತೆಬೆನ್ನೂರು ಮುಂತಾದ ಪ್ರದೇಶಗಳನ್ನು

ಲೂಟಿಮಾಡಿದ ವಿಚಾರವನ್ನು ತಿಳಿದ ಹೈದರನು ಚಿತ್ರದುರ್ಗಕ್ಕೆ ಮುತ್ತಿಗೆಹಾಕಲು ಅವನ ಕಡೆಯ ಜನರಿಂದಲೇ ದುರ್ಗದ ಆಂತರಿಕ ವಿಷಯಗಳನ್ನು ತಿಳಿದುಕೊಂಡು ಯುದ್ಧಸನ್ನದನಾಗಿ ಚಿತ್ರದುರ್ಗವನ್ನು ತಲುಪಿದನು. ಹೈದರನು ಮದಕರಿನಾಯಕನನ್ನು ಸೆರೆಹಿಡಿಯಬೇಕೆಂಬ ಕುತಂತ್ರದಿಂದ ತನ್ನ ಭೇಟಿಗೆ ಬರಬೇಕೆಂದು ಪಾಳೆಯಗಾರನಿಗೆ ಕಾಗದ ಬರೆದನು. ಆದರೆ ಹೈದರನ ಕುತಂತ್ರದ ಅರಿವಿದ್ದ ಮದಕರಿಯು ಕಾಲವನ್ನು ಮುಂದೂಡುತ್ತಿದ್ದನು. ಗುಟ್ಟಾಗಿ ತಾನು ಯುದ್ಧಸನ್ನಾಹವನ್ನು ಮಾಡಿಕೊಳ್ಳುತ್ತಾ, ಪೂನಾದ ಮರಾಠರ ಪರಶುರಾಂಭಾವು ಮತ್ತು ನಾನಾಪಢ್ನವೀಸ್‌ರಿಗೆ ೫೦,೦೦೦ ಕುದುರೆಗಳು ಅದಕ್ಕೆ ತಕ್ಕ ಸೇನೆಯನ್ನು ತೆಗೆದುಕೊಂಡು ತನ್ನ ಸಹಾಯಕ್ಕೆ ಬಂದರೆ ಆ ಸೇನೆಯ ಖರ್ಚನ್ನು ನಾನೇ ಕೊಡುತ್ತೇನೆಂದು ಪತ್ರಗಳನ್ನು ಬರೆದನು.[೪೨]

ಚಿತ್ರದುರ್ಗದ ಗುಟ್ಟನ್ನೆಲ್ಲಾ ಹೈದರಾಲಿಗೆ ಬರೆದು ಕಳುಹಿಸುತ್ತಿದ್ದ ಅಂಚೆಮುತ್ಸದ್ಧಿಯನ್ನು ಮದಕರಿಯು ಬಂಧಿಸಿ ಸೆರೆಯಲ್ಲಿಟ್ಟನು. ದುರ್ಗದಿಂದ ಯಾವುದೇ ಸಮಾಚಾರವು ಶ್ರೀರಂಗಪಟ್ಟಣಕ್ಕೆ ಬಾರದಿದ್ದರಿಂದ ನವಾಬನು ಅನುಮಾನದಿಂದ ನಾಲ್ಕು ಲಕ್ಷ ದಂಡಿನೊಂದಿಗೆ ದುರ್ಗದ ಮೇಲೆ ಯುದ್ಧಹೂಡಲು ಸಿದ್ಧನಾದನು. ಮದಕರಿನಾಯಕನು ಯುದ್ಧಸನ್ನದ್ದನಾಗಿ ತನ್ನ ಮಂತ್ರಿಗಳು ಮತ್ತು ಸೇನೆಯ ಸರದಾರರನ್ನು ಕರೆಸಿ ಯುದ್ಧಸಿದ್ಧತೆಯನ್ನು ಕುರಿತು ಈ ರೀತಿಯಾಗಿ ಹೇಳಿದನು. ನಮ್ಮ ಸೇನೆಯು ಪರಾಕ್ರಮವಾಗಲಿ, ಯುದ್ಧಕ್ಕೆ ಬೇಕಾದ ಸಾಮಾಗ್ರಿಗಳಾಗಲೀ ಅಥವಾ ಯಾವುದೇ ಆಹಾರ ಸಾಮಾಗ್ರಿಗಳಾಗಲೀ ಕಡಿಮೆಯಾಗಿಲ್ಲ, ಚಿತ್ರದುರ್ಗದ ದಂಡು ಸೋತುಹೋಯಿತೆಂದು ನಾವು ಕೇಳಿಲ್ಲ. ನವಾಬನು ಭಾರಿಯಾಗಿ ದಂಡನ್ನು ತಂದಿದ್ದಾನೆ. ಆದರೆ ನಮಗೆ ಗಿರಿದುರ್ಗಗಳ ಆಸರೆಯಿದ್ದು ಅವನಿಗೆ ಮೈದಾನವಿದೆ. ಶ್ರೀಮಂತರ ಫೌಜು ನಮ್ಮ ಸಹಾಯಕ್ಕೆ ಬರುತ್ತಿದ್ದು ನವಾಬನನ್ನು ಹೊಡೆದು ಶ್ರೀರಂಗಪಟ್ಟಣಕ್ಕೆ ಠಾಣ್ಯಹಾಕಲು ಅಂತರವಿಲ್ಲ. ಲಡಾಯಿಯಲ್ಲಿ ಮಡಿದವರ ಹೆಂಡರು ಮಕ್ಕಳಿಗೆ ವೇತನ ಮಾಡಿರುತ್ತೇನೆ. ಕುದುರೆ ಬಿದ್ದವರಿಗೆ ಕುದುರೆ ಕೊಡುತ್ತೇವೆ. ಶತ್ರುಜನರ ತಲೆತಂದವರಿಗೆ ೫೨೦ ದುರ್ಗಿವರಹಗಳನ್ನು ಕೊಡಲಾಗುವುದು, ಗೋಲಿಯಿಂದ ಹೊಡೆದವರಿಗೆ ೫ ರೂಪಾಯಿ, ಕೋಟೆಯ ಮೇಲಿಂದ ಗೋಲಿ ಹೊಡೆದವರಿಗೆ ಒಂದು ರೂಪಾಯಿ ಭಲ್ಲೆ, ಭರ್ಜಿಯಿಂದ ಹೊಡೆದವರಿಗೆ ಕಾಲುಗಗ್ಗರ, ಜೋಮಾಲೆ ಈ ಮೇರೆಗೆ ಇನಾಂ ಕೊಡುತ್ತೇವೆ ಎಂದು ದಂಡಿನವರಿಗೆಲ್ಲಾ ಪ್ರೋತ್ಸಾಹ ಕೊಟ್ಟು ಕದನಕ್ಕೆ ವೀಳೆಯವನ್ನು ಕೊಟ್ಟನು. ಸಾಹುಕಾರರು ಸೆಟ್ಟಿ ಮಹಾನಾಡುಗಳನ್ನು ಕರೆಸಿ ನವಾಬನು ಇಲ್ಲಿಗೆ ಬಂದೇಬರುತ್ತಾನೆ. ಅವನೊಂದಿಗೆ ಭಾರಿ ಯುದ್ಧ ಜರುಗುವುದು. ಆದ್ದರಿಂದ ನಿಮ್ಮ ಹೆಂಗಸರು ಮಕ್ಕಳು ದನಕರುಗಳ ಸಮೇತ ನೀವು ನಾಲ್ಕುದಿವಸ ಹೊರಗೆ ಹೋಗಿ ಇರಬೇಕು[೪೩] ಎಂದು ಅಪ್ಪಣೆಮಾಡಿದನು. ಸಾಮಾನ್ಯವಾಗಿ ಯುದ್ಧ ಸಂದರ್ಭಗಳಲ್ಲಿ ಕೋಟೆ ಮತ್ತು ನಗರಪ್ರದೇಶಗಳನ್ನು ಬಿಟ್ಟು ಹೊರಹೋಗಲು ಮೊದಲೇ ಸೂಚಿಸಲಾಗುತ್ತಿತ್ತೆಂದು ನಮಗೆ ತಿಳಿದುಬರುತ್ತದೆ.. ಆ ಸಾಮಾನ್ಯ ಜನರೊಂದಿಗೆ ವ್ಯಾಪಾರಿಗಳು, ಸಾಹುಕಾರರು, ಹೆಂಗಸರು–ಮಕ್ಕಳು ಯುದ್ಧದಲ್ಲಿ ಪಾಲ್ಗೊಳ್ಳುವಂತಿರಲಿಲ್ಲ. ಆದ್ದರಿಂದ ಮೊದಲೇ

ಅವರನ್ನು ಹೊಸಹೊಸ ಪ್ರದೇಶಗಳಿಗೆ ಕಳಿಸಲಾಗುತ್ತಿದ್ದಿತು. ಅವರೆಲ್ಲ ಹೊರಹೋದ ಮೇಲೆ ಕೋಟೆಬಾಗಿಲುಗಳು, ಗೋಡೆಗಳು, ಬತೇರಿಗಳನ್ನು ಭದ್ರಪಡಿಸಲಾಯಿತು. ಸಾಹುಕಾರರು ಮತ್ತು ವ್ಯಾಪಾರಿಗಳು ಪಾಳೆಗಾರನ ಬಳಿಗೆ ಬಂದು ನಿಮ್ಮನ್ನು ಬಿಟ್ಟು ನಾವು ಎಲ್ಲಿಯೂ ಹೋಗುವುದಿಲ್ಲ. ನಮಗೆ ಏನೂ ಆಗುವುದಿಲ್ಲ. ಹೊರಗಿನ ಜನ ಎಷ್ಟೇತೋಪು ಹೊಡೆದಾಗ್ಯೂ ಗುಡ್ಡದ ಆಸರೆಯಿಂದ ಪ್ರಜೆಗಳಿಗೆ ಏನೂ ಆಗುವುದಿಲ್ಲ. ಈ ಊರುಬಿಟ್ಟು ನಾವು ಎಲ್ಲಿಯೂ ಹೋಗುವುದಿಲ್ಲ. ಅಕ್ಕಿ, ಹುರುಳಿ ಮೊದಲಾದ ಸಾಮಾನು ಹಿಂದೆಸೇರಿಸಿದ್ದು ಏನೂ ಕಡಿಮೆಯಾಗಿಲ್ಲ. ಖಜಾನೆ ಜಖೀರು ಕಡಿಮೆಯಾಗಿ ಸರ್ಕಾರಕ್ಕೆ ಅಗತ್ಯಬಿದ್ದರೆ ಇದ್ದು ಸಾರ್ಥಕವೇನು? ಸ್ವಾಮಿಯವರ ದಂಡಿಗೆ ಒಂದು ವರ್ಷದ ಖರ್ಚನ್ನು ನಾವು ನೀಡುತ್ತೇವೆ. ಇದಕ್ಕೆ ಮಂಡನೆಯಿಲ್ಲ ಎಂದು ವಣಿಕರು ಪ್ರಸ್ತಾಪಿಸಿದರು. ಯುದ್ಧದ ಸಿದ್ಧತೆಗಳೆಲ್ಲವೂ ಅತಿ ಸುಲಭವಾಗಿ ಚಿತ್ರದುರ್ಗದಲ್ಲಿ ಭರದಿಂದ ಸಾಗಿದವು. ತರುವಾಯ ದೊರೆಯು ಕೋಟೆ, ಬತ್ತೇರಿ ಮುಂತಾದವುಗಳೆಲ್ಲವನ್ನೂ ಭದ್ರಪಡಿಸಿ ಪಿರಂಗಿಗಳನ್ನು, ಮದ್ದುಗುಂಡುಗಳನ್ನು ಕೋಟೆಯ ಮೇಲಿರಿಸಿದರು. ಯುದ್ಧವು ಪ್ರಾರಂಭವಾದಾಗ ಶತ್ರುಗಳು ಕೋಟೆಯ ಬಳಿಯಿಂದ ದೂರಸರಿದರು.[೬೧] ಹೈದರನ ಕಾಲದಲ್ಲಿ ಪಿಕ್ಕೊಸ್ತೋ ಎಂಬ ಒಬ್ಬ ಪೋರ್ಚಗೀಸ್ ಸಾಹಸಿಗನು ತನ್ನ ಕೆಲ ಪೋರ್ಚಗೀಸ್ ಸಹಚರರೊಂದಿಗೆ ಮೈಸೂರಿನ ಸೇನೆಯಲ್ಲಿ ಸೇವೆಸಲ್ಲಿಸುತ್ತಿದ್ದ. ಪೋರ್ಚಗೀಸರ ಈ ಪಡೆಯು ಇಂಗ್ಲೀಷರ ಮೇಲೆ ಚನ್ನಪಟ್ಟಣದಲ್ಲಿನ ಸೆಂಟ್‌ಜಾರ್ಜ್ ಪೋರ್ಟ್‌ನಲ್ಲಿ ಸೋತು ತಮ್ಮ ಸೈನ್ಯದಿಂದ ದೂರಾಗಿದ್ದರು. ಇವರ ಈ ಅಳಿದುಳಿದ ಪೋರ್ಚಗೀಸ್ ಸೈನಿಕರನ್ನು ಒಂದುಗೂಡಿಸಿ ದೇಶೀಯ ಸೈನ್ಯದಲ್ಲಿ ಸೇವೆಗೆ ಸೇರಿ ತಮ್ಮ ಜೀವನ ನಿರ್ವಹಣೆ ಮಾಡಿಕೊಳ್ಳುವ ಸಿಪಾಯಿಗಳಾಗಿದ್ದರು. ಇವರು ತಮ್ಮ ಸೈನ್ಯದಿಂದ ದೂರಾದ ನಂತರ ಇವರನ್ನು ಒಂದುಗೂಡಿಸುವುದೇ ಅತಿಕಷ್ಟದ ಕೆಲಸವಾಗಿತ್ತು. ಅಲ್ಲದೆ ಅವರು ತಮ್ಮ ದಿನನಿತ್ಯದ ಊಟ ಮತ್ತು ವಸತಿಗಾಗಿ ಪರದಾಡುತ್ತಿದ್ದುದರಿಂದ ಅವರನ್ನು ಮೈಸೂರಿನ ಸೈನ್ಯದಲ್ಲಿ ಸೇರಿಸಿಕೊಳ್ಳಲು ನೀಡಿದಂತಹ ಒಂದು ಅವಕಾಶವನ್ನು ಒದಗಿಸಿತು.

ಹೈದರ್ ಅಲಿಯು ಚಿತ್ರದುರ್ಗದ ಮದಕರಿನಾಯಕನ ಸಲಹೆಯಂತೆ ಬಿದನೂರಿನಿಂದ ಮುಂದೆಸಾಗಿ ಕರಾವಳಿಯ ಭಾಗಕ್ಕೆ ಮೈಸೂರು ಸಾಮ್ರಾಜ್ಯವನ್ನು ವಿಸ್ತರಿಸುವ ಪ್ರಯತ್ನವನ್ನು ಮಾಡಿದನು. ಇದರ ಪರಿಣಾಮವಾಗಿ ಕ್ರಿ.ಶ.೧೭೬೨ರಲ್ಲಿ ಅವನು ಬಿದನೂರಿಗೆ ೧೦,೦೦೦ ಕುದುರೆಗಳು ಮತ್ತು ೨೦,೦೦೦ ಸೈನಿಕರ ಒಂದು ದಂಡಯಾತ್ರೆಯನ್ನು ಕೈಗೊಂಡನು. ತನ್ನಲ್ಲಿನ ಬುದ್ಧಿಚಾತುರ್ಯದಿಂದ ರಾಣಿಯ ಕಡೆಯ ಕೆಲವು ಸೇವಕರಿಗೆ ರಾಜ್ಯದ ಆಸೆಯನ್ನು ತೋರಿಸಿ ಬಿದನೂರನ್ನೇ ಮುತ್ತಿ ವಶಮಾಡಿಕೊಂಡನು.'[೬೨] ರಾಣಿಯ ಹೈದರನೊಡನೆ ಸಂಧಿಕಾರ್ಯವನ್ನು ಪ್ರಸ್ತಾಪಿಸಿದರೂ ಸಹ ಹೈದರ್ ಅಲಿಯು ಅದಕ್ಕೆ ಒಪ್ಪದೆ ಅವಳೊಂದಿಗೆ ನಾಟಕೀಯವಾಗಿ ನಡೆದುಕೊಂಡು ಆಕೆಯ ಬಂಧನಕ್ಕೆ ಪ್ರಯತ್ನಿಸಿದನಾದರೂ ಅವಳು ಕವಲೆದುರ್ಗಕ್ಕೆ ಪಲಾಯನ ಮಾಡಿ ಅಲ್ಲಿಂದ ಬಲ್ಲಾಳರಾಯನದುರ್ಗಕ್ಕೆ ಓಡಿಹೋದಳು. ಆದರೆ ಬಲ್ಲಾಳರಾಯನ ದುರ್ಗದಲ್ಲಿ ಆಕೆಯನ್ನು ಸೆರೆಹಿಡಿಯುವಲ್ಲಿ ಯಶಸ್ವಿಯಾದನು.

ಹೈದರನು ಬಿದನೂರು ವಿಜಯದ ನಂತರ ಮೈಸೂರು ರಾಜ್ಯದ ಪಶ್ಚಿಮ ಕರಾವಳಿಯಲ್ಲಿ ಒಂದು ಹಡಗುಕಟ್ಟೆಯನ್ನು ನಿರ್ಮಾಣಮಾಡಿ ನೌಕೆಗಳಿಗೆ ಅವಶ್ಯಕವಾಗಿದ್ದ ಶಸ್ತ್ರಾಗಾರವೊಂದನ್ನು ನಿರ್ಮಿಸಲು ಬಯಸಿದ. ಅಲ್ಲಿ ಆಧುನಿಕ ಯುದ್ಧನೌಕೆಗಳನ್ನು ನಿರ್ಮಾಣ ಮಾಡಲು ಯೋಜನೆಯನ್ನು ರೂಪಿಸಿ ಅಬ್ದುಲ್ ಲತಿಫ್ ಅಲಿಬೇಗ್ ಎಂಬ ಸೇನಾಧಿಕಾರಿಯನ್ನು ನೇಮಿಸಿಕೊಂಡನು. ಈತ ಯೋಜನೆಯ ಮೇಲ್ವಿಚಾರಕನಾಗಿ ನೇಮಕವಾದದ್ದು ಮಹತ್ವದ ನಿರ್ಧಾರವಾಗಿತ್ತು. ಏಕೆಂದರೆ ಈ ಕಾಲದವರೆಗೆ ಯಾವ ಭಾರತೀಯ ಅರಸನೂ ಕೂಡ ಈ ಯೋಜನೆಯನ್ನು ಹಾಕಿಕೊಂಡಿರಲಿಲ್ಲ. ಈ ಯೋಜನೆಯು ಎಷ್ಟು ಸುಸಜ್ಜಿತವಾಗಿತ್ತೆಂದರೆ ಯೂರೋಪಿನ ದೇಶಗಳ ಮೇಲ್ಮಟ್ಟದ ಯಾವುದೇ ನೌಕಾದಳದ ಸವಾಲನ್ನೂ ಅದು ಎದುರಿಸಬಲ್ಲುದಾಗಿತ್ತು. ಕ್ರಿ.ಶ.೧೭೬೮ರ ಆರಂಭದಲ್ಲೇ ಮುಂಬಯಿ ಸರಕಾರದವರು ನೌಕಾದಳವನ್ನು ಪ್ರಾರಂಭಿಸಲು ೪೦೦ ಮಂದಿ ಐರೋಪು ಸೈನಿಕರೂ, ಅಸಂಖ್ಯಾತ ಭಾರತೀಯ ಸಿಪಾಯಿಗಳಿದ್ದರು. ಪಶ್ಚಿಮ ಕರಾವಳಿಯಲ್ಲಿಯ ರಕ್ಷಣೆಯೇ ಈ ನೌಕಾದಳದ ಕರ್ತವ್ಯವಾಗಿತ್ತು.

ಜೋಸ್ ಪಿಡ್ರೋಡ–ಕಮರಾ ಎಂಬಾತನು ಕಾಸ್ಟ್ರೋ ಎಂಬುವನಿಗೆ ಬರೆದ ಪತ್ರವೊಂದು ಅತ್ಯಂತ ಹೆಚ್ಚು ಕುತೂಹಲಕಾರಿಯಾಗಿದ್ದು ಅದರ ಸಾರಾಂಶವು ಈ ರೀತಿಯಾಗಿದೆ. 'ಹೈದರಾಲಿಯು ಭೂಬಲದಲ್ಲಿ ಪ್ರಚಂಡನಾಗಿರುವಂತೆ ಜಲಬಲದಲ್ಲಿಯೂ ಅಷ್ಟೇ ಪ್ರಚಂಡನಾಗುವ ಆಸೆಯನ್ನು ಹೊಂದಿದ್ದು, ಕರಾವಳಿಯಲ್ಲೆಲ್ಲ ದೊಡ್ಡದೊಡ್ಡ ಜಹಜುಗಳನ್ನು ನಿರ್ಮಿಸಲು ಯೋಜನೆಯನ್ನು ರೂಪಿಸಿದ್ದಾನೆ. ಈಗಾಗಲೇ ಅವನು ತ್ರಿಪಟ ಸ್ಥಂಭಗಳನ್ನು ಹೊಂದಿದ ಎಂಟು ಹಡಗುಗಳನ್ನು ಸಮುದ್ರದ ಮೇಲೆ ಬಿಟ್ಟಿದ್ದು ಯುದ್ಧಸನ್ನದ್ದವಾಗಿ ಈ ಹಡಗುಗಳು ಕಾರ್ಯಾಚರಣೆ ಕೈಗೊಂಡಿವೆ. ಈ ಹಡಗುಗಳಲ್ಲಿ ಒಂದೊಂದರಲ್ಲಿಯೂ ೨೮ ರಿಂದ ೪೦ ಪಿರಂಗಿಗಳನ್ನು ಕಟ್ಟಬಹುದು. ಕಡಿಮೆ ಭಾರದ ಹಾಗೂ ಬೇಗಬೇಗ ಕಾರ್ಯಮುಗಿಸಲು ಅನುಕೂಲಕರವಾದ ಸಣ್ಣಸಣ್ಣ ಹಡಗುಗಳೂ ಇವೆ. ಸ್ಥಳಾನುಕೂಲಕ್ಕೆ ಮಾತ್ರವಲ್ಲದೆ ನೌಕಾದಳದ ಸಂರಕ್ಷಣೆಗಾಗಿಯೇ ಬಲಯುತವಾದ ನೌಕಾನೆಲೆಯ ನಿರ್ಮಾಣವಾಗುತ್ತಿದೆ. ಭಟ್ಕಳ ಕೊಲ್ಲಿಯ ಪಕ್ಕದಲ್ಲಿ ನೀರಿನ ಮಟ್ಟದ ಮೇಲೆ ಭಾರೀ ದಸಿಗಳನ್ನು, ಕೋವಿಗಳಿಗೆ ಕಂಟಗಳನ್ನಿಟ್ಟು, ಪಕ್ಕ ಪಕ್ಕದಲ್ಲಿ ಆಳವಾಗಿ ಹೂತು ನಿರ್ಮಿಸಿದ ಕಾಫಿನ ಗೋಡೆಯ ನಿರ್ಮಾಣವನ್ನು ಪ್ರಾರಂಭಿಸಿದ್ದಾನೆ. ಆಂಗೆವ ದ್ವೀಪದ ಬಳಿ ದಕ್ಷಿಣಕ್ಕೆ ಈ ಕಾಫಿನ ಗೋಡೆಯಿದೆ. ಕೃತಕ ಬಂದರನ್ನು ನಿರ್ಮಿಸಿ ಸಾಗರದ ಉಬ್ಬರದ ಸಮಯದಲ್ಲಿ ದೊಡ್ಡದೊಡ್ಡ ಹಡಗುಗಳನ್ನು ಕಾಪಾಡಬೇಕು. ಬಂದರಿನ ಸಂರಕ್ಷಣೆಗಾಗಿ ದುರ್ಗದ ನಿರ್ಮಾಣ ಕಾರ್ಯವೂ ಸಹ ಇದರಲ್ಲಿ ಸೇರಿದೆ. ದ್ವೀಪದ ರೂಪುರೇಷಗಳಿಗೆ ಅನುಸಾರವಾಗಿ ನಕ್ಷೆಯು ಸಿದ್ಧವಾಗುತ್ತಿದೆ. ಈ ದುರ್ಗದ ಪ್ರಕಾರವು ವಿಸ್ತಾರವಾಗಿದ್ದು, ಒಂದು ಪಟ್ಟಣವೇ ಅದರಲ್ಲಿ ಅಡಗುವಂತಿದೆ. ಅದರಲ್ಲಿ ನಾನಾ ಜನಾಂಗಗಳ ನಿರೀಕ್ಷಿತ ವರ್ತಕರ ವಾಸಕ್ಕಾಗಿ ವ್ಯಾಪಾರಿ. ವಸತಿ ಮತ್ತು ಭವನಗಳು ನಿರ್ಮಾಣವಾಗುತ್ತಿವೆ. ಅವರನ್ನು ಆಕರ್ಷಿಸಲು ಸಮೀಪದಲ್ಲಿ ಅನುಕೂಲಕರವಾದ ನಿವೇಶನಗಳನ್ನು ದಾನವಾಗಿ ಕೊಡಲಾಗುತ್ತದೆ. ಅವರ ಬಂಡವಾಳಕ್ಕೆಂದು

ಸಾಲಸೌಲಭ್ಯಗಳನ್ನು ನೀಡಲಾಗುವುದು. ಅವರು ಅಲ್ಲಿ ಮಳಿಗೆಗಳನ್ನು ನಿರ್ಮಿಸಿಕೊಂಡು ತಮ್ಮ ವಸ್ತ್ರೋಪಕರಣಗಳನ್ನು ಭದ್ರಪಡಿಸಿಕೊಳ್ಳಬಹುದು. ದೊಡ್ಡ ನೌಕಾದಳಕ್ಕೆ ಬೇಕಾದ ಮದ್ದುಗುಂಡುಗಳ ಸಂಗ್ರಹಾಲಯವಿರುತ್ತದೆ. ಮದ್ದುಗುಂಡುಗಳನ್ನು ತಯಾರಿಸಲು ಕಾರ್ಖಾನೆಗಳ ನಿರ್ಮಾಣವಾಗುತ್ತಿದೆ. ಇವೆಲ್ಲವುಗಳನ್ನು ಆಲೋಚನೆ ಮಾಡಿ ಯೋಜನೆಗಳನ್ನು ರೂಪಿಸಲಾಗಿದೆ. ಮೂರು ವರ್ಷಗಳಲ್ಲಿ ಈ ಯೋಜನೆಯನ್ನು ಮುಗಿಸುವುದಾಗಿತ್ತು. ಡಚ್‌ನ ಅಭಿಯಂತರರು ಮತ್ತು ಬುದ್ಧಿವಂತರಾದ ಕೆಲಸಗಾರರು ಇಲ್ಲಿರಲಿಲ್ಲ.[೪೮]

ಕ್ರಿ.ಶ.೧೭೬೬ರಲ್ಲಿ ಹೈದರ್ ಅಲಿಯ ಮತ್ತು ಆಂಗ್ಲರ ನಡುವೆ ನಡೆದ ಮೊದಲ ಆಂಗ್ಲೋ-ಮೈಸೂರು ಯುದ್ಧದಲ್ಲಿ ಇಂಗ್ಲೀಷರು ಸುಮಾರು ೬೦೦ ಯೂರೋಪಿಯನ್ ಕಾಲಾಳುಗಳು, ೧೦೦ ಫಿರಂಗಿಗಳು, ೩೦ ಅಶ್ವದಳ ಮತ್ತು ೫,೦೦೦ ಸಿಪಾಯಿಗಳನ್ನೂ ಪ್ರತ್ಯೇಕವಾಗಿ ೧೪ ಫಿರಂಗಿಗಳನ್ನು ಒಳಗೊಂಡಿದ್ದ ಸೈನ್ಯಕ್ಕೆ ಕರ್ನಲ್ ಜೋಸೆಫ್ ಸ್ಮಿತ್‌ನು ದಳಪತಿಯಾಗಿದ್ದನು. ಇದು ಅವರು ಅಂದಿನ ಪರಿಸ್ಥಿತಿಯಲ್ಲಿ ಕೂಡಿಸಬಹುದಾದಂತಹ ದೊಡ್ಡ ಮೊತ್ತದ ಸೈನ್ಯವಾಗಿತ್ತು. ನಿಜಾಮನು ೧೭,೦೦೦ ಯೋಧರಿದ್ದ ತನ್ನ ಸೈನ್ಯದೊಂದಿಗೆ ೧೦,೦೦೦ ಮರಾಠ ಸೈನ್ಯಗಳೊಂದಿಗೆ ಹೊರಟಾಗಿತ್ತು. ಬಹುಬೇಗ ಅವನ ಸೇನೆ ೧,೫೦,೦೦೦ ಕುದುರೆಗಳು ೫೦,೦೦೦ ಪದಾತಿಗಳುಳ್ಳ ಅಗಾಧವಾದ ಸೇನೆಯಾಗಿ ಬೆಳೆಯಿತು. ಏಕೆಂದರೆ ಬಸಲತ್ ಜಂಗ್ ಕಡಪಾ, ಕರ್ನೂಲು ನವಾಬರು ಹಾಗೂ ಪಾಳೆಯಗಾರರು ತಮ್ಮ ಸೇನೆಗಳೊಂದಿಗೆ ಬಂದು ಕೂಡಿಕೊಂಡರು. ಯೋಜನೆ ಹಾಕಿಕೊಂಡಂತೆ ಮರಾಠರೂ ಸೇರಿದ್ದರೆ ಸೈನ್ಯವು ೫ ಲಕ್ಷ ಬೃಹತ್ ಸೈನ್ಯವಾಗುತ್ತಿತ್ತು. ಈ ಸೈನ್ಯಸಾಗರಕ್ಕೆ ಆಹಾರ ಮೊದಲಾದವನ್ನು ಒದಗಿಸುವ ಸಮಸ್ಯೆಯೊಂದೇ ಪ್ರಮುಖವಾಗಿತ್ತು. ಕ್ರಿ.ಶ.೧೭೬೭ರ ಜನವರಿಯಲ್ಲಿ ಯಾಧವರಾಯನು ಕೃಷ್ಣಾನದಿಯನ್ನು ದಾಟಿ ಮಿತ್ರಪಕ್ಷದ ಬಸಲತ್‌ಜಂಗನ ರಾಜಧಾನಿ ಆದವಾನಿಯನ್ನು ಲೂಟಿಮಾಡಿದನು.

ಹೈದರನು ಹೈದರಾಬಾದ್ ನಿಜಾಮನಾದ ಮಹಪಜ್ ಖಾನ್‌ಗೆ ೫೦,೦೦೦ ಪಗೋಡಗಳು ಮತ್ತು ಕೆಲವು ಆನೆಗಳನ್ನು ಉಡುಗೊರೆಯಾಗಿ ನೀಡಿ ಯುಕ್ತಿಯಿಂದ ನಿಜಾಮನ ಬಳಿ ತನ್ನ ಬೆಂಬಲಿಗರ ಒಂದು ವಲಯವನ್ನು ನಿರ್ಮಿಸಿ ಅದರ ಸಹಾಯದಿಂದ ಬ್ರಿಟಿಷರ ಮೈತ್ರಿಕೂಟವನ್ನು ಹೊಡೆದು ಹಾಕುವ ಉದ್ದೇಶವನ್ನು ಹೊಂದಿದ್ದನು. ಇದೇ ಸಮಯಕ್ಕೆ ಮರಾಠರ ಮಾಧವರಾಯನೊಂದಿಗೆ ವ್ಯವಹರಿಸಿ ೩೦ ಲಕ್ಷ ರೂಪಾಯಿಗಳಿಗೆ ಸಂಧಿ ಮಾಡಿಕೊಳ್ಳಲು ಪ್ರಯತ್ನಿಸಿದನು. ಈ ಮಧ್ಯೆ ಮಿತ್ರ ಕೂಟದ ಸದಸ್ಯರ ನಡುವಿನ ಭಿನ್ನತೆಯನ್ನು ತರಲು ಹೈದರನಿಗೆ ಈ ಅವಕಾಶವು ಮಹತ್ವ ಪೂರ್ಣವಾಗಿ ಒದಗಿಬಂದಿತ್ತು.[೪೯] ಇಂಗ್ಲಿಷ್ ಸೈನ್ಯಕ್ಕೆ ಆಹಾರದ ಅಭಾವ, ರೋಗರುಜಿನಗಳು ತಲೆದೋರಿ ಸಿಪಾಯಿಗಳು ಸೈನ್ಯವನ್ನು ಬಹು ಸಂಖ್ಯೆಯಲ್ಲಿ ಬಿಟ್ಟು ಹೋಗುವುದು ಅತ್ಯಂತ ದಯನೀಯವಾದ ಪರಿಸ್ಥಿತಿ ಸೃಷ್ಟಿಯಾಯಿತು.[೫೦] 'ಹೈದರನಿಗೆ ನಿಜಾಮನ ಸೇನಾಬಲದ ಹೆದರಿಕೆಯೇನಿರಲಿಲ್ಲ. ಏಕೆಂದರೆ ನಿಜಾಮನ ಸಲಹಾಗಾರರಲ್ಲಿ ಹಲವಾರು ಜನರು ಹೈದರನಿಗೆ ಬೆಂಬಲಿಗರಾಗಿದ್ದರು. ಅಷ್ಟೇ ಅಲ್ಲದೆ ನಿಜಾಮನ ಸೇನೆಯು ಶಸ್ತ್ರಾಸ್ತ್ರಗಳನ್ನು

ಒಳಗೊಂಡಂತೆ ಶಿಸ್ತಿನಲ್ಲಿ ಮತ್ತು ವೇತನಗಳಲ್ಲಿ ದೋಷದಿಂದ ಕೂಡಿದ್ದಿತು. ಹೈದರನಿಗೆ ಮದ್ರಾಸ್ ಸೈನ್ಯದ ಭಯವಿದ್ದರೂ ಕರ್ನಲ್‌ಸ್ಮಿತ್‌ನ ಚಲನವಲನಗಳನ್ನು ತಿಳಿದುಕೊಳ್ಳಲು ಅವನು ಸಾಕಷ್ಟು ವ್ಯವಸ್ಥೆಯನ್ನು ಮಾಡಿದ್ದನು.[೫೧] ಮರಾಠರ ವಿಜಯಗಳಿಂದ ಉತ್ತೇಜಿತವಾದ ನಿಜಾಮನು ಮೈಸೂರಿನತ್ತ ತಿರುಗಲು ಅವಸರಪಟ್ಟನು. ಆದರೆ ಸೈನ್ಯದಲ್ಲಿ ಆಹಾರ ಪದಾರ್ಥಗಳ ಅಭಾವ, ಹಣದ ಅವಶ್ಯಕತೆಗಳು ಮತ್ತು ಮೈಸೂರಿನ ಸೈನ್ಯದಲ್ಲಿನ ಅಶ್ವದಳವು ನಡೆಸಿದ ನಿರಂತರ ದಾಳಿಗಳಿಂದ ನಿಜಾಮನ ಸೈನ್ಯವು ಕಷ್ಟಕ್ಕೆ ಸಿಲುಕಿತು. ಬಸಲತ್‌ಜಂಗ್ ಮತ್ತು ಮಹಪಜ್ ಖಾನನೂ ನಿಜಾಮನ ಮೇಲೆ ಒತ್ತಡ ಹಾಕಿದರು.

ಕ್ರಿ.ಶ.೧೭೬೭ರಲ್ಲಿ ಹೈದರ್ ಮತ್ತು ನಿಜಾಮ ಇಬ್ಬರೂ ಸೇರಿ ಕರ್ನಾಟಿಕ್ ಪ್ರದೇಶಕ್ಕೆ ಮುತ್ತಿಗೆ ಹಾಕಿದರು. ಈ ಒಕ್ಕೂಟ ಸೈನ್ಯದಲ್ಲಿ ೬೫,೦೦೦ ಪದಾತಿದಳ, ೩೧೦ ಯೂರೋಪಿಯನ್ ಸೈನಿಕರು, ೪೯ ಫಿರಂಗಿಗಳಿದ್ದವು. ನಿಜಾಮನ ಸೈನ್ಯದಲ್ಲಿ ೨೫,೦೦೦ ಅಶ್ವದಳ, ೧೦,೦೦೦ ಪದಾತಿದಳ ೬೦ ಫಿರಂಗಿಗಳನ್ನು ಹೊಂದಿದ್ದವು. ಸ್ಮಿತ್‌ನ ಸೇನೆಯಲ್ಲಿ ೬೦೦ ಯೂರೋರಿಯನ್ ಸಿಪಾಯಿಗಳ ಆರು ಬೆಟಾಲಿಯನ್‌ಗಳಿದ್ದವು. ಕರ್ನಾಟಿಕ್ ಪ್ರದೇಶದ ಲೂಟಿಯೊಂದಿಗೆ ಮೊದಲನೆಯ ಆಂಗ್ಲೋ-ಮೈಸೂರು ಯುದ್ಧವು ಪ್ರಾರಂಭವಾಯಿತು.[೫೨]

ಹೈದರನು ಕಾವೇರಿಪಟ್ಟಣವನ್ನು ವಶಮಾಡಿಕೊಂಡಾಗ ಚಂಗಮ ಎಂಬ ಹಳ್ಳಿಯಲ್ಲಿ ಬೇರೊಂದು ದಿಕ್ಕಿನಿಂದ ಆಂಗ್ಲರ ಮೇಲೆ ದಾಳಿಮಾಡಲು ಉಳಿಸಿಕೊಂಡಿದ್ದ ಸೈನ್ಯವು ರಾಜಾ ರಾಮಚಂದ್ರರಾಯನ ನೇತೃತ್ವದಲ್ಲಿ ನಿಜಾಮನು ೫,೦೦೦ ಅಶ್ವದಳವನ್ನು ಸ್ವಲ್ಪ ಪದಾತಿದಳವನ್ನು ಆಕ್ರಮಿಸಿಕೊಳ್ಳಲು ಕಳುಹಿಸಿದನು. ಬ್ರಿಟಿಷರು ಆ ದಾರಿಯಲ್ಲಿಯೇ ಬರಬೇಕಾಗಿತ್ತು. ಅಲ್ಲದೆ ಚಂಗಮ ಹಳ್ಳಿಯು ಒಂದು ಆಯಕಟ್ಟಿನ ಪ್ರದೇಶವಾಗಿದ್ದು ಸೈನ್ಯ ಮತ್ತು ಸ್ವಾಭಾವಿಕ ಸಂಪನ್ಮೂಲಗಳ ಶೇಖರಣೆಗಾಗಿ ಅನುಕೂಲಕರವಾಗಿದ್ದ ಪ್ರದೇಶವಾಗಿತ್ತು. ಈ ಪ್ರದೇಶವನ್ನು ಸ್ಮಿತ್‌ನು ವಶಮಾಡಿಕೊಳ್ಳಲು ನಿಜಾಮನ ಅಸ್ತವ್ಯಸ್ಥವಾದ ಸೈನ್ಯವೇ ದಾರಿಮಾಡಿಕೊಟ್ಟಿತು. ಈ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವ ವೇಳೆಗೆ ಇಂಗ್ಲಿಷರು ಈ ಅವಕಾಶದ ಸಂಪೂರ್ಣ ಉಪಯೋಗವನ್ನು ಪಡೆದುಕೊಂಡಿದ್ದರು.

ಚಂಗಮ ಯುದ್ಧದಲ್ಲಿ ಹೈದರನು ಇಂಗ್ಲಿಷರನ್ನು ಕಾಡುತ್ತಲೇ ಹೋದನು. ಅಂತೆಯೇ ಅಲ್ಲಿ ಅತಿಹೆಚ್ಚಿನ ಮೊತ್ತದ ಸಂಪತ್ತನ್ನು ವಶಮಾಡಿಕೊಂಡನು. ಆದರೆ ಆಂಗ್ಲರು ಆಹಾರ ಪದಾರ್ಥಗಳಿಲ್ಲದೆ ಬಹಳ ಕಷ್ಟಪಡಬೇಕಾಯಿತು. ಲೆಫ್ಟಿನೆಂಟ್ ಹಿಚ್‌ಕಾಕ್ ಎಂಬಾತ ಆಂಗ್ಲ ಸೈನ್ಯವನ್ನು ತೊರೆದು ಬಂದು ಹೈದರ್ ಅಲಿಯ ಸೈನ್ಯವನ್ನು ಸೇರಿಕೊಂಡನು.[೫೩] ಇದೊಂದು ಉತ್ತಮ ನಿದರ್ಶನವಾಗಿ ನಮಗೆ ತೋರಿದರೂ ತಮ್ಮ ಜೀವನದ ಅತ್ಯಂತ ಕಷ್ಟಕರವಾದ ಪರಿಸ್ಥಿತಿಯಲ್ಲಿ ಜೀವವನ್ನು ಉಳಿಸಿಕೊಳ್ಳಲು ಹೋರಾಡಬೇಕಾಯಿತು. ಆದರೂ ಹೈದರನು ಮೈಸೂರಿನ ಸೈನ್ಯಕ್ಕಾಗಿಯೇ ತನ್ನ ಜೀವನವನ್ನು ಮೀಸಲಾಗಿಟ್ಟಿದ್ದನ್ನು ನಾವು ಮರೆಯುವಂತಿಲ್ಲ. ಏಕೆಂದರೆ ಹೈದರನು ತನ್ನ ಜೀವನದ ಬಹುಭಾಗವನ್ನು ಯುದ್ಧರಂಗದಲ್ಲಿಯೇ ಕಳೆಯಬೇಕಾಯಿತು.

ಮದ್ರಾಸ್ ಕೋಟೆಯಲ್ಲಿದ್ದ ಆಂಗ್ಲರು ಬೇರೆಡೆಗೆ ಫಲಾಯನ ಮಾಡುವಂತೆ ಹೈದರನ ಅಶ್ವದಳವು ದಾಳಿಮಾಡಿತು. ಇದರಿಂದ ಆಂಗ್ಲರು ಅತ್ಯಂತ ಹೀನಾಯವಾದ ಪರಿಸ್ಥಿತಿಗೆ ತಳ್ಳಲ್ಪಟ್ಟರು. ಹೈದರ್ ಅಲಿಯ ಅಶ್ವಬಲವು ಬಹಳ ಸಮರ್ಥವಾಗಿದ್ದು, ಆಂಗ್ಲ ಸೈನ್ಯದಿಂದ ಒಂದು ಪತ್ರವೂ ಮದ್ರಾಸಿಗೆ ಕ್ಷೇಮವಾಗಿ ತಲುಪಿಸಲು ಸಾಧ್ಯವಿರಲಿಲ್ಲ. ಹಳ್ಳಿಗಳು ಬೆಂಕಿಗೆ ಆಹುತಿಯಾದರೂ ಸಹ ಬ್ರಿಟಿಷರು ಏನೂ ಮಾಡಲಾಗದಂತಹ ಅಸಹಾಯಕ ಸ್ಥಿತಿಗೆ ತಲುಪಿದ್ದರು. ಸೆಂಟ್ ಲೂಬಿನ್ ಎಂಬ ಪ್ರೆಂಚ್ ಸಾಹಸಿಯು ಹೈದರನ ಶಿಬಿರವನ್ನು ಬಿಟ್ಟು ಮದ್ರಾಸ್ ಸೈನ್ಯವನ್ನು ಸೇರಿಕೊಂಡನು. ಈತನು ಮದರಾಸಿನ ನೀತಿಯೋಜಕರ ಮೇಲೆ ಅಪಾರವಾದ ಪ್ರಭಾವವನ್ನು ಬೀರಿದನು. ಮೈಸೂರನ್ನು ಗೆಲ್ಲುವುದು ಅತಿ ಸುಲಭ, ಹೈದರನ ಸೈನ್ಯವನ್ನು ಸುಲಭವಾಗಿ ಸೋಲಿಸಬಹುದೆಂದು ಅವನು ಹೇಳಿದ ಮಾತನ್ನು ಎಲ್ಲರೂ ನಂಬಿದರು. ಬಿದನೂರಿನಲ್ಲಿ ಹೈದರನು ಅಪಾರವಾದ ಸಂಪತ್ತನ್ನು ಶೇಖರಿಸಿದ್ದಾನೆ. "ರಾಶಿ ರಾಶಿಯಾದ ವಜ್ರಗಳು, ಹವಳಗಳು ನಗದು ಹಣವನ್ನು ಸುಲಭವಾಗಿ ಕಂಪನಿಯೂ ವ್ಯಕ್ತಿಗಳೂ ಸಂಪತ್ತನ್ನು ಹಂಚಿಕೊಳ್ಳಬಹುದು ಎಂದು ಹೇಳಿ ಎಲ್ಲರನ್ನೂ ನಂಬಿಸಿದ್ದನು. ಆದರೆ ಈ ಪಕ್ಷಾಂತರಿಯನ್ನು ವಿಶ್ವಾಸಕ್ಕೆ ತೆಗೆದುಕೊಂಡಿದ್ದಕ್ಕೆ ಕಂಪೆನಿಯು ಸ್ಮಿತ್‌ನನ್ನು ಖಂಡಿಸಿತು".[೨೪]

ಕ್ರಿ.ಶ.೧೭೬೭ರಲ್ಲಿ ಹೈದರ್ ಮತ್ತು ನಿಜಾಮರ ಮೇಲೆ ಕರ್ನಲ್ ಸ್ಮಿತ್ ಮತ್ತು ವುಡ್ ಜಂಟಿಯಾಗಿ ಹೋರಾಟ ನಡೆಸಿದರು. ವುಡ್‌ನ ಸೈನ್ಯದಲ್ಲಿ ೧,೩೦೦ ಯೂರೋಪಿಯನ್ನರು, ೮,೦೦೦ ಸಿಪಾಯಿಗಳು ಹಾಗೂ ೩೦ ಫಿರಂಗಿಗಳನ್ನು ಹೊಂದಿದ್ದಿತು. ಹೈದರನಿಗೆ ನಿಜಾಮನ ಸೇನೆಯು ಸರಿಯಾಗಿ ಸಹಕರಿಸಿದ ಕಾರಣದಿಂದ ಸಂಪೂರ್ಣವಾದ ಜವಾಬ್ದಾರಿಯೆಲ್ಲವೂ ಹೈದರನ ಮೇಲಿತ್ತು. ಸೈನ್ಯದ ಒಂದು ಭಾಗವನ್ನು ಬಳಸಿಕೊಂಡು ಟಿಪ್ಪುವು ತನ್ನ ಸುತ್ತಮುತ್ತಲಿನ ಪ್ರದೇಶಗಳನ್ನೆಲ್ಲ ಕೊಳ್ಳೆಹೊಡೆಯುವ ಪ್ರಯತ್ನವನ್ನು ಮಾಡಿದನು. ಮದ್ರಾಸ್ ಪ್ರದೇಶವು ಪೂರ್ವ ಕರಾವಳಿಯ ಪ್ರಾಂತ್ಯವಾದ್ದರಿಂದ ಒಂದೇ ಸಮನೆ ಬೀಳುತ್ತಿದ್ದ ಮಳೆ, ಆಹಾರ ಸಾಮಾಗ್ರಿಗಳ ಕೊರತೆ ಮತ್ತು ಆಯಾಸಗಳಿಂದ ಮದ್ರಾಸು ಸೈನ್ಯವು ಅಲ್ಲಲ್ಲಿ ಬೀಡುಬಿಡುವಂತೆ ಮಾಡಿತ್ತು. ಈ ಅವಕಾಶವನ್ನು ಬಳಸಿಕೊಂಡು ಹೈದರನು ವಾಣಿಯಂಬಾಡಿ, ತಿರುಪತ್ತೂರು, ಆಂಬೂರುಗಳನ್ನು ವಶಪಡಿಸಿಕೊಂಡನು. ಈ ಮಧ್ಯೆ ಮೈಸೂರನ್ನು ಗೆಲ್ಲಲು ಮದ್ರಾಸ್ ಸರ್ಕಾರವು ಮರಾಠರ ಮಾಧವರಾಯನಿಂದ ೧೦,೦೦೦ ಅಶ್ವಬಲದ ನೆರವನ್ನು ಕೇಳಿತು. ಆದರೆ ಮುಂಬಯಿ ಸರ್ಕಾರವು ಈ ಒಪ್ಪಂದದ ನೆರವನ್ನು ತಿರಸ್ಕರಿಸಿತು. ಆದರೆ ಮಾಧವರಾಯನು ಇಂಗ್ಲಿಷರೊಂದಿಗೆ ಸೇರಿಕೊಳ್ಳುವ ಯೋಜನೆಯನ್ನು ಹಾಕಿಕೊಂಡಿದ್ದು, ಎರಡು ಬಾರಿ ಹೈದರನನ್ನು ಸಂಧಿಸಿದನು.[೨೫]

ಮಳೆಗಾಲ ಮುಗಿದ ನಂತರ ವಾಣಿಯಂಬಾಡಿ ಕದನದಲ್ಲಿ ಸುಮಾರು ೨೦೦ ಜನರು ಮರಣ ಹೊಂದಿದರು. ಮಿತ್ರಕೂಟದಿಂದ ನಿಜಾಮನು ಹೊರನಡೆದರೆ ೮೦ ಯೂರೋಪಿಯನ್ ಸೇವಕರು ಸೈನ್ಯವನ್ನು ಬಿಟ್ಟು ಹೊರನಡೆದರು. ಈ ಕೃತ್ಯವು ಸೆಂಟ್ ಲೂಬಿನ್ನನ

ಯೋಜನೆಯಾಗಿದ್ದಿತು. ಇಂಗ್ಲಿಷರು ಈ ವಿಜಯದಿಂದ ತಮಗೆ ಸರಿಯಾದ ಉನ್ನತ ವರ್ಗದ ಒಬ್ಬ ವ್ಯಕ್ತಿಯನ್ನು ಮುಖ್ಯಸ್ಥನನ್ನಾಗಿ ನೇಮಿಸಿಕೊಳ್ಳಲು ತೀರ್ಮಾನಿಸಿದರು. ಈ ತೀರ್ಮಾನದ ಪರವಾಗಿ ಅವರು ನವಾಬನನ್ನು ಆರಿಸಿದರು. ವಿಜಯವು ಆರ್ಕಾಟಿನ ನವಾಬನ ಹೆಸರಿನಲ್ಲಿರತಕ್ಕದ್ದು, ಆತನು ಸೈನ್ಯದೊಂದಿಗೆ ಹೋಗಬೇಕು. ಯುದ್ಧದ ವೆಚ್ಚವನ್ನು ಆತನೇ ಕೊಡತಕ್ಕದ್ದು. ಯುದ್ಧವೆಚ್ಚಗಳು ಸಾಲದೇ ಬಂದಲ್ಲಿ ಸಾಲಮಾಡುವುದು ಅನಿವಾರ್ಯವಾಗಿತ್ತು. ಅದಕ್ಕೆ ಬಡ್ಡಿಯ ದರವು ಶೇಕಡಾ ೨೦ರಷ್ಟಿತ್ತು. ಹೀಗಿದ್ದರೂ ಯುದ್ಧದ ವ್ಯವಸ್ಥೆಯು ಅವನಿಗೆ ಅತ್ಯಂತ ಆಕರ್ಷಕವಾಗಿತ್ತು.[೫೬] ಹೈದರ್ ನಿಜಾಮನ ಮಿತ್ರಕೂಟದಿಂದ ನಿಜಾಮನನ್ನು ಹೊರತುಪಡಿಸಿದ ಮೇಲೆ ಸ್ಮಿತ್, ಮ್ಯಾಕೆ ಹಾಗೂ ಕಾಲ್ ಇವರನ್ನು ಯುದ್ಧಗಳಿಗೆ ನಿರ್ವಹಣಾ ಅಧಿಕಾರಿಗಳನ್ನಾಗಿ ನೇಮಿಸಲಾಯಿತು. ಬೆಂಗಳೂರು ಶ್ರೀರಂಗಪಟ್ಟಣವನ್ನು ಆಕ್ರಮಿಸದೆ ಹೈದರನು ವಿವಿಧ ದಿಕ್ಕುಗಳಿಂದ ಆಕ್ರಮಣ ಮಾಡದಂತೆ ಮೈಸೂರು ರಾಜ್ಯದ ದಕ್ಷಿಣದಿಂದ ಮಾತ್ರ ಆಕ್ರಮಣ ಮಾಡಬೇಕು. ಏಕೆಂದರೆ ಸೈನ್ಯಕ್ಕೆ ಆಹಾರವಾಗಲೀ, ಕುದುರೆಗಳಿಗೆ ಮೇವಾಗಲೀ ದೊರೆಯುವುದಿಲ್ಲ ಎಂಬುದು ಸ್ಮಿತ್‌ನ ಅಭಿಪ್ರಾಯವಾಗಿತ್ತು. ಬ್ರಿಟಿಷರು ಆನೆಕಲ್, ಮುಳಬಾಗಿಲು, ಕೋಲಾರ ಮತ್ತು ವೆಂಕಟಗಿರಿಗಳನ್ನು ಗೆದ್ದುಕೊಂಡರು. ಆದರೆ ಹೈದರನು ಇಂಗ್ಲಿಷರ ಆಹಾರ ಪದಾರ್ಥಗಳು, ಮದ್ದುಗುಂಡುಗಳನ್ನು ತಡೆಯುವುದರಲ್ಲಿ ಮತ್ತು ಮಿಂಚಿನಂತಹ ರಾತ್ರಿಯ ಆಕ್ರಮಣಗಳಲ್ಲಿ ನಿರತನಾದನು. ಮಲಬಾರಿನ ಕಡೆ ಆಕ್ರಮಣ ಮಾಡುವುದು ಮತ್ತು ಮುಂದುವರೆದು ಶ್ರೀರಂಗಪಟ್ಟಣದ ಮೇಲೆ ದಾಳಿಮಾಡುವುದು ಬ್ರಿಟೀಷರ ಉದ್ದೇಶವಾಗಿದ್ದರೂ ಸಹ ಹೊನ್ನಾವರ ಹಾಗೂ ಇತರೆ ದ್ವೀಪಗಳನ್ನು ಗೆದ್ದುಕೊಂಡರು. ಇದನ್ನು ತಿಳಿದ ಹೈದರ್ ಅಲಿಯು ಇಂಗ್ಲಿಷರನ್ನು ತಡೆಯಲು ಟಿಪ್ಪುವನ್ನು ಮಲಬಾರ್‌ಗೆ ಕಳುಹಿಸಿದನು. 'ಮುಂಗಾರು ಮಳೆಯ ಸಮಯವಾದ್ದರಿಂದ ಬ್ರಿಟಿಷ್ ಅಧಿಕಾರಿಗಳಾದ ಗೋವಿನ್ ಮತ್ತು ವಾಟ್ಸನ್ ಏಪ್ರಿಲ್ ೩೩ರಂದು ಮುಂಬಯಿಗೆ ಮರಳಿದರು. ೩೫೦ ಜನ ಯೂರೋಪಿಯನ್ನರು ಮತ್ತು ೧,೩೦೦ ಜನ ಭಾರತೀಯ ಸಿಪಾಯಿಗಳ ಒಂದು ಸಣ್ಣ ಸೈನ್ಯವನ್ನು ಹೊನ್ನಾವರದಲ್ಲಿ ಇಟ್ಟಿದ್ದರು. ಆದರೆ ಹೈದರನೇ ಈ ಪ್ರದೇಶವನ್ನು ಗೆದ್ದುಕೊಂಡು ಇಂಗ್ಲೀಷರ ಸೈನ್ಯವನ್ನು ಮಂಗಳೂರಿನಿಂದ ತೆರವುಗೊಳಿಸುವಂತೆ ಮಾಡಿಸಿದನು. ಆದರೆ ಬ್ರಿಟಿಷರು ತಮ್ಮ ಸೈನ್ಯದಲ್ಲಿದ್ದ ಗಾಯಗೊಂಡವರು ಮತ್ತು ಕಾಯಿಲೆಯಾದವರನ್ನು ಹಿಂದೆ ಬಿಟ್ಟು ಹೋದರು. ಸುಮಾರು ೮೦ ಜನ ಯೂರೋಪಿಯನ್ನರೂ ೧೬೩ ಜನ ಭಾರತೀಯ ಸಿಪಾಯಿಗಳು ಕಾಣೆಯಾದರು. ೪೦ರಿಂದ ೫೦ಜನ ಯೂರೋಪಿಯನ್ ಸೈನಿಕರು ಹೈದರನ ವಶವಾದರು. ಮದರಾಸು ಸೈನ್ಯದಲ್ಲಿ ಫಿರಂಗಿಗಳು ಮತ್ತು ಆಹಾರದ ಕೊರತೆಯಿದ್ದಿತು. ಮದರಾಸಿನಿಂದ ಫಿರಂಗಿಗಳನ್ನು ಕಳಿಸಿ ಗುತ್ತಿಯ ಮುರಾರಿರಾಯನ ಅಶ್ವಬಲದ ನೆರವಿನೊಂದಿಗೆ ಫಿಲ್ ಹೆರಿಲ್ಡ್‌ನ ಕೈಕೆಳಗೆ ಕಂಪನಿಯ ಅಶ್ವದಳವನ್ನು ಕಳಿಸಿಕೊಡುವ ಸಲಹೆಗಳು ಸೇರಿದ್ದವು.[೫೭]

ಮದರಾಸು ಸರ್ಕಾರವು ವುಡ್ ಮುಖಾಂತರ ಫಿರಂಗಿಗಳನ್ನು ಕಳುಹಿಸಿ ಮುರಾರಿರಾಯನೊಂದಿಗೆ ಒಂದು ಲಕ್ಷರೂಪಾಯಿಗಳನ್ನು ಮುಂಗಡ ಹಾಗೂ ತಿಂಗಳಿಗೆ ೫೦,೦೦೦ ರೂಪಾಯಿಗಳಂತೆ ಪಾವತಿ ಮಾಡಲು ಒಪ್ಪಿ ೩೦೦೦ ಕುದುರೆಗಳನ್ನು ಪೂರೈಸಲು ಕರಾರು ಮಾಡಿಕೊಂಡಿತು. ಒಂದು ರಹಸ್ಯ ಒಪ್ಪಂದದ ಪ್ರಕಾರ ಮುರಾರಿರಾಯನ ಮಗ ಲಕ್ಷ್ಮಣರಾಯನಿಗೆ ಗುಡಿಬಂಡೆ ಬಳಿಯ ೭೦,೦೦೦ ಅಥವಾ ೮೦,೦೦೦ ರೂಪಾಯಿಯ ವರಮಾನದ ಜಾಗೀರಿನ ಭರವಸೆ ಕೊಡಲಾಯಿತು.

ಬ್ರಿಟಿಷರ ಸೈನ್ಯವು ಭಾರತೀಯ ಸೈನ್ಯಕ್ಕಿಂತ ಉನ್ನತಮಟ್ಟದಲ್ಲಿದ್ದರೂ ಅಶ್ವದಳದಲ್ಲಿ ದುರ್ಬಲವಾಗಿತ್ತು. ಅವರು ಹೈದರನನ್ನು ಬೆನ್ನಟ್ಟಿ ಹೋಗಲು ಸಾಧ್ಯವಾಗುತ್ತಿರಲಿಲ್ಲ. ಅವರ ಆಹಾರ ಸಾಮಗ್ರಿಗಳನ್ನು ಪೂರೈಕೆಯನ್ನು ಹೈದರನು ತಡೆಯುತ್ತಿದ್ದನು. ಆದರೆ ಹೈದರನು ದಿಢೀರನೆ ಕಾಣಿಸಿಕೊಂಡು ಬ್ರಿಟಿಷರ ಸೈನ್ಯವನ್ನು ತಬ್ಬಿಬ್ಬುಗೊಳಿಸುತ್ತಿದ್ದನು. ಅವರ ಭೂ ಪ್ರದೇಶಗಳ ಮೇಲೆ ದಾಳಿಮಾಡಿ ಕೊಳ್ಳೆಹೊಡೆಯುತ್ತಿದ್ದನು. ಬಯಲಿನಲ್ಲಿ ಅವರೊಂದಿಗೆ ಯುದ್ಧ ಮಾಡದೆ ಸಂಚುಗಳ ಮೂಲಕ ಗೆರಿಲ್ಲಾ ಯುದ್ಧತಂತ್ರವನ್ನು ಅನುಸರಿಸುತ್ತಿದ್ದನು. ಇಂಗ್ಲಿಷರು ಮುರಾರಿರಾಯನ ೩,೦೦೦ ಹಾಗೂ ನವಾಬನ ೧,೫೦೦ ಅಶ್ವಾರೋಹಿಗಳನ್ನು ಮಾತ್ರ ನೇಮಿಸಿಕೊಂಡಿದ್ದರು. ಇದು ಹೈದರನ ದಾಳಿಗಳನ್ನು ಎದುರಿಸಲು ಸಾಕಾಗುತ್ತಿತ್ತು.[೫೮] ಮಲಬಾರ್ ತೀರಪ್ರದೇಶಗಳಲ್ಲಿನ ವಾತಾವರಣಕ್ಕೆ ಅನಾರೋಗ್ಯ ಮತ್ತು ದೀರ್ಘಕಾಲೀನ ಹೋರಾಟಗಳಿಂದ ಬಳಲಿಕೆ, ಪಕ್ಷಾಂತರಗಳು ಬ್ರಿಟಿಷರ ಪದಾತಿದಳವನ್ನು ದುರ್ಬಲವಾಗುವಂತೆ ಮಾಡಿದ್ದವು. ಇದರಿಂದ ಮದರಾಸು ಸೈನ್ಯದಲ್ಲಿ ಸೈನಿಕರ ಸಂಖ್ಯೆಯು ಗಣನೀಯವಾಗಿ ಕಾಲಕ್ರಮೇಣ ಕಡಿಮೆಯಾಗುತ್ತಿತ್ತು.

ಹೈದರನ ಬಳಿಯಲ್ಲಿ ೪,೦೦೦ ಅತ್ಯುತ್ತಮ ಅಶ್ವಾರೋಹಿ ಪಡೆಯಿದ್ದಿತು. ಯುದ್ಧಸಮಯದಲ್ಲಿ ಕರೆಬಂದ ಕೂಡಲೇ ಬಂದು ದಾಳಿಗಳಿಗೆ ಹೋಗುತ್ತಿದ್ದ ಪಿಂಡಾರಿಗಳೆಂಬ ಸೈನಿಕ ಜನರಿದ್ದರು. ಇವರ ಕೆಲಸವೇ ಕೊಳ್ಳೆಹೊಡೆಯುತ್ತಿದ್ದರಿಂದ ಬೊಕ್ಕಸವು ತುಂಬಿ ತುಳುಕುತ್ತಿದ್ದಿತು. ಸೈನ್ಯದ ಶಸ್ತ್ರಾಗಾರವು ಸುಸಜ್ಜಿತವಾಗಿದ್ದು, ಸೈನ್ಯವು ಅವನ ಖುದ್ದು ನಿರ್ದೇಶನದಲ್ಲಿ ಯುದ್ಧಮಾಡುತ್ತಿತ್ತು. ಇದರಿಂದ ಸೈನಿಕರು ಹುರುಪಿನಿಂದ ಹೋರಾಡಲು ಅನುಕೂಲವಾಯಿತು. ಕ್ರಿ.ಶ.೧೭೭೦ರಲ್ಲಿ ಮಾಧವರಾಯನು ೭೦,೦೦೦ ಸೈನಿಕರೊಂದಿಗೆ ಮೈಸೂರಿನ ಮೇಲೆ ದಾಳಿಯನ್ನು ಮಾಡಿದನು. ಇದು ಆತನ ಕೊನೆಯ ಹಾಗೂ ಅತ್ಯಂತ ನಿರ್ಧಾರಯುತವಾದ ಆಕ್ರಮಣವಾಗಿತ್ತು. ಯಾವುದೇ ಸಂದರ್ಭಗಳಲ್ಲೂ ಮರಾಠರು ಅಷ್ಟು ದೀರ್ಘಕಾಲದಲ್ಲಿ ಅಷ್ಟು ಬೃಹತ್ ಸೈನ್ಯದೊಂದಿಗೆ ಯುದ್ಧಮಾಡಿರಲಿಲ್ಲ. ಎರಡೂವರೆ ವರ್ಷಗಳ ದೀರ್ಘಾವಧಿ ಶ್ರೀರಂಗಪಟ್ಟಣದ ೪೦ ಮೈಲು ದೂರದವರೆಗೆ ಆಕ್ರಮಣ ಮಾಡಿದ್ದರು. ಮರಾಠರ ತ್ರಯಂಬಕರಾಯನು ಹೈದರ್ ಅಲಿಯು ಹಿಂದಿನ ಒಪ್ಪಂದದಂತೆ ಮರಾಠರಿಗೆ ನೀಡಬೇಕಾಗಿದ್ದ ಚೌತ್ ಹಣವನ್ನು ವಸೂಲಿ ಮಾಡಲು ಮತ್ತು ನವಾಬ ಹಾಗೂ ಇಂಗ್ಲಿಷರನ್ನು ಹೈದರನ ವಿರುದ್ಧ ಯುದ್ಧಕ್ಕೆ ಎತ್ತಿಕಟ್ಟುವುದು ಪ್ರಮುಖವಾದ

ಉದ್ದೇಶವಾಗಿತ್ತು. ನವಾಬನು ನಾಲ್ಕುವರೆ ಲಕ್ಷ ರೂಪಾಯಿಗಳನ್ನು ಚೌತ್ ರೂಪದಲ್ಲಿ ಪಾವತಿ ಮಾಡಿದ್ದರಿಂದ ಗಂಡಾಂತರವು ಸ್ವಲ್ಪಮಟ್ಟಿಗೆ ತಪ್ಪಿತು. ಕ್ರಿ.ಶ.೧೭೭೧ರಲ್ಲಿ ಇಂಗ್ಲೀಷರಿಗೆ ೮ ಲಕ್ಷ ರೂಪಾಯಿಗಳನ್ನು ಸೈನ್ಯದ ವೆಚ್ಚಕ್ಕಾಗಿ ಪ್ರತಿ ತಿಂಗಳು ಒಂದು ಲಕ್ಷರೂಪಾಯಿಗಳನ್ನು ಕೊಡಲು ಒಪ್ಪಿದನು. ಜೊತೆಗೆ ನಾಲ್ಕರಿಂದ ಐದುಸಾವಿರ ಸೈನಿಕರ ಪಡೆಯನ್ನು ಮರಾಠರ ವಿರುದ್ಧದ ಹೋರಾಟಗಳಿಗೆ ಬಳಸಲು ಸಿದ್ಧನಿರುವುದಾಗಿ ಹೇಳಿದನು. ಮದರಾಸು ಆಡಳಿತವು ಅದನ್ನು ಒಪ್ಪದೆ ಹೋಯಿತಾದರೂ ಮುಂಬೈ ಸರಕಾರವು ಹೈದರನಿಗೆ ೩,೦೦೦ ಶಸ್ತ್ರತಂಡಗಳನ್ನು ಒದಗಿಸಲು ಶಿಫಾರಸು ಮಾಡಿತು. ಅಲ್ಲದೆ ಮುಂಬೈ ಸರ್ಕಾರವು ಹೈದರನು ೫ ಲಕ್ಷ ಪಗೋಡಗಳನ್ನು ಕೊಟ್ಟು ಮಂಗಳೂರು ಮತ್ತು ಸಧಾಶಿವಗಡಗಳನ್ನು ಬಿಟ್ಟುಕೊಡುವುದಾದರೆ ೫೦೦ ಯೂರೋಪಿಯನ್ನರು, ೧೩೦೦ ಭಾರತೀಯ ಸಿಪಾಯಿಗಳು ಒಂದು ರೈಲಿನ ತುಂಬಾ ಮದ್ದುಗುಂಡುಗಳನ್ನು ಒದಗಿಸುವುದಾಗಿ ತಿಳಿಸಿದರು.[೫೯]

ಕ್ರಿ.ಶ.೧೭೬೯–೧೭೭೨ರ ಮರಾಠರ ಮೇಲಿನ ಯುದ್ಧದಲ್ಲಿ ಟಿಪ್ಪುವು ಪಶುಗಳಿಗೆ ಅಗತ್ಯವಾಗಿದ್ದ ಮೇವನ್ನು ನಾಶಮಾಡುವುದು, ಬಾವಿಗಳಿಗೆ ಮತ್ತು ಕೆರೆಗಳ ನೀರಿಗೆ ವಿಷಬೆರೆಸುವುದು; ಬೆಂಗಾವಲನ್ನು ಬೇಧಿಸುವುದು, ಹಳ್ಳಿಗಳ ಜನರನ್ನು ಕೋಟೆಯೊಳಗಡೆ ಹೋಗಿ ಸೇರಿಕೊಳ್ಳುವಂತೆ ಒತ್ತಾಯಿಸುವುದು. ಈ ವಿಧಾನಗಳಿಂದ ಶತ್ರುಗಳಿಗೆ ಅತ್ಯಂತ ಹೆಚ್ಚು ಕಷ್ಟವನ್ನು ನೀಡುವುದು ಹೈದರನ ಪ್ರಮುಖ ಯುದ್ಧನೀತಿಗಳಾಗಿದ್ದವು.[೬೦] ಚಿನಿಕುರಳಿ ಯುದ್ಧದಲ್ಲಿ ಟಿಪ್ಪುವು ಸೈನ್ಯದ ಹಿಂಭಾಗದಲ್ಲಿದ್ದು ಸಾಮಾನು ಸರಂಜಾಮುಗಳನ್ನು ನೋಡಿಕೊಳ್ಳುವ ಕೆಲಸವನ್ನು ಮಾಡುತ್ತಿದ್ದನು. ಚಿನಕುರಳಿ ಯುದ್ಧವಾದ ಹತ್ತುದಿನಗಳ ನಂತರ ಮರಾಠರು ರಾಜಧಾನಿಗೆ ಮುತ್ತಿಗೆ ಹಾಕಿದಾಗ ಟಿಪ್ಪುವಿನ ಹಠಾತ್ ಆಕ್ರಮಣಗಳು, ಹೊರದಾಳಿಗಳಿಂದ ಮರಾಠ ಸೈನ್ಯದಲ್ಲಿ ಆತಂಕವನ್ನು ಸೃಷ್ಟಿಸಿ ತಳತಂತ್ರದಲ್ಲಿ (ಕಾಲಾಳು) ಮಹತ್ವದ ಪಾತ್ರವನ್ನು ನಿರ್ವಹಿಸಿದನು. ಕ್ರಿ.ಶ.೧೭೭೩ರಲ್ಲಿ ಯುದ್ಧದಲ್ಲಿ ಸಿರಾ, ಮಧುಗಿರಿ, ಗುರ್ರಂಕೊಂಡ, ಚನ್ನರಾಯನದುರ್ಗ, ಹೊಸಕೋಟೆ ಮತ್ತು ಬಳ್ಳಾರಿಗಳನ್ನು ವಶಮಾಡಿಕೊಂಡನು. ಕ್ರಿ.ಶ.೧೭೭೪ ರಿಂದ ೧೭೭೮ರವರೆಗೆ ಹೈದರನ ಯುದ್ಧಗಳಲ್ಲಿ ಮರಾಠರು ಗೆದ್ದುಕೊಂಡಿದ್ದ ಎಲ್ಲಾ ಪ್ರದೇಶಗಳನ್ನು ಗೆದ್ದುಕೊಳ್ಳಲು ಟಿಪ್ಪುವು ಹೋರಾಡಿದನು. ಅಂತೆಯೇ ಕ್ರಿ.ಶ.೧೭೮೦ರಲ್ಲಿ ಪೊಲಿಲೂರು ಯುದ್ಧದಲ್ಲಿ ಬೇಲಿಯನ್ನು ಸೋಲಿಸಿ ೨೦೦ ಜನ ಯೂರೋಪಿಯನ್ ಸಿಪಾಯಿಗಳು, ೫೦ ಅಧಿಕಾರಿಗಳು, ೩,೮೫೩ ಜನ ಸಿಪಾಯಿಗಳಿದ್ದ ಇಡೀ ಸೇನಾತುಕಡಿಯನ್ನು ಬಹುತೇಕ ನಾಶಮಾಡಲಾಯಿತು. ಕರ್ನಲ್ ಬೇಲಿಯನ್ನು ಸೆರೆಹಿಡಿದು ಶ್ರೀರಂಗಪಟ್ಟಣದ ನೆಲಮಾಳಿಗೆಗೆ ಸಾಗಿಸಲಾಯಿತು. ಈ ವಿಧ್ಯಮಾನವನ್ನು ಕಣ್ಣಾರೆ ಕಂಡಂತಹ ಹೆಕ್ಟರ್ ಮನ್ರೋ ಕೋಪದಿಂದ ತನ್ನ ಬಳಿಯಿದ್ದ ಶಸ್ತ್ರಾಸ್ತ್ರಗಳನ್ನು ಮತ್ತು ಮದ್ದುಗುಂಡುಗಳನ್ನು ಕಾಂಜೀವರಂನ ಕೆರೆಯೊಳಕ್ಕೆ ಎಸೆದು ಮದರಾಸಿಗೆ ಹೊರಟನು. ಆದರೆ ಹೈದರನು ಸೋತು ಹೋಗುತ್ತಿದ್ದ ಶತ್ರುಸೈನ್ಯವನ್ನು ಬೆನ್ನಟ್ಟಿಹೋಗಿ ಅವರ ಸಾಮಾನು ಸರಂಜಾಮುಗಳನ್ನು ವಶಮಾಡಿಕೊಂಡು ಅಪಾರವಾದ ಹಾನಿಮಾಡಿದನು.

ಕ್ರಿ.ಶ. ೧೭೮೩ರಲ್ಲಿ ಫೆಬ್ರವರಿ ೧೮ನೇ ತಾರೀಕು ಬ್ರೇತ್‌ವೇಟ್‌ನನ್ನು ಸೋಲಿಸಿ ಬೇಲಿಯಂತೆ ಬ್ರೇತ್‌ವೇಟ್‌ನನ್ನು ಸಹ ಸೆರೆಹಿಡಿದನು. ಜೊತೆಗೆ ಅವನ ಸೈನ್ಯದ ೧೦೦ ಯೂರೋಪಿಯನ್ ಸಿಪಾಯಿಗಳು, ೧,೫೦೦ ಸಿಪಾಯಿಗಳು, ೩೦೦ ಕುದುರೆಗಳು ಅವನ ಕೈವಶವಾದವು.[೧] ಟಿಪ್ಪೂ ಮಲಬಾರ್ ಬಿಟ್ಟುಬಂದ ಮೇಲೆ ಟಿಪ್ಪುವಿನ ದಳಪತಿ ಆಯಾಜ್‌ಖಾನ್ ವಿಶ್ವಾಸದ್ರೋಹ ಮಾಡಿದ್ದರಿಂದ ಇಂಗ್ಲೀಷರು ಮಂಗಳೂರು ಮತ್ತು ಬಿದನೂರು ವಶಪಡಿಸಿಕೊಳ್ಳಲು ಅವಕಾಶ ದೊರೆಯಿತು. ಸೈನ್ಯಕ್ಕೆ ಸಂಬಂಧಿಸಿದ ಫಿರಂಗಿ ದಳದಲ್ಲಿದ್ದ ಅವ್ಯವಸ್ಥೆಗಳನ್ನು ಸರಿಪಡಿಸಿ ಒಬ್ಬ ಫ್ರೆಂಚ್ ಅಧಿಕಾರಿಯನ್ನು ನೇಮಿಸಿದನು. ಯುದ್ಧ ಖೈದಿಗಳನ್ನು ಉದಾರವಾಗಿ ನಡೆಸಿಕೊಳ್ಳಬೇಕೆಂದು ತನ್ನ ಅಧಿಕಾರಿಗಳಿಗೆ ತಾಕೀತು ಮಾಡಿದನು.

ಕ್ರಿ.ಶ. ೧೭೮೩ರಲ್ಲಿ ಟಿಪ್ಪುವಿನ ಮೇಲೆ ಯುದ್ಧ ಮಾಡಲು ಸ್ಟುಯರ್ಟ್‌ನು ವಾಂಡಿವಾಷ್‌ನ ಕಡೆಗೆ ಸಾಗಿದನು. ಟಿಪ್ಪುವು ಇಂಗ್ಲೀಷರನ್ನು ಹಿಮ್ಮೆಟಿಸಿದನು. ಮೈಸೂರು ಸೇನೆಯು ಅವರನ್ನು ಹಿಮ್ಮೆಟ್ಟಿತು. ಈ ಕಾಳಗದಲ್ಲಿ ಇಂಗ್ಲಿಷ್ ಸೇನೆಯಲ್ಲಿ ಸುಮಾರು ೩೦೦ ಜನರು ಮರಣ ಹೊಂದಿದರು. ಆದರೆ ಸ್ಟುವರ್ಟ್‌ನು ಕೋಟೆಗಳು ಟಿಪ್ಪುವಿನ ಕೈಗೆಸಿಗದಂತೆ ಕೆಡುವಿ ನಾಶಮಾಡಿದನು. ಈ ಯುದ್ಧದಲ್ಲಿ ಸೋತ ಟಿಪ್ಪುವಿನ ಹತ್ತಿರ ಬ್ರಿಟೀಷರು ತಮ್ಮ ಯೂರೋಪಿಯನ್ ಸೈನಿಕರನ್ನು ಬಿಟ್ಟಿದ್ದರು. ಈ ಯುದ್ಧದ ಒಪ್ಪಂದದ ಪ್ರಕಾರ ಬಿದನೂರಿನಿಂದ ಟಿಪ್ಪುವಿನ ಕಾವಲುಪಡೆಯು ಏನನ್ನೂ ಕೊಂಡೊಯ್ಯಕೂಡದು. ಅಲ್ಲದೆ ಟಿಪ್ಪುವಿನ ಸೈನ್ಯವು ಆಂಗ್ಲರ ಜೊತೆಯಲ್ಲಿ ಸದಾಶಿವಗಡವನ್ನು ತಲುಪಿ ಅಲ್ಲಿಂದ ಮುಂಬೈಗೆ ಹೋಗಲೇಬೇಕು. ಟಿಪ್ಪು ಅವರಿಗೆ ಆಹಾರ ಸಾಮಗ್ರಿಗಳನ್ನು ಕಾಯಿಲೆಯಾದವರಿಗೆ ವಾಹನ ಸೌಲಭ್ಯವನ್ನು ಮಾಡಿಕೊಡಬೇಕು. ಈ ಷರತ್ತುಗಳನ್ನು ಪಾಲಿಸುವ ಸಲುವಾಗಿ ಇಬ್ಬರನ್ನು ಒತ್ತೆಯಾಗಿ ಟಿಪ್ಪುವಿನ ಬಳಿ ಇಂಗ್ಲಿಷರು ಇಡಬೇಕು.

ಇಂಗ್ಲಿಷರು ಈ ಷರತ್ತುಗಳನ್ನು ಮುರಿದು ಆಯುಧಗಳನ್ನು ಒಪ್ಪಿಸುವ ವಿಧಾನವನ್ನು ಕುರಿತು ಟಿಪ್ಪುವಿನೊಂದಿಗೆ ಕಲಹಕ್ಕಿಳಿದರು. ಅವರು ತಮಗೆ ಬೇಕಾದಷ್ಟು ಚಿನ್ನಾಭರಣಗಳೊಂದಿಗೆ ಹಣವನ್ನು ಸಹ ಕದ್ದು ತಮ್ಮೊಂದಿಗೆ ಒಯ್ಯಲು ಪ್ರಯತ್ನಿಸಿದರು. ಆದರೆ ಅವರ ಗಂಟುಮೂಟೆಗಳನ್ನು ಬಿಚ್ಚಿ ಶೋಧಿಸಿದಾಗ ಪ್ರತಿಯೊಬ್ಬ ಸಿಪಾಯಿಯ ಚೀಲದಲ್ಲೂ ಚಿನ್ನಾಭರಣಗಳು ಪತ್ತೆಯಾದವು. ಈ ಶೋಧನೆಯಿಂದ ೪೦,೦೦೦ ಪಗೋಡಗಳು ದೊರೆತವು. ಅಲ್ಲದೆ ಇವರು ಸಾರ್ವಜನಿಕ ಉಗ್ರಾಣವನ್ನು ಲೂಟಿಮಾಡಿ, ಸರಕಾರಿ ದಾಖಲೆ ಪತ್ರಗಳನ್ನು ಸುಟ್ಟುಹಾಕಿದ್ದರು.[೨]

ಕ್ರಿ.ಶ.೧೭೮೪ರಲ್ಲಿ ಕರ್ನಾಟಕ ಮತ್ತು ಮಲಬಾರ್ ತೀರಪ್ರದೇಶದಲ್ಲಿ ಯುದ್ಧಗಳು ನಿಂತರೂ ಸಹ ಬ್ರಿಟಿಷರು ಪುಲ್ಲಕಟನ್ ಯುದ್ಧವನ್ನು ದಕ್ಷಿಣದಲ್ಲಿ ನಿಲ್ಲಿಸಲಿಲ್ಲ. ಬದಲಿಗೆ ಸ್ಟುವರ್ಟ್‌ನು ಮೈಸೂರಿಗೆ ಮುತ್ತಿಗೆ ಹಾಕಲು ಸಿದ್ಧತೆ ಮಾಡಿಕೊಂಡನು. ಆದರೆ ಟಿಪ್ಪು ದಾರಾಪುರಂ ಕಡೆಗೆ ಧಾವಿಸಿ ಪಾಲಘಾಟನ್ನು ಮುತ್ತಿ ಅಲ್ಲಿದ್ದ ಆಹಾರ ಸಾಮಾಗ್ರಿಗಳು, ಮಿಲಿಟರಿ ಉಗ್ರಾಣಗಳು

ಮತ್ತು ೫೦,೦೦೦ ಪಗೋಡಗಳನ್ನು ವಶಪಡಿಸಿಕೊಂಡನು. ಅಲ್ಲಿಂದ ಕೋಯಮತ್ತೂರಿಗೆ ನಡೆದು ಅದನ್ನು ಸಹ ವಶಮಾಡಿಕೊಂಡು ಕಮಿಷನರ್ ಪತ್ರಗಳನ್ನು ಅಲಕ್ಷಿಸಲಾಯಿತು. ಕೋಯಮತ್ತೂರನ್ನು ಲೂಟಿಮಾಡಿ ಆಹಾರ ಸಾಮಗ್ರಿಗಳು ಶಸ್ತ್ರಾಸ್ತ್ರಗಳು ಮದ್ದುಗುಂಡುಗಳನ್ನು ಹೊತ್ತೊಯ್ದು[೬] ಬ್ರಿಟಿಷರಿಗೆ ಬಹಳ ಹಾನಿಯುಂಟು ಮಾಡಿದನು.

ಮೆಕ್ಲಿಯಾಡ್‌ನು ಕಣ್ಣಾನೂರಿಗೆ ಮುತ್ತಿಗೆಹಾಕಿ ಕೋಟೆಯನ್ನು ಗೆದ್ದು ರಾಣಿಯನ್ನು ಬಂಧಿಸಿ ನಾಲ್ಕುಲಕ್ಷ ಪಗೋಡಗಳ ಜೊತೆಗೆ ಬೇಕಾದಷ್ಟು ಆಹಾರ ಪದಾರ್ಥಗಳನ್ನು ವಶಮಾಡಿಕೊಂಡನು. ಇದರಿಂದ ಕಣ್ಣಾನೂರಿನ ನೈಸರ್ಗಿಕ ಬಂದರನ್ನು ಮೆಣಸಿನ ವ್ಯಾಪಾರದ ಏಕಸ್ವಾಮ್ಯಕ್ಕಾಗಿ ಬಳಸಿಕೊಳ್ಳಲಾಯಿತು. ಆಂಗ್ಲರು ಎಂದೂ ಯುದ್ಧನಿಯಮಗಳ ಪ್ರಕಾರ ನಡೆದುಕೊಳ್ಳಲಿಲ್ಲ. ಬ್ರಿಟಿಷರು ಕೊಡಗಿನ ರಾಜನು ಟಿಪ್ಪುವಿನ ವಿರುದ್ಧ ದಂಗೆಯೇಳುವಂತೆ ಪ್ರಚೋದಿಸಿದರು. ಶ್ರೀರಂಗಪಟ್ಟಣಕ್ಕೆ ಹೋಗಲು ಕೊಡಗು ಆಯಕಟ್ಟಿನ ಸ್ಥಳವಾಗಿತ್ತು. ಜೊತೆಗೆ ಆಂಗ್ಲರು ಟಿಪ್ಪುವಿನ ಸಾಮಂತರಲ್ಲೊಬ್ಬನಾದ ಚೆರಕಲ್‌ನ ರಾಜನಿಗೆ ಆಶ್ರಯ ನೀಡಿದರು. ಮಲಬಾರ್ ನಾಯಕರನ್ನು ಟಿಪ್ಪುವಿನ ವಿರುದ್ಧವಾಗಿ ಬಂಡೇಳುವಂತೆ ಮಾಡಿದರು. 'ಟಿಪ್ಪು ಯುದ್ಧ ಮಾಡದಂತೆ ಬ್ರಿಟಿಷರು ಯುದ್ಧದ ವೆಚ್ಚಗಳನ್ನು ತುಂಬಿಕೊಳ್ಳಲು ಸಂಧಿಮಾಡಿಕೊಳ್ಳುವುದು. ಭಾರತದಲ್ಲಿ ಇದು ನಡೆಯುವುದಿಲ್ಲ. ಯಾವುದೇ ದೇಶದಲ್ಲೂ ಈ ಕ್ರಮವು ಫಲ ನೀಡಿತೆಂದು ನಮಗನ್ನಿಸುವುದಿಲ್ಲ' ಎಂದು ಟಿಪ್ಪುವಿನ ವಕೀಲರಾದ ಅಪ್ಪಾಜಿರಾವ್ ಮತ್ತು ಶ್ರೀನಿವಾಸರಾಯರಿಗೆ ಹೇಳಿ ಕಳುಹಿಸಿದರು.

ನರಗುಂದವನ್ನು ಹೈದರನು ತನ್ನ ಕಾಲಾವಧಿಯಲ್ಲಿ (ಕ್ರಿ.ಶ.೧೭೭೮) ಮೈಸೂರು ಆಳ್ವಿಕೆಗೆ ಒಳಪಡಿಸಿದ್ದನು. ಅದರ ರಾಜ ವೆಂಕಟರಾವ್ ಭಾವೆ ಮೈಸೂರಿನ ಪ್ರಭುತ್ವವನ್ನು ಒಪ್ಪಿಕೊಂಡು ವಾರ್ಷಿಕ ಕಪ್ಪಕಾಣಿಕೆ ನೀಡುವುದಾಗಿ ಸಮ್ಮತಿಸಿದ್ದನು. ಎರಡನೆಯ ಆಂಗ್ಲೋ-ಮೈಸೂರು ಯುದ್ಧವು ಮುಗಿದ ಮೇಲೆ ಟಿಪ್ಪುವು ನರಗುಂದದ ಜಮೀನ್ದಾರರಿಂದ ಬರಬೇಕಾದ ಕಪ್ಪವನ್ನು ಹೆಚ್ಚಿಸಿದ ನೀತಿಯು ಯುದ್ಧಕ್ಕೆ ಎಡೆಮಾಡಿಕೊಟ್ಟಿತು. ದೇಸಾಯಿಯ ಮಂತ್ರಿಯಾದ ಕೋಲಾಪತ್ ಪೇಶ್ವೆಯು ಮರಾಠ ನಾಯಕರನ್ನೆಲ್ಲಾ ಒಗ್ಗೂಡಿಸಿ ನರಗುಂದದ ಮೇಲೆ ದಾಳಿಮಾಡಿ ಕೃಷ್ಣಾನದಿ ಬಯಲಿನಲ್ಲಿನ ಪ್ರದೇಶಗಳನ್ನೆಲ್ಲಾ ವಶಪಡಿಸಿಕೊಳ್ಳಬೇಕೆಂದು ಅವರನ್ನು ಪ್ರಚೋದಿಸಿದನು. ಹೈದರನ ಮರಣದ ಸಂದರ್ಭವನ್ನು ಬಳಸಿಕೊಂಡು ಮೈಸೂರಿನ ಮೇಲೆ ಆಕ್ರಮಣ ಮಾಡಬೇಕೆಂದು ಚಿಂತನರಾವ್ ಪಟವರ್ಧನ್‌ಗೆ ಪತ್ರಬರೆದನು. ಅವನ ಈ ಕೋರಿಕೆಗಳು ಈಡೇರದಿರಲು ದೇಸಾಯಿಯು ಆಂಗ್ಲರ ಮಿತ್ರತ್ವವನ್ನು ಗಳಿಸಿಕೊಂಡನು. ತಾನೊಬ್ಬ ಸ್ವತಂತ್ರ ನಾಯಕನೆಂದು ಬಗೆದು ಮೈಸೂರಿನ ಮೇಲೆ ದಾಳಿಮಾಡಲು ತನಗೆ ಸೇನಾ ಸಹಾಯವನ್ನು ನೀಡಬೇಕೆಂದು ಕೋರಿದನು. ಇತರ ಜಮೀನ್ದಾರರನ್ನು ಟಿಪ್ಪುವಿನ ವಿರುದ್ದ ದಂಗೆಯೇಳುವಂತೆ ಮಾಡಿದನು. ಪುಂಗನೂರು, ಮದನಪಲ್ಲಿ ಮತ್ತಿತರ ಪಾಳೆಯಗಾರರಿಗೆ ಟಿಪ್ಪುವಿನಲ್ಲಿ ನಿಷ್ಠೆ ತೋರಿಸಬಾರದೆಂದು ಹೇಳಿಕೊಟ್ಟು ಗುರ್ರಂಹೊಂಡ ಜಿಲ್ಲೆಯ ಸೆಡ್ಡಂ ಕೋಟೆಗೆ ಮುತ್ತಿಗೆ ಹಾಕಿದನು. ಎರಡು ವರ್ಷಗಳ ಕಾಲ ಕಪ್ಪವನ್ನು ಕೊಡದೆ

ಸತಾಯಿಸಿದನು. ಟಿಪ್ಪು ಬೇರೆಬೇರೆ ಎರಡು ಸೇನಾತುಕಡಿಗಳನ್ನು ಕಳಿಸಿ ದೇಸಾಯಿಗೆ ಶರಣಾಗಲು ಅವಕಾಶವನ್ನು ಕಲ್ಪಿಸಿದನು. ಆದರೆ ದೇಸಾಯಿಯು ಯುದ್ಧಮಾಡುವ ಹುಮ್ಮಸ್ಸಿನಿಂದ ಮರಾಠರ ನೆರವನ್ನು ಪಡೆಯಲು ಹಠಹಿಡಿದು ಕುಳಿತು ಸ್ವಲ್ಪಕಾಲ ಧೈರ್ಯವಾಗಿ ಯುದ್ಧಮಾಡಿದನು. ಇತ್ತ ನಾನಾಪಡ್ನವೀಸನಿಗೆ ತನಗೆ ಸೇನಾನೆರವನ್ನು ಒದಗಿಸಬೇಕೆಂದು ದೇಸಾಯಿ ಪರಶುರಾಮಭಾವು ಒತ್ತಾಯ ಮಾಡಿದನು. ಮರಾಠರ ಸೈನ್ಯವು ಯುದ್ಧಕ್ಕೆ ಸಿದ್ಧವಿರಲಿಲ್ಲ. ಆದರೂ ಮರಾಠ ಸೈನ್ಯದ ಒಂದುಭಾಗ ಟಿಪ್ಪುವಿನ ಮೇಲೆ ಆಕ್ರಮಣಮಾಡಿ ವ್ಯವಸ್ಥಿವಾಗಿ ಹೋರಾಡುವಲ್ಲಿ ವಿಫಲವಾಗಿ ವಿಧಿಯಿಲ್ಲದೆ ಹಿಮ್ಮೆಟ್ಟಿಹೋಯಿತು.[೬೪] ಈ ದಾಳಿಯು ನಾನಾ ಮಾಡಿದ್ದ ಆಜ್ಞೆಗೆ ವಿರುದ್ಧವಾಗಿ ಪರಶುರಾಂಭಾವು ಮತ್ತು ಗಣೇಶಪಂತರು ಟಿಪ್ಪುವಿನ ಸೈನ್ಯದ ಮೇಲೆ ಕೈಗೊಂಡ ದಾಳಿಯಾದರೂ ಅಷ್ಟೇ ವೇಗವಾಗಿ ಅವರು ಹಿಮ್ಮೆಟ್ಟಬೇಕಾಯಿತು. ಭಾವುವಿನ ಈ ನಡವಳಿಕೆಯನ್ನು ನಾನಾ ಸಮ್ಮತಿಸದೆ ಅವನನ್ನು ಖಂಡಿಸಿದನು. ತನಗಾದ ಈ ಅಪಮಾನವನ್ನು ಮುಚ್ಚಿಕೊಳ್ಳಲು ತುಕೋಜಿ ಹೋಳ್ಕರನ ಅಧೀನದಲ್ಲಿ ಭಾರೀ ಸೈನ್ಯವನ್ನು ಕಳುಹಿಸಿ ದೊಡ್ಡ ಯುದ್ಧಕ್ಕಾಗಿ ಸಿದ್ಧತೆ ಮಾಡಿಕೊಳ್ಳ ತೊಡಗಿದನು. ಪರಶುರಾಂಬಾವು ಟಿಪ್ಪುವಿನ ಸೈನ್ಯದ ಮೇಲೆ ನಡೆಸಿದ ಅಪ್ರಚೋದಿತ ದಾಳಿಯು ಮತ್ತೆ ಯುದ್ಧವನ್ನು ತ್ವರೆಗೊಳಿಸಿತು. ಆದರೆ ಟಿಪ್ಪುವು ನರಗುಂದದ ಮೇಲೆ ನಿಲ್ಲಿಸಿದ್ದ ಯುದ್ಧದ ಕಾರ್ಯಾಚರಣೆಗಳನ್ನು ಮತ್ತೆ ಪ್ರಾರಂಭಿಸಿದ ನಂತರ ಮಂಗಳೂರು ಕೋಟೆಗೆ ಮುತ್ತಿಗೆ ಹಾಕಿದಾಗ ಸುಲಭವಾಗಿ ವಶವಾಯಿತು. ಟಿಪ್ಪು ವಿಧಿಸಿದ ಷರತ್ತುಗಳನ್ನು ಒಪ್ಪಿಕೊಂಡು ಸೈನ್ಯವು ಶರಣಾಯಿತು. ಕೋಟೆಯಲ್ಲಿದ್ದ ಸುಮಾರು ೧,೬೫೦ ಕಾವಲು ಪಡೆಯ ಸೈನಿಕರನ್ನು ಟಿಪ್ಪು ಬಿಡುಗಡೆ ಮಾಡಿ ದೇಸಾಯಿಯನ್ನೂ ಮತ್ತು ಅವನ ಮಂತ್ರಿಯನ್ನು ಅವರವರ ಕುಟುಂಬಗಳೊಂದಿಗೆ ಕಬ್ಬಾಳು ದುರ್ಗಕ್ಕೆ ಕಳುಹಿಸಿದನು.[೬೫] ಆದರೆ ಕ್ರಿ.ಶ.೧೭೮೭ರಲ್ಲಿ ಅವರ ಬಿಡುಗಡೆಯಾಯ್ತು. ಮೈಸೂರು-ಮರಾಠ ಯುದ್ಧದ ಅಂತ್ಯವಾದ ಸಂದರ್ಭದಲ್ಲಿ ಟಿಪ್ಪುವಿನ ಸೈನ್ಯವು ನರಗುಂದ, ಕಿತ್ತೂರು, ದೊಡವಾಡ, ಖಾನಾಪುರ ಮತ್ತು ಸಾಡಾ ಮೊದಲಾದ ಪಾಳೆಯಪಟ್ಟುಗಳನ್ನು ಗೆದ್ದುಕೊಂಡಿತು.

ಇಂಗ್ಲಿಷರು ಮತ್ತು ಮರಾಠರ ನಡುವಿನ ಯುದ್ಧದಲ್ಲಿ ಭಾರತದಲ್ಲಿದ್ದ ಫ್ರೆಂಚರು ಟಿಪ್ಪುವಿಗೆ ಸಹಾಯ ಮಾಡದೆ ನಿರಾಸೆಯುಂಟು ಮಾಡಿದರು. ಇಂಗ್ಲಿಷರನ್ನು ಭಾರತದಿಂದ ಹೊರಹಾಕಲು ಟಿಪ್ಪುವಿನ ಆಸ್ಥಾನದಲ್ಲಿದ್ದ ಫ್ರೆಂಚರು ತಮ್ಮ ತಾಯ್ನಾಡಿನ ನೆರವು ದೊರೆಯುವುದೆಂಬ ಆಸೆಯಿಂದ ಟಿಪ್ಪುವನ್ನು ಕೆರಳುವಂತೆ ಮಾಡುತ್ತಿದ್ದರು. ಇಂಗ್ಲಿಷರೊಡನೆ ಯುದ್ಧಮಾಡಬೇಕಾದ ಸಂದರ್ಭ ಒದಗಿಬಂದಾಗ ಯಾವ ರೀತಿಯ ನೆರವನ್ನು ತಾನು ನಿರೀಕ್ಷಿಸಬಹುದು? ಎಂಬುದನ್ನು ತಿಳಿದುಕೊಳ್ಳಲು ಫ್ರಾನ್ಸ್‌ನ ಚಕ್ರವರ್ತಿಯಾಗಿದ್ದ ೧೬ನೆಯ ಲೂಯಿಯ ಆಸ್ಥಾನಕ್ಕೆ ಒಂದು ನಿಯೋಗವನ್ನು ಕಳುಹಿಸಿಕೊಟ್ಟನು. ಅದರ ಪ್ರಕಾರ ಹತ್ತುಸಾವಿರ ಫ್ರೆಂಚ್ ಸೈನಿಕರನ್ನು ತನ್ನ ನೆರವಿಗೆ ತಮ್ಮ ಆಜ್ಞಾನುಸಾರವಾಗಿ ಕಳುಹಿಸಿಕೊಡಬೇಕೆಂದು ಟಿಪ್ಪು ಕೇಳಿಕೊಂಡಿದ್ದನು. ಅಲ್ಲದೆ ಕ್ರಿ.ಶ.೧೭೮೭ರಲ್ಲಿ ಟಿಪ್ಪೂ ಕರ್ನಾಟಕದ ಮೇಲೆ ದಾಳಿಮಾಡಲು ಆಲೋಚಿಸಿದ್ದಾನೆಂಬ ಸುದ್ದಿಯ

ಪ್ರಸಾರದಲ್ಲಿ ಇಂಗ್ಲಿಷರು ಹೆಚ್ಚು ಆಸಕ್ತರಾಗಿದ್ದರು. ಆದರೆ ಇದು ಟಿಪ್ಪುವಿನ ವಿರುದ್ಧ ಇತರರನ್ನು ಎತ್ತಿಕಟ್ಟಲು ಕಾರ್ನ್‌ವಾಲೀಸ್ ನಾನಾ ಪಢ್ನವೀಸನು ಒಕ್ಕೂಟದ ಬಗ್ಗೆ ಒಲವು ತೋರುವುದಿಲ್ಲವೆಂಬ ವಿಷಯ ಕಾರ್ನ್‌ವಾಲೀಸ್‌ಗೆ ಗೊತ್ತಿದ್ದರೂ ಸಹ, ಇತ್ತೀಚೆಗೆ ಮುಕ್ತಾಯವಾಗಿದ್ದ ಯುದ್ಧದಲ್ಲಿ ಇಂಗ್ಲಿಷರು ತಟಸ್ಥರಾಗಿದ್ದ ಅಂಶವನ್ನು ದೃಷ್ಠಿಯಲ್ಲಿಟ್ಟುಕೊಂಡು ಒಕ್ಕೂಟದ ಬಗ್ಗೆ ನಾನಾ ನೊಡನೆ ಚರ್ಚಿಸಲು ಕಾರ್ನ್‌ವಾಲೀಸನು ಮೂಲೆಟ್ ಎಂಬುವನನ್ನು ಕಲಿಸಿಕೊಟ್ಟನು. ಟಿಪ್ಪು ಈ ಕಾಲದಲ್ಲಿ ಮರಾಠರನ್ನು ತನ್ನ ಪಕ್ಷಕ್ಕೆ ಸೇರಿಸಿಕೊಳ್ಳಲು ಮತ್ತು ಇಂಗ್ಲಿಷರ ವಿರುದ್ಧ ದೇಶೀಯ ಮತ್ತು ವಿದೇಶೀಯರನ್ನು ಸಂಘಟಿಸಲು ಕಾರ್ಯನಿರತನಾಗಿದ್ದನು.[೬೬]

ಮೂರನೆಯ ಆಂಗ್ಲೋ-ಮೈಸೂರು ಯುದ್ಧವು ಕ್ರಿ.ಶ.೧೭೮೯ರ ಡಿಸೆಂಬರ್ ೨೯ರಂದು ಪ್ರಾರಂಭವಾಯಿತು. ಮದ್ರಾಸಿನ ಗವರ್ನರ್‌ನು ಕ್ರ್ಯಾಂಗನೂರು ಮತ್ತು ಆಯಿಕೋಟೆಗಳನ್ನು ಟಿಪ್ಪು ಮುತ್ತಿದ. ತಿರುವಾಂಕೂರಿನ ಕೋಟೆಯ ಸುತ್ತಲು ಇದ್ದ ಕಂದಕದ ರಕ್ಷಣೆಗೆ ಇದ್ದ ಬಿದಿರುಬೊಂಬುಗಳನ್ನು ನಾಶಮಾಡಲು ಪ್ರಯತ್ನಿಸಿದ್ದರಿಂದ ಯುದ್ಧವು ಪ್ರಾರಂಭವಾಯಿತು. ಈ ಯುದ್ಧದಲ್ಲಿ ಭಾರತೀಯ ರಾಜರು ತಲೆಹಾಕದಂತೆ ನೋಡಿಕೊಳ್ಳುವುದು ಕಾರ್ನ್‌ವಾಲೀಸನ ಉದ್ದೇಶವಾಗಿತ್ತು. ಆದರೆ ತಕ್ಷಣವೇ ಆತ ತನ್ನ ಧೋರಣೆಯನ್ನು ಬದಲಾಯಿಸಿ ತಿರುವಾಂಕೂರು ರಾಜನಿಗೆ ತನ್ನ ರಾಜ್ಯರಕ್ಷಣೆಗಾಗಿ ಅನ್ಯರ ನೆರವನ್ನು ಪಡೆಯುವ ಅಧಿಕಾರವಿದೆಯೆಂದು ಸ್ಪಷ್ಟಪಡಿಸಿದನು. ಇದರ ಜೊತೆಗೆ ನಿಜಾಮನೊಂದಿಗೆ ಒಪ್ಪಂದ ಮಾಡಿಕೊಂಡು ಮರಾಠರನ್ನು ಯುದ್ಧಕ್ಕೆಳೆಯುವ ಸನ್ನಾಹ ಮಾಡಿಕೊಂಡನು. ಮದ್ರಾಸ್ ಸರ್ಕಾರದ ಅಭಿಪ್ರಾಯವನ್ನು ಖಂಡಿಸಿದನು. ಈ ವೇಳೆಯಲ್ಲಿ ಮದ್ರಾಸಿನ ಗೌರ್ನರನಾಗಿದ್ದ ಹಾಲೆಂಡನನ್ನು ಸೇವೆಯಿಂದ ವಜಾಗೊಳಿಸಿದ್ದು ಪ್ರಮುಖವಾದ ತಿರುವಾಗಿತ್ತು. ಏಕೆಂದರೆ ಹಾಲೆಂಡನು ಟಿಪ್ಪುವಿನ ಪರವಾಗಿದ್ದ ನಿಲುವುಗಳೇ ಪ್ರಮುಖವಾದ ಕಾರಣಗಳಾಗಿದ್ದನು.[೬೭] ಡಿಸೆಂಬರ್ ೨೯ರ ಘಟನೆ ಯುದ್ಧ ಘೋಷಣೆ ಎಂದೇ ಕಾರನ್ ವಾಲೀಸನು ಭಾವಿಸಿದನು. ಎರಡನೆಯ ಆಗ್ಲೋ-ಮೈಸೂರು ಯುದ್ಧದಲ್ಲಿ ಹೈದರನು ವಶಪಡಿಸಿಕೊಂಡಿದ್ದ ಪ್ರದೇಶಗಳನ್ನು ಮರಳಿ ಪಡೆಯಬೇಕೆಂಬುದೇ ಕಾರನ್ ವಾಲೀಸನ ಪ್ರಯತ್ನವಾಗಿತ್ತು. ಜೊತೆಯಲ್ಲಿಯೇ ಆತ ಈ ಯೋಜನೆಯಲ್ಲಿ ಸಫಲನಾದನು. ಹೈದರಾಬಾದ್ ಮತ್ತು ಪೂನಾಗಳಲ್ಲಿ ಇಂಗ್ಲಿಷರ ಪಿತೂರಿಯನ್ನು ವಿಫಲಗೊಳಿಸಲು ಟಿಪ್ಪುವು ತನ್ನ ನಿಯೋಗಿಗಳ ಮೂಲಕ ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾದವು. ಇಂಗ್ಲಿಷರು ಸೋಲಲೇಬೇಕಾಯಿತು. ಫೆಬ್ರುವರಿ ೮, ೧೭೯೦ರಂದು ಮರಾಠರು ಬ್ರಿಟೀಷರೊಂದಿಗೆ ಮೈತ್ರಿ ಮಾಡಿಕೊಳ್ಳಲು ಒಪ್ಪಿದ್ದಾರೆಂದು ಮೊಲೆಟ್ ಕಾರನ್‌ವಾಲಿಸನಿಗೆ ತಿಳಿಸಿದನು ಮೈಸೂರಿನಲ್ಲಿದ್ದ ಮರಾಠರಿಗೆ ಸೇರಿದ ಪ್ರದೇಶಗಳನ್ನು ಆಯಾಯ ಒಡೆಯರಿಗೆ ವಾಪಸ್ಸು ಮಾಡುವುದಾಗಿತ್ತು.

ಈ ಒಪ್ಪಂದದ ಪ್ರಕಾರ ತುಂಗಭದ್ರಾ ನದಿಯ ಉತ್ತರಕ್ಕೆ ಇದ್ದಂತಹ ಪ್ರದೇಶಗಳ ಮೇಲಿನ ಹಕ್ಕು ಮರಾಠರಿಗೆ ಮಾತ್ರ ಇರುವುದು. ಅಲ್ಲದೆ ಮರಾಠರ ಸೇನೆಯೊಡನೆ ಬ್ರಿಟೀಷರ ಒಂದು

ಸೇನಾತುಕಡಿಯು ಸಹ ಹೋಗಬೇಕೆಂದು ಮತ್ತು ಅದರ ಖರ್ಚನ್ನು ನಾನಾ ಫಡ್ನವೀಸನು ನೀಡಬೇಕೆಂದು ನಿರ್ಧರಿಸಲಾಯಿತು.[೬೮]

ಈ ಕಾಲಾವಧಿಯಲ್ಲಿ ನಿಜಾಮನು ಕೂಡ ಮಿತ್ರಕೂಟವನ್ನು ಸೇರಲು ಒಪ್ಪಿಕೊಂಡನು. ಇದು ಆತನ ರಾಜ್ಯದ ಅಧಿಕಾರದಾಹ ಇಂಗ್ಲಿಷರ ಮಿಲಿಟರಿ ಬಲದ ನೆರವು ಇದ್ದೇ ಇರುತ್ತದೆಂಬ ಭಾವನೆ ಬಲವಾಗಿದ್ದಿತು. ಮರಾಠರ ಪ್ರವೇಶವು ಸಹ ಈ ಕಾಯ್ದೆಯನ್ನು ತಿದ್ದುಪಡಿಮಾಡಲಾಯಿತು. ಅದರಲ್ಲಿ ಮರಾಠರು ತನ್ನ ರಾಜ್ಯದ ಮೇಲೆ ಆಕ್ರಮಣ ಮಾಡದಂತೆ ಇಂಗ್ಲಿಷರಿಂದ ನಿಜಾಮನು ಭರವಸೆಯನ್ನು ಕೇಳಿದನು. ಮರಾಠರಿಂದ ನಿಜಾಮನಿಗೆ ಯಾವುದೇ ರೀತಿ ತೊಂದರೆಯಾಗದಂತೆ ನೋಡಿಕೊಳ್ಳುವುದಾಗಿ ಆಂಗ್ಲರು ಭರವಸೆ ನೀಡಿದರು. ಬೋಂಸ್ಲೇ, ಸಿಂಧ್ಯಾ ಮತ್ತು ಹೊಳ್ಕರ್ ಮೊದಲಾದ ಮರಾಠ ನಾಯಕರನ್ನು ಕಾರನ್‌ವಾಲೀಸನು ಸಂಪರ್ಕಿಸಿ ಅವರುಗಳು ಇಂಗ್ಲೀಷರ ಪರವಾದ ಒಕ್ಕೂಟ ಸೇರಿಕೊಳ್ಳುವಂತೆ ಪ್ರಯತ್ನಿಸಿದನು. ತಾನು ಕಂಪನಿಗೆ ನೀಡುವ ಸಹಾಯಕ್ಕೆ ಪ್ರತಿಫಲವಾಗಿ ಉತ್ತರದ ತನ್ನ ಯುದ್ಧಗಳಿಗೆ ಕಂಪನಿ ಸಹಾಯ ಮಾಡಬೇಕೆಂದು ಸಿಂಧ್ಯಾನ ಅಭಿಪ್ರಾಯವಿದ್ದಿತು. ಈ ಒಕ್ಕೂಟಕ್ಕೆ ಸೇರಲು ಹೋಳ್ಕರ್‌ಗೆ ಇಷ್ಟವಿಲ್ಲದೆ ಟಿಪ್ಪುವಿನ ವಿರುದ್ಧ ನಾನ ಮತ್ತು ನಿಜಾಮರು ಸೇರಿಕೊಳ್ಳವುದನ್ನು ಹೋಳ್ಕರ್ ವಿರೋಧಿಸಿದನು. ತಮ್ಮ ನಾಯಕನ ವಿರುದ್ಧವಾಗಿ ದಂಗೆಯೇಳುವಂತೆ ಮಲಬಾರಿನ ಪಾಳೆಯಗಾರರಿಗೆ ಪ್ರಚೋದನೆಯನ್ನು ನೀಡಿ, ಕೊಚ್ಚಿಯ ರಾಜನೊಂದಿಗೆ ಒಂದು ಒಪ್ಪಂದವನ್ನು ಮಾಡಿಕೊಂಡರು. ಟಿಪ್ಪುವಿನ ವಿರುದ್ಧವಾಗಿ ಇಂಗ್ಲೀಷರೊಂದಿಗೆ ಸೇರಲು ಕಣ್ಣಾನೂರಿನ ಬೀಬಿಯನ್ನೂ, ಕೊಡಗಿನ ರಾಜನನ್ನೂ ಮತ್ತು ಮೈಸೂರಿನ ರಾಣಿಯನ್ನೂ ಪ್ರೋತ್ಸಾಹಿಸಿ ಪಿತೂರಿಯನ್ನು ಮಾಡಲಾಯಿತು.[೬೯]

ಯಾವ ಪಕ್ಷವೂ ಕೂಡ ತಿರುವಾಂಕೂರಿನ ರಕ್ಷಣಾ ನೆಲೆಗಳ ಮೇಲೆ ಟಿಪ್ಪು ದಾಳಿಮಾಡಿ ಯುದ್ಧಕ್ಕೆ ತಕ್ಷಣದ ಕಾರಣಗಳನ್ನೊದಗಿಸಿದ ಅಂಶವನ್ನು ನಿಜವಾಗಿಯೂ ಗಮನಿಸಿರಲಿಲ್ಲ. ಈ ಯುದ್ಧದಲ್ಲಿ ಕಂಪನಿಗೆ ಮಿಲಿಟರಿ ದೃಷ್ಠಿಯಿಂದ ಅವರಿಂದ ಯಾವ ಉಪಯೋಗವೂ ಇಲ್ಲದೆ ಟಿಪ್ಪುವಿನ ಜೊತೆ ಸೇರದೆ ಇರುವುದೇ ಅವರಿಂದಾಗಬಹುದಾದ ಮುಖ್ಯ ಲಾಭವಾಗಿತ್ತು. ಕ್ರಿ.ಶ. ೧೭೯೦ ಮೇ ೨೪ರಂದು ಯುದ್ಧ ಆರಂಭವಾದಾಗ ಕರ್ನಾಟಿಕ್ ಪ್ರದೇಶದಲ್ಲಿದ್ದ ಘಜಲ್ ಹಟ್ಟಿ ಕಣಿವೆ ಮಾರ್ಗದ ಮೇಲೆ ಟಿಪ್ಪು ತಕ್ಷಣವೇ ಮುತ್ತಿದನು. ಈ ಮೂಲಕ ಮೆಡೋಸ್ ಮತ್ತು ಮ್ಯಾಕ್ಸ್‌ವೆಲ್ಲರು ಮೈಸೂರಿನ ಮೇಲೆ ಆಕ್ರಮಣ ಮಾಡುವುದನ್ನು ತಪ್ಪಿಸಿದನು. ಯುದ್ಧದ ಮೊದಲ ಘಟ್ಟದಲ್ಲಿ ಮಿತ್ರಕೂಟದ ಆಕ್ರಮಣವನ್ನು ತಡೆಯುವಲ್ಲಿ ಜಯಶೀಲನಾದನು. ತಾನು ಮೂರು ವರ್ಷಗಳಿಂದ ಉಳಿಸಿದ್ದ ಸಂಪತ್ತನ್ನು ಯುದ್ಧವು ನುಂಗಿಹಾಕಿತ್ತೆಂದು ಕಾರನ್‌ವಾಲೀಸನು ತಿಳಿಸಿದನು. ಇದರಿಂದ ಯುದ್ಧದ ನಷ್ಟವನ್ನು ತುಂಬಿಕೊಳ್ಳಲು ಮೈಸೂರಿನ ಮೇಲೆ ಆಕ್ರಮಣ ಮಾಡಲು ಪ್ರಯತ್ನಿಸಿದ. ಆದರೆ ಟಿಪ್ಪುವು ಇಂಗ್ಲೀಷರ ಸೇನೆಗಿದ್ದ ಆಹಾರ ಮತ್ತು ಸಾರಿಗೆ ಸಂಪರ್ಕಗಳನ್ನು ಜನರಲ್ ಮೆಡೋಸ್‌ನ ನೇತೃತ್ವದಲ್ಲಿದ್ದ ಪೂರೈಕೆಗಳನ್ನು ಕಡಿದು ಹಾಕಿದನು.

ಕ್ರಿ.ಶ.೧೭೯೦ರ ಈ ರಣರಂಗದ ಹೋರಾಟಗಳು ಇಂಗ್ಲೀಷರಿಗೆ ಅತೃಪ್ತಿಕರವಾದ ರೀತಿಯಲ್ಲಿ ಮುಕ್ತಾಯಗೊಂಡಿತು.[೨೦]

ಟಿಪ್ಪು ಹೋದೆಡೆಯಲ್ಲೆಲ್ಲಾ ಮೆಡೋಸನು ಹಿಂಬಾಲಿಸುವಂತಾಯಿತು. ಪರಿಸ್ಥಿತಿಯು ಹದಗೆಟ್ಟಾಗ ಕಾರನ್‌ವಾಲೀಸನೇ ಸೇನೆಯ ನಾಯಕತ್ವವನ್ನು ವಹಿಸಿಕೊಂಡನು. ಇದರ ಪರಿಣಾಮವಾಗಿ ಕಾರನ್‌ವಾಲೀಸನು ಮೈಸೂರಿನತ್ತ ಸೈನ್ಯದೊಡನೆ ಸಾಗಿದನು. ಮಿತ್ರಸೇನೆಗಳು ಬೆಂಗಳೂರಿನ ಬಳಿ ಸಂಧಿಸುವಂತೆ ಸೂಚನೆ ನೀಡಿದನು. ಟಿಪ್ಪು ಪಾಂಡಿಚೇರಿಯ ಬಳಿಯಿದ್ದಾಗ ಕಾರನ್‌ವಾಲೀಸನು ಬೆಂಗಳೂರಿಗೆ ಬಂದನು. ತನ್ನ ಮುಖ್ಯವಾದ ಕೋಟೆಯನ್ನು ರಕ್ಷಿಸಲು ಟಿಪ್ಪು ಧಾವಿಸಿದಾಗಲೂ ಯಾವುದೇ ರೀತಿಯ ಪ್ರಯೋಜನವಾಗಲಿಲ್ಲ. ಈ ಜಯದಿಂದಾಗಿ ನಿಜಾಮನು ಮತ್ತು ಮರಾಠರು ಇಂಗ್ಲಿಷರನ್ನು ಸೇರಿದರು. ಮಿತ್ರಸೇನೆಯಲ್ಲಿ ಹೆಚ್ಚಿನ ಸೈನಿಕರಿದ್ದರೂ ಯಾವುದೇ ರೀತಿಯ ಉಪಯೋಗವಾಗಲಿಲ್ಲ. ಮೈಸೂರಿನ ಉತ್ತರಭಾಗಕ್ಕಿದ್ದ ಅನೇಕ ಕೋಟೆಗಳನ್ನು ಹಿಡಿಯುವುದರಲ್ಲೇ ಅವರು ತಮ್ಮ ಅವಧಿಯನ್ನು ಕಳೆದು ಶ್ರಮವನ್ನೆಲ್ಲಾ ಅದಕ್ಕಾಗಿಯೇ ವಿನಿಯೋಗಿಸಿದರು. ಕ್ರಿ.ಶ. ೧೭೯೧ರ ಮಧ್ಯಭಾಗದಲ್ಲಿ ವಾಯುಗುಣದ ವೈಪರೀತ್ಯದಿಂದಲೂ, ಆಯಾಸದಿಂದಲೂ, ಸಾಂಕ್ರಾಮಿಕ ರೋಗಗಳಿಂದಲೂ ಮತ್ತು ಆಹಾರ ಪದಾರ್ಥಗಳ ಅಭಾವದಿಂದಲೂ ಇಂಗ್ಲಿಷ್ ಸೇನೆಯು ಹಿಮ್ಮೆಟ್ಟಿತು.[೨೧]

ಕ್ರಿ.ಶ.೧೭೯೧ರಲ್ಲಿ ೧೦೦ ಆನೆಗಳು, ೬,೦೦೦ ಎತ್ತುಗಳು ಮತ್ತು ಸಾವಿರಾರು ಜನ ಕೂಲಿಗಳು ದವಸಧಾನ್ಯಗಳನ್ನು ಮತ್ತು ಇತರ ವಸ್ತುಗಳನ್ನೂ ತಂದು ತುಂಬಿದರು. ೩೧ ದಿನಗಳ ಕಾಲ ಮುತ್ತಿಗೆಹಾಕಿ ನಂದಿದುರ್ಗವನ್ನು ವಶಪಡಿಸಿಕೊಳ್ಳಲಾಯಿತು. ಅಲ್ಲಿನ ಕಾವಲು ಪಡೆಯು ಬಲವಾದ ಪ್ರತಿರೋಧವನ್ನು ನೀಡಿತು. ಕಮ್ರುದ್ದೀನ್ ಖಾನನು ಬಾಕರ್ ಸಾಹೇಬನನ್ನು ಕೃಷ್ಣಗಿರಿಗೆ ಬೆಂಬಲ ಸೇನೆಯಾಗಿ ಮಾತ್ರವಲ್ಲದೆ ಇಂಗ್ಲಿಷರ ಸರಕು ಪೂರೈಕೆಯ ಮಾರ್ಗವನ್ನು ತಡೆಯುವ ಸಲುವಾಗಿ ಕಳುಹಿಸಲ್ಪಟ್ಟನು. ಸರಕುಸಾಗಣೆಯ ಮಾರ್ಗವನ್ನು ರಕ್ಷಿಸಲೆಂದು ಮೇಜರ್ ಮ್ಯಾಕ್ಸ್‌ವೆಲ್‌ನನ್ನು ಬ್ರಿಟಿಷರು ಕಳುಹಿಸಿದರು. ಆದರೆ ಬಾಕರನು ಕರ್ನಾಟಕವನ್ನು ಪ್ರವೇಶಿಸಿ ಪೋರ್ಟ್ ಸೇಂಟ್ ಜಾರ್ಜ್ ಬಾಗಿಲಿಗೇ ತಲುಪಿದನು. ಅಕ್ಕಪಕ್ಕದ ಹಲವಾರು ಹಳ್ಳಿಗಳನ್ನು ಸುಟ್ಟು ಅಪಾರವಾದ ಪ್ರಮಾಣದಲ್ಲಿ ಕೊಳ್ಳೆಹೊಡೆದನು. ಬಾರಾಮಹಲ್ ಪ್ರದೇಶದಲ್ಲಿ ಟಿಪ್ಪುವಿನ ಸ್ವಾದೀನದಲ್ಲಿದ್ದ ಮುಖ್ಯವಾದ ಸ್ಥಳ ಅದೊಂದೇ. ಕಾರ್ನ್‌ವಾಲೀಸನು ಬೆಂಗಳೂರಿಗೂ, ಶ್ರೀರಂಗಪಟ್ಟಣಕ್ಕೂ ನಡುವೆ ಇದ್ದ ಎಲ್ಲಾ ಕೋಟೆಗಳನ್ನು ಗೆದ್ದು ಯುದ್ಧಸಾಮಾಗ್ರಿಗಳ ಪೂರೈಕೆಯ ಮಾರ್ಗವು ಕಠಿಣವಾಗುವಂತೆ ಮಾಡಿದನು. ಸ್ಟುವರ್ಟ್‌ನಿಗೆ ಬಹಳ ಬಲಿಷ್ಠವಾದ ಸಾವನದುರ್ಗವನ್ನು ವಶಮಾಡಿಕೊಳ್ಳಬೇಕೆಂದು ಕ್ರಿ.ಶ.೧೭೯೧ರಲ್ಲಿ ಆಜ್ಞಾಪಿಸಲಾಯಿತು.[೨೨] ಕಾರ್ನ್‌ವಾಲೀಸನೇ ಕೋಟೆಯಿಂದ ಐದುಮೈಲು ದೂರದಲ್ಲಿ ಶಿಬಿರಹಾಕಿ ನಿಂತನು. ಬಹು ಪ್ರಯಾಸದಿಂದ ದುರ್ಗವನ್ನು ವಶಮಾಡಿಕೊಂಡರು. ಆಮೇಲೆ ಕರ್ನಲ್ ಸ್ಟುವರ್ಟನು ಹುತ್ರಿದುರ್ಗ ಶಿವನಗಿರಿ ಮತ್ತು ರಾಮಗಿರಿದುರ್ಗಗಳನ್ನು

ಗೆದ್ದನು. ಈ ಮೊದಲೇ ತಿಳಿಸಿದಂತೆ ಕ್ರಿ.ಶ.೧೭೯೨ರಲ್ಲಿನ ಜನವರಿ ೨ರಂದು ಸರಕುಗಳನ್ನು ಹೊತ್ತ ೫೦,೦೦೦ ಎತ್ತುಗಳ ದೊಡ್ಡಮೊತ್ತದ ತಂಡವು ಮದರಾಸಿನಿಂದ ಬೆಂಗಳೂರಿಗೆ ತಲುಪಿತು. ಕ್ಯಾಪ್ಟನ್ ರೀಡನು ಒಂದು ಸೇನಾ ತುಕಡಿಯನ್ನು ಸಿಕಂದರ್ ಝಾನ ರಕ್ಷಣೆಗಾಗಿ ದಕ್ಷಣಕ್ಕೆ ಚಲಿಸಿ ಮಾಗಡಿಯ ಬಳಿಯಲ್ಲಿ ಕಾರನ್‌ವಾಲೀಸನನ್ನು ಸೇರಿಕೊಂಡನು. ಮರಾಠರ ಸೇವೆಯು ಸಿರಾ ಪ್ರಾಂತ್ಯದಲ್ಲಿ ಕಾರ್ಯಚರಣೆಯಲ್ಲಿ ನಿರತವಾಗಿತ್ತು. ಮರಾಠರ ಬಾವು ನಿಜಗಲ್ಲನ್ನು ಹಿಡಿದನು. ದೇವರಾಯನ ದುರ್ಗವನ್ನು ಗೆಲ್ಲುವ ಹಂಬಲವಿದ್ದರೂ ಸಹ ಸಿರಾ ಕಡೆಗೆ ವಾಪಾಸ್ಸಾಗಬೇಕಾಯಿತು. ಚಿತ್ರದುರ್ಗ ಕೋಟೆಯನ್ನು ಹಿಡಿಯಬಯಸಿದ ಬಾವು ಚಂದ್ರಗಿರಿಗೆ ಸಾಗಿ ಅಲ್ಲಿಂದ ಬಿದನೂರಿಗೆ ಹೊರಟನು. ಈ ಮಾರ್ಗದಲ್ಲಿ ಹೊಳೆಹೊನ್ನೂರನ್ನು ವಶಮಾಡಿಕೊಂಡು ಶಿವಮೊಗ್ಗದ ಕಡೆ ಪ್ರಯಾಣವನ್ನು ಬೆಳೆಸಿದನು.[೭೪]

ಟಿಪ್ಪುವಿನ ನೆಲೆಗಳು ಎಷ್ಟು ಬಲವಾಗಿದ್ದವೆಂದರೆ ಕಾರನ್‌ವಾಲೀಸನು ಹಗಲು ಹೊತ್ತಿನಲ್ಲಿ ಆಕ್ರಮಣ ಮಾಡಲು ಸಾಧ್ಯವಾಗದೆ ಇರುಳಿನಲ್ಲಿ ಮಿಂಚಿನದಾಳಿ ಮಾಡಬೇಕೆಂದು ನಿರ್ಧರಿಸಿದನು. ಇಂಗ್ಲಿಷರು ಟಿಪ್ಪುವಿನ ಕೋಟೆಯ ಸ್ಥಳ ಪರಿಶೋಧನೆ ಮಾಡಿದರು. ಕಾರನ್‌ವಾಲೀಸನು ಮರಾಠರ ಭಾವು ಮತ್ತು ಅಬರ್‌ಕಾಂದಿ ಬರುವವರೆಗೂ ಕಾರನ್‌ವಾಲೀಸನು ಮುಖ್ಯ ಕಾರ್ಯಚಣೆಗೆ ಮಾಡುವುದಿಲ್ಲವೆಂದು ಟಿಪ್ಪು ಭಾವಿಸಿದ್ದನು. ಆದರೆ ಅದೇ ದಿನ ರಾತ್ರಿ ಕಾರನ್‌ವಾಲೀಸನು ಅನಿರೀಕ್ಷಿತ ದಾಳಿನಡೆಸಿದನು. ಈ ದಾಳಿಯು ಎಷ್ಟು ರಹಸ್ಯವಾಗಿತ್ತೆಂದರೆ ಯಾರಿಗೂ ತಿಳಿಯದ್ದಾಗಿದ್ದು (ಮಿತ್ರಪಕ್ಷಗಳಿಗೆ) ಸೇನೆಯ ಮುಖ್ಯ ಅಧಿಕಾರಿಗಳಿಗೆ ಮಾತ್ರ ಈ ವಿಷಯವು ಅರಿವಿದ್ದಿತು. ಆಂಗ್ಲರ ಸೇನೆಯನ್ನು ಮೂರು ವಿಭಾಗಗಳಾಗಿ ಒಡೆಯಲಾಗಿದ್ದಿತು. ೬೦೦ ಯೂರೋಪಿಯನ್ನರು, ಸುಮಾರು ೨,೪೦೦ ಭಾರತೀಯ ಸಿಪಾಯಿಗಳಿದ್ದ ಬಲಭಾಗವನ್ನು ಮೆಡೋಸನು ನಿರ್ವಹಿಸುತ್ತಿದ್ದವು.

ಸುಮಾರು ೧,೪೦೦ ಯುರೋಪಿಯನ್ನರು ಮತ್ತು ಭಾರತೀಯ ಸಿಪಾಯಿಗಳನ್ನು ಹೊಂದಿದ್ದ ಮಧ್ಯದ ತಂಡವನ್ನು ಸ್ಟುವರ್ಟ್‌ನು ನಿರ್ವಹಿಸುತ್ತಿದ್ದರೆ ಎಡಭಾಗದ ೫೦೦ ಯೂರೋಪಿಯನ್ನರು ಮತ್ತು ೧,೨೦೦ ಭಾರತೀಯ ಸಿಪಾಯಿಗಳ ತಂಡಕ್ಕೆ ಮ್ಯಾಕ್ಸ್‌ವೆಲ್ ನಾಯಕನಾಗಿದ್ದನು. ಇದು ರಾತ್ರಿಯ ವೇಳೆಯ ಆಕ್ರಮಣವಾಗಿದ್ದರಿಂದ ಫಿರಂಗಿದಳ ಮತ್ತು ಅಶ್ವದಳಗಳನ್ನು ಕಳಿಸಲಿಲ್ಲ.[೭೫] ಬದಲಾಗಿ ಬಲ ಮತ್ತು ಮಧ್ಯದ ಪಡೆಗಳು ನದಿಯನ್ನು ದಾಟಿ ಕೋಟೆಯನ್ನು ಮುತ್ತಲು ಆಜ್ಞೆ ಮಾಡಲಾಯಿತು. ಬೆಳದಿಂಗಳ ರಾತ್ರಿಯಾದ್ದರಿಂದ ಆಕ್ರಮಣ ಮಾಡಲಾಯಿತು. ರಾತ್ರಿ ೧೧ ಗಂಟೆಗೆ ಮ್ಯಾಕ್ಸ್‌ವೆಲ್‌ನು ನದಿಯನ್ನು ದಾಟಿ ಈದ್ಗಾದ ಹೊರಕೋಟೆಯ ಕಡೆನುಗ್ಗಿದಾಗ ಸಯ್ಯದ್ ಹಮೀದನು ಈ ಪ್ರದೇಶವನ್ನು ರಕ್ಷಿಸುತ್ತಿದ್ದನು. ಬಲವಾದ ಕೋಟೆಯ ರಕ್ಷಣೆಯಿದ್ದ ಪ್ರದೇಶದಲ್ಲಿ ಉಗ್ರವಾದ ಕಾಳಗ ನಡೆಯಿತು. ಸಯ್ಯದ್ ಹಮೀದ್ ಇತರೆ ೪೦೦ ಜನರೊಂದಿಗೆ ಯುದ್ಧದಲ್ಲಿ ಸತ್ತನು. ಮೂರು ತುಕಡಿಗಳಿದ್ದ ಸೈನ್ಯವನ್ನು ಟಿಪ್ಪುವಿನ ಅಶ್ವ ಪಡೆಯೊಂದು ಎದುರಿಸಿತು. ಮುಂದೆ

ಬರುತ್ತಿದ್ದ ಬ್ರಿಟಿಷ್ ಪಡೆಯೊಂದು ಎದುರಿಸಿತು. ಮುಂದೆ ಬರುತ್ತಿದ್ದ ಬ್ರಿಟಿಷ್ ಪಡೆಯ ಮೇಲೆ ಟಿಪ್ಪುವಿನ ಸೈನಿಕರು ರಾಕೆಟ್‌ಗಳನ್ನು ಹಾರಿಸಿದರು. ಫಿರಂಗಿಗಳು ಮತ್ತು ಬಂದೂಕುಗಳಿಂದ ಗುಂಡುಗಳನ್ನು ಹಾರಿಸಿದರು. ಆದರೂ ಬ್ರಿಟಿಷ್ ಸೈನ್ಯವು ಕಾವೇರಿ ನದಿಯನ್ನು ದಾಟಿ ಗಂಜಾಂ ಕಡೆಗೆ ದಾಟುವಲ್ಲಿ ಸಫಲವಾಯಿತು. ಈ ಅನಿರೀಕ್ಷಿತ ದಾಳಿಯು ಶೀಘ್ರವಾದ ಯೋಜನಾಬದ್ಧವಾದಂತಹ ಆಕ್ರಮಣವಾಗಿದ್ದಿತು.[೭೫] ಟಿಪ್ಪುವು ನಿರೀಕ್ಷಿಸದ ರೀತಿಯಲ್ಲಿ ಕಾರ್ನ್‌ವಾಲೀಸನು ದಾಳಿಮಾಡಿದ್ದರಿಂದ ಟಿಪ್ಪುವಿನ ಸೈನ್ಯ ಇನ್ನೂ ಯುದ್ಧಕ್ಕೆ ಸಿದ್ಧವಾಗಿರಲಿಲ್ಲ. ದ್ವೀಪದಲ್ಲಿ ಹಲವಾರು ಕಾವಲು ಠಾಣೆಗಳಿದ್ದವು. ಆದರೂ ಅವು ಬ್ರಿಟಿಷರ ರಾತ್ರಿ ದಾಳಿಗಳಿಂದ ಕಂಗೆಡುವಂತಾಯಿತು. ಅಲ್ಲದೆ ಕರಿಘಟ್ಟದ ಬಳಿ ನಡೆದ ಯುದ್ಧದಲ್ಲಿ ಟಿಪ್ಪುವಿನ ಸೈನಿಕರು ಹಿನ್ನಡೆಯಬೇಕಾಯಿತು.

ಶ್ರೀರಂಗಪಟ್ಟಣದ ಮೇಲಿನ ಇರುಳು ದಾಳಿಯು ಎಲ್ಲಾ ವಲಯಗಳಲ್ಲೂ ಯಶಸ್ವಿಯಾಯಿತು. ಇಂಗ್ಲಿಷರು ದ್ವೀಪದ ಪೂರ್ವದಿಕ್ಕಿನಲ್ಲಿಯೇ ಬೀಡುಬಿಟ್ಟಿದ್ದು ಆಂಗ್ಲರ ಸೈನ್ಯದಲ್ಲಿ ಶಿಸ್ತು, ಚುರುಕಿನ ಕಾರ್ಯಗತಿಯು ಕಾರ್ನವಾಲೀಸನಿಗೆ ಕೀರ್ತಿಯನ್ನು ತಂದಿತು. ದ್ವೀಪದಲ್ಲಿ ಹಲವಾರು ಕಾವಲು ಪಡೆಯ ಠಾಣೆಗಳಿದ್ದರೂ ಸಹ ರಾತ್ರಿಯ ಆಕ್ರಮಣದ ಸಂದರ್ಭಗಳಲ್ಲಿ ಅಪಾರವಾದ ಸಾವು ನೋವುಗಳಾದವು. ಆದರೂ ಟಿಪ್ಪೂ ಸೈನಿಕರು ಸಾಹಸಗಳಿಂದ ಹೋರಾಡಿದರು. ಗಂಜಾ ಎದುರಿನ ಲಾಲ್‌ಭಾಗ್ ಬಳಿ ಜನರಲ್ ಸ್ಟುಯರ್ಟ್‌ನ ವಿರುದ್ಧ ಕಾಳಗ ನಡೆಯಿತು. ಟಿಪ್ಪುವಿನ ಸೈನಿಕರು ಹಿನ್ನಡೆಯಬೇಕಾಯಿತು. ಪ್ರೆಂಚ್ ದಳಗಳು ಮೂರನೆಯ ಪ್ರಯತ್ನವನ್ನು ಮಾಡಿದವು. ಸಂಜೆಯ ವೇಳೆಗೆ ಟಿಪ್ಪು ತನ್ನ ಉತ್ತರದಿಕ್ಕಿನ ಎಲ್ಲಾ ನೆಲೆಗಳನ್ನು ಬಿಟ್ಟುಕೊಡಬೇಕಾಯಿತು. ಯುದ್ಧದಲ್ಲಿ ಸತ್ತವರು ಮತ್ತು ಗಾಯಗೊಂಡವರ ಸಂಖ್ಯೆ ಆಂಗ್ಲರ ಪಡೆಯಲ್ಲಿ ೧,೫೦೦ ಜನರಾದರೆ, ಟಿಪ್ಪುವಿನ ಕಡೆ ಸುಮಾರು ೨,೦೦೦ಕ್ಕಿಂತಲೂ ಹೆಚ್ಚು ಸೈನಿಕರು ಸಾವನ್ನಪ್ಪಿದರು. ಈ ಮಧ್ಯೆ ೫೭ ಜನ ಯೂರೋಪಿಯನ್ನರು ಟಿಪ್ಪುವಿನ ಸೈನ್ಯವನ್ನು ಬಿಟ್ಟು ಇಂಗ್ಲಿಷರ ಸೇನೆಯನ್ನು ಸೇರಿದರು.[೭೬] ಅಂಬರ್‌ಕಾಂಬಿಯು ಕಣ್ಣಾನೂರಿನಿಂದ ಯಡತೊರೆ ಕಡೆಗೆ ಬಂದರೆ ಮುನ್ನಡೆಯುವ ಪ್ರಯತ್ನ ಮಾಡಿದಾಗ ಟಿಪ್ಪುವು ತನ್ನ ಮಗ ಫತ್ತೇಹೈದರನನ್ನು ಕಳುಹಿಸಿದನು. ಪತ್ತೇಹೈದರನು ಅಂಬರಕಾಂಬಿಯನ್ನು ಸೋಲಿಸಿ ಅವನ ಯುದ್ಧ ಸಾಮಾಗ್ರಿಗಳನ್ನು ವಶಮಾಡಿಕೊಂಡನು. ಈ ಹೋರಾಟದಲ್ಲಿ ಅಂಬರಕಾಂಬಿಯು ೨,೦೦೦ ಜನ ಯೂರೋಪಿಯನ್ನರು ೪,೦೦೦ ಜನ ಭಾರತೀಯ ಸೈನಿಕರನ್ನು ತನ್ನ ಜೊತೆ ಕರೆತಂದಿದ್ದನು.

ಒಕ್ಕೂಟ ಸೈನ್ಯವು ಕೋಟೆಯ ಉತ್ತರ ಭಾಗವನ್ನು ಆಕ್ರಮಣದ ಮುಖ್ಯ ಕಾರ್ಯಾಚರಣೆಯ ಭಾಗವನ್ನಾಗಿ ಆಯ್ಕೆಮಾಡಿಕೊಂಡಿತ್ತು. ಮೇಜರ್ ಡಾರ್ಲಿಂಪಲ್ ಗುಪ್ತವಾಗಿ ಮಧ್ಯರಾತ್ರಿಗಿಂತ ಮೊದಲು ಮೈಸೂರು ಸೈನ್ಯದ ಶಿಬಿರವನ್ನು ಪ್ರವೇಶಿಸಿದನು. ಅಂಬರಕಾಂಬಿಯು ದಕ್ಷಿಣ ದಿಕ್ಕಿನಿಂದ ದಾಳಿಮಾಡಲು ಪ್ರಯತ್ನಿಸಿದನು. ಮುಖ್ಯವಾದ ಹೊರಗೋಡೆಯೊಂದನ್ನು ಬ್ರಿಟಿಷರು

ವಶಪಡಿಸಿಕೊಂಡು ಕೋಟೆಯನ್ನು ಒಡೆಯಲು ಭತ್ತೇರಿಯನ್ನು ನಿರ್ಮಿಸಿದ ವೇಳೆಗಾಗಲೇ ಟಿಪ್ಪುವು ಸೋಲನ್ನು ಒಪ್ಪಿಕೊಳ್ಳಬೇಕಾಯಿತು.[೭೭] ಈ ವೇಳೆಗಾಗಲೇ ಮರಾಠರು ಮತ್ತು ಹೈದರಾಬಾದಿನ ನಿಜಾಮನ ನಡುವೆ ಬಿಕ್ಕಟ್ಟು ಉಲ್ಬಣವಾಯಿತು. ನಿಜಾಮನು ಕರ್ನೂಲು ಮತ್ತಿತರ ಗ್ರಾಮಗಳ ಮೇಲೆ ಕಾಳಗಕ್ಕೆ ಹೊಂಚುಹಾಕಿದ್ದು. ಇಂಗ್ಲಿಷರು ನಡೆಸಿದ ಒಳಸಂಚುಗಳನ್ನು ಕುರಿತು ಟಿಪ್ಪುವಿನ ಜೊತೆಯಲ್ಲಿ ಮರಾಠರು ಒಪ್ಪಂದ ಮಾಡಿಕೊಳ್ಳಲು ಒಲವನ್ನು ತೋರಿದರು. ಮೂರನೇ ಆಂಗ್ಲೋ-ಮೈಸೂರು ಯುದ್ಧವು ಶ್ರೀರಂಗಪಟ್ಟಣದ ಒಪ್ಪಂದದೊಂದಿಗೆ ಮುಕ್ತಾಯವಾಯಿತು. ಟಿಪ್ಪುವಿನ ಮೈತ್ರಿ ಪ್ರಯತ್ನವು ಮೂರನೇಯ ಆಂಗ್ಲೋ-ಮೈಸೂರು ಯುದ್ಧದ ನಂತರ ಹೈದರಾಬಾದಿನಲ್ಲಿದ್ದ ಪ್ರೆಂಚರ ಮೇಲೆ ಅವಲಂಭಿತವಾಗಿತ್ತು. ಪ್ರೆಂಚರ ಸೇನಾ ಮುಖ್ಯಸ್ತನಾಗಿದ್ದ ರೇಮಂಡನ ಸೈನ್ಯವು ಶಿಸ್ತುಬದ್ಧವಾದ ಸಮರ್ಥವಾದ ೧೪,೦೦೦ ಸೈನಿಕರನ್ನು ಹೊಂದಿದ್ದ ದೊಡ್ಡ ಸೈನ್ಯವಾಗಿತ್ತು. ಕ್ರಿ.ಶ. ೧೭೮೯ರಲ್ಲಿ ಎರಡು ಬೆಟಾಲಿಯನ್‌ಗಳಿದ್ದ ಸೈನ್ಯವು ಕ್ರಿ.ಶ.೧೭೯೭ರಲ್ಲಿ ಇಪ್ಪತ್ತ ಮೂರು ಬೇಟಾಲಿಯನ್ ಆಗಿತ್ತು. ಅದರಲ್ಲಿ ೧೨ ಫಿರಂಗಗಳಿದ್ದವು. ರೇಮಂಡನು ಹೈದರಾಬಾದಿನ ಆಸ್ಥಾನದಲ್ಲೂ ತನ್ನ ರಾಜಕೀಯ ಪ್ರಭಾವವನ್ನು ಹೊಂದಿದ್ದು ಅವನ ಸೇನೆಯ ಖರ್ಚನ್ನು ನಿರ್ವಹಿಸುವ ಸಲುವಾಗಿ ರಾಜ್ಯದ ಒಂದು ದೊಡ್ಡ ಭಾಗವನ್ನೇ ಅವನಿಗೆ ನೀಡಲಾಗಿತ್ತು. ಅಲ್ಲದೆ ಸಾಮಾನ್ಯ ವಿಧ್ಯಮಾನವಾಗಿದ್ದ ಇಂಗ್ಲಿಷ್ ಸೇನೆಯು ಅಷ್ಟೇನೂ ಜನಪ್ರಿಯವಾಗಿರಲಿಲ್ಲ. ಅವರ ಶಿಬಿರದಲ್ಲಿ ಒಂದು ಸಿಪಾಯಿ ದಂಗೆಯೂ ನಡೆಯಿತು. ನಿಜಾಮನ ಸಂಪನ್ಮೂಲಗಳು ಸಲೀಸಾಗಿ ಪ್ರೆಂಚ್ ತಂಡಕ್ಕೆ ಹರಿದು ಹೋಗುತ್ತಿದ್ದವು. ಜಾನ್‌ಶೋರನು ಪ್ರೆಂಚರನ್ನು ಒಡನೆಯೇ ತಮ್ಮ ರಾಜ್ಯದಿಂದ ಹೊರಹಾಕಬೇಕೆಂದು ತಿಳಿಸಿದನು. ಯುದ್ಧಾನಂತರ ಗಡಿಗಳ ಹೊಂದಾಣಿಕೆಯ ಬಗೆಗೆ ಹಾಗೂ ಒಪ್ಪಂದಗಳ ಷರತ್ತುಗಳು ವಿವಾದ ಮತ್ತು ಭಿನ್ನಾಭಿಪ್ರಾಯಗಳನ್ನು ಎಬ್ಬಿಸಿದವು. ಅದರಲ್ಲಿ ಮುಖ್ಯವಾದವೇಂದರೆ ಮರಾಠರ ಪ್ರಾಬಲ್ಯ ಹೆಚ್ಚಾದವು ನಿಜಾಮನ ಸಂಬಂಧಗಳು ಹದಗೆಟ್ಟಿದ್ದು ನಿಜಾಮನನ್ನು ಇಂಗ್ಲಿಷರು ವಂಚಿಸಿದ್ದೇ ಪ್ರಮುಖ ಕಾರಣವಾಗಿತ್ತು. ಹೈದರಾಬಾದಿನಲ್ಲಿ ಪ್ರೆಂಚ್‌ಸೇನೆಯ ಪುನರ್ ಸ್ಥಾಪನೆಯು ಪುಣೆಯ ಆಸ್ಥಾನದಲ್ಲಿ ಸಿಂಧಿಯನ ಪ್ರಭಾವ ಅಧಿಕವಾದದ್ದು ಪೇಶ್ವೆಯ ಮರಣ ಹಾಗೂ ಪುಣೆಯ ವಾರಸುದಾರಿಕೆಯ ಕಲಹ ಇತ್ಯಾದಿ ಅಂಶಗಳು ಪ್ರೆಂಚರನ್ನು ಟಿಪ್ಪುವಿನ ಪರವಾಗಿ ೪ನೆಯ ಆಂಗ್ಲೋ ಮೈಸೂರು ಯುದ್ಧದಲ್ಲಿ ಭಾಗವಹಿಸಲು ಅವಕಾಶವನ್ನು ಒದಗಿಸಿದವು.

ಟಿಪ್ಪು ಸುಲ್ತಾನನ ಕೊನೆಯ ಯುದ್ಧವಾದ ಕ್ರಿ.ಶ.೧೭೯೯ರ ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಸೈನ್ಯದಲ್ಲಿನ ಶಿಸ್ತು ಹಾಗೂ ಸೈನಿಕಶಕ್ತಿಗಳು ಶ್ರೀರಂಗಪಟ್ಟಣದ ಒಪ್ಪಂದದಿಂದಾಗಿ ಅಸ್ತವ್ಯಸ್ಥಗೊಂಡಿದ್ದವು. ಕೇವಲ ಟಿಪ್ಪು ಸುಲ್ತಾನ ಅಷ್ಟೇ ಅಲ್ಲದೆ ಭಾರತೀಯ ಇತರೆ ರಾಜರೂ ಸಹ ಸಣ್ಣದಾದ ಪ್ರೆಂಚ್ ಸೈನ್ಯದ ತುಕಡಿಯನ್ನು ತಮ್ಮ ಸೈನ್ಯದಲ್ಲಿ ನೆಲೆಗೊಳಿಸಿಕೊಂಡಿದ್ದರು. ನಾಲ್ಕನೇ ಆಂಗ್ಲೋ-ಮೈಸೂರು ಯುದ್ಧಕ್ಕೆ ಟಿಪ್ಪು ಸಕಲ ಸಿದ್ಧತೆಗಳನ್ನು ಮಾಡಿಕೊಂಡನು

ಪ್ರಮುಖವಾಗಿ ಟಿಪ್ಪುವಿನ ಮೇಲೆ ಯುದ್ಧ ಸಾರುವುದು. ಕರಾವಳಿಯಲ್ಲಿ ಇನ್ನೂ ಟಿಪ್ಪುವಿನ ವಶದಲ್ಲಿರುವ ನೆಲೆಗಳನ್ನು ತನ್ನ ವಶಮಾಡಿಕೊಳ್ಳುವುದು. ಟಿಪ್ಪುವಿನ ರಾಜಧಾನಿಯ ಮೇಲೆ ದಾಳಿಮಾಡಿ ಅವನು ಕರಾವಳಿ ಜಿಲ್ಲೆಗಳನ್ನು ಇಂಗ್ಲಿಷರಿಗೆ ಒಪ್ಪಿಸುವಂತೆ ಮಾಡುವುದು. ಟಿಪ್ಪುವು ಯುದ್ಧವೆಚ್ಚಗಳನ್ನು ಕಟ್ಟಿಕೊಡುವಂತೆ ಮಾಡುವುದು. ಅವನ ಆಸ್ಥಾನದಲ್ಲಿ ಖಾಯಂ ರೆಸಿಡೆಂಟನ್ನು ನೇಮಿಸುವು ತನ್ನ ಸೈನ್ಯದಲ್ಲಿರುವ ಫ್ರೆಂಚ್ ಸೈನಿಕರನ್ನೆಲ್ಲ ಹೊರಹಾಕುವಂತೆ ಮಾಡುವುದು ವೆಲ್ಲೆಸ್ಲಿಯ ಉದ್ದೇಶಗಳಾಗಿದ್ದವು. ಆದರೂ ಟಿಪ್ಪುವಿನ ಮೇಲೆ ತಕ್ಷಣವೇ ದಾಳಿ ಮಾಡಲಾಗಲಿಲ್ಲ. ಸಿವಿಲ್ ಮತ್ತು ಮಿಲಿಟರಿ ಅಧಿಕಾರಿಗಳು ಇನ್ನೂ ಯುದ್ಧಕ್ಕೆ ಸಿದ್ಧವಾಗಿರಲಿಲ್ಲ ಹ್ಯಾರಿಸ್ ಕೂಡ ಯುದ್ಧದ ಪರವಾಗಿರಲಿಲ್ಲ. ಕರ್ನಲ್ ಕ್ಲೋಸನು ಕೂಡ ಹೀಗೆ ದಿಡೀರನೆ ಯುದ್ಧ ಕೈಗೊಳ್ಳುವುದು ಅಪಾಯಕಾರಿಯಂದೂ ಅದು ಇಂಗ್ಲಿಷರನ್ನು ಅಂತರರಾಷ್ಟ್ರೀಯ ತೊಡಕುಗಳಲ್ಲಿ ಸಿಲುಕಿಸುವುದೆಂದು ಹೇಳಿದರು. ಮರಾಠರು ಮತ್ತು ನಿಜಾಮ ಬಹುದುರ್ಬಲವಾಗಿದ್ದು ಅವರಿಂದ ಯಾವುದೇ ನೆರವನ್ನು ನಿರೀಕ್ಷಿಸುವಂತಿರಲಿಲ್ಲ. ಫ್ರೆಂಚರ ಸೈನ್ಯ ಹೈದರಾಬಾದಿನಲ್ಲಿದ್ದು ಸರಕು ಸಾಮ್ರಾಗಿಗಳನ್ನು ಸಾಗಿಸಲು ಎತ್ತುಗಳನ್ನು ಸಂಗ್ರಹಿಸುವುದೇ ಬ್ರಿಟಿಷರಿಗೆ ಕಷ್ಟಕರವಾದ ಸಂಗತಿಯಾಗಿತ್ತು.[೭೮] ಟಿಪ್ಪುವಿನ ಬಳಿ ಉತ್ತಮವಾದ ಅಶ್ವದಳವಿದ್ದುದು. ವೆಲ್ಲೆಸ್ಲಿಯ ಕೂಡ ಯುದ್ಧ ನಿರ್ಧಾರವು ಕೆಲವು ತಿಂಗಳುಗಳು ಯುದ್ಧವನ್ನು ಮುಂದೂಡುವಂತೆ ಮಾಡಿತು. ಯುದ್ಧವನ್ನು ನಿವಾರಿಸುವುದೇ ತನ್ನ ಉದ್ದೇಶವಾಗಿದ್ದರೆ ಇಂಗ್ಲಿಷರು ತಕ್ಷಣವೇ ಯುದ್ಧ ಮಾಡಲು ಸಿದ್ಧರಾಗಿದ್ದಾರೆಂದು ತಿಳಿಸುವುದು ಉದ್ದೇಶವಿರಬಹುದು.

ಬ್ರಿಟಿಷರಿಗೆ ಬಂಗಾಳದಿಂದ ಹಣದ ಸಹಾಯ ಒದಗಿಬಂದಿತು. ಪಶ್ಚಿಮ ಕರಾವಳಿಯಲ್ಲಿ ಬ್ರಿಟಿಷ್ ನೌಕಾಪಡೆಯು ಕಟ್ಟೆಚ್ಚರದಿಂದ ಕಾವಲುಕಾಯುವಂತೆ ಆದೇಶಿಸಲಾಯಿತು. ವೆಲ್ಲೆಸ್ಲಿಯು ನಿಜಾಮ ಮತ್ತು ಮರಾಠರೊಡನೆ ಒಪ್ಪಂದವನ್ನು ಮಾಡಿಕೊಂಡನು. ಹೈದರಾಬಾದಿನಲ್ಲಿದ್ದ ಫ್ರೆಂಚ್ ಸೇನೆಯನ್ನು ವಿಸರ್ಜಿಸಲು ಕಾರಣವಾಗಿದ್ದು ರೇಮಂಡ್ಸ್‌ನ ಸಾವು ಪ್ರಮುಖ ಹೈದರಾಬಾದಿನ ನಿಜಾಮನನ್ನು ತಮ್ಮ ಕಡೆಯ ಒಕ್ಕೂಟಕ್ಕೆ ಸೇರಿಸಿಕೊಳ್ಳಲು ನೆರವಾಯಿತು. ಅಷ್ಟೇ ಅಲ್ಲದೆ ನಿಜಾಮನು ಸಹಾಯಕಸೈನ್ಯ ವ್ಯವಸ್ಥೆಗೆ ಒಳಪಟ್ಟಿದ್ದರಿಂದ ಅವನ ರಾಜ್ಯದ ರಕ್ಷಣೆಗಿಟ್ಟಿರುವ ಸಹಾಯಕ ಸೈನ್ಯದ ತುಕಡಿಗಳಿಗೆ ವೇತನ ಮತ್ತು ಖರ್ಚುಗಳನ್ನು ಭರಿಸಬೇಕಾಗಿತ್ತು. ಈ ಒಪ್ಪಂದದ ಪ್ರಕಾರ ಸುಮಾರು ೬,೦೦೦ರಷ್ಟು ಇಂಗ್ಲಿಷ್ ಸೇನಾತುಕಡಿಯನ್ನು ಹೈದರಾಬಾದಿನಲ್ಲಿ ನೆಲೆಗೊಳಿಸಲಾಯಿತು. ದಂಗೆಯ ನೆಪವೊಡ್ಡಿ ಫ್ರೆಂಚ್‌ದಳವನ್ನು ವಿಸರ್ಜಿಸಲಾಯಿತು. ಫ್ರೆಂಚ್ ಅಧಿಕಾರಿಗಳನ್ನು ಯುದ್ಧ ಖೈದಿಗಳನ್ನಾಗಿ ಬಂಧಿಸಿ ಕಲ್ಕತ್ತಾಗೆ ಕಳುಹಿಸಲಾಯಿತು. ಒಟ್ಟಿನಲ್ಲಿ ಯೂರೋಪಿಯನ್ನರ ಪಕ್ಷಪಾತ ಹಾಗೂ ಸ್ವಪ್ರತಿಷ್ಠೆಯ ವಿಚಾರವು ಭಾರತೀಯ ಸಂಸ್ಥಾನಗಳ ಹಾಗೂ ರಾಜಮನೆತನಗಳ ನಡುವೆ ದ್ವೇಷ ಜ್ವಾಲೆಯನ್ನು ಹೊತ್ತಿ ಉರಿಸುವ ಕುಲುಮೆಗಳಾಗಿ ಪರಿವರ್ತನೆಯಾದವು. ಅದರಲ್ಲಿ ಸಿಲುಕಿ ನಲುಗಿದ್ದು ಮಾತ್ರ ಸ್ಥಳೀಯ ರಾಜಮನೆತನಗಳು. ಪ್ರಮುಖವಾಗಿ ಮೈಸೂರು ಮರಾಠರು,

ಹೈದರಾಬಾದಿನ ನಿಜಾಮ ಆರ್ಕಾಟ್ ತಿರುಚನಾಪಳ್ಳಿಗಳು ದಕ್ಷಿಣ ಭಾರತದಲ್ಲಿ ಪ್ರಮುಖವಾದವು. ಈ ದೃಷ್ಟಿಕೋನವನ್ನು ಬಳಸಿಕೊಂಡಂತ ಬ್ರಿಟಿಷರು ಭಾರತದಂತಹ ಸಣ್ಣಪುಟ್ಟ ರಾಜಮನೆತನಗಳನ್ನು ಹೊಂದಿದ್ದ ವಿಶಾಲ ಭೂಪ್ರದೇಶವನ್ನು ಒಗ್ಗೂಡಿಸಲು ಭಾರತದಲ್ಲಿನ ಸ್ಥಳೀಯರಲ್ಲಿದ್ದ ಅನೈಕ್ಯತೆ, ಪ್ರತಿಕಾರಮನೋಭಾವ ಸ್ವಾರ್ಥ ಮೊದಲಾದ ಮನೋಭಾವಗಳನ್ನು ಬಳಸಿಕೊಂಡು ತಮ್ಮದೇ ಆದ ಒಡೆದು ಆಳುವಂತಹ ವ್ಯಾಪಾರ ನೀತಿಯನ್ನು ಬಳಸಿಕೊಂಡು ಬ್ರಿಟಿಷರು ಏಕಚಕ್ರಾಧಿಪತ್ಯಕ್ಕೆ ಒಳಪಡಿಸುವ ಪ್ರಯತ್ನವನ್ನು ಮಾಡಿದರು.

**೪.೨. ರಕ್ಷಣಾ ವಾಸ್ತುಶಿಲ್ಪ**

ಕೋಟೆಯು ರಾಜ್ಯವ್ಯವಸ್ಥೆಯ ಏಳು ಅಂಗಗಳಲ್ಲಿ ಒಂದು ಕೋಟೆಯನ್ನು ಸಂಸ್ಕೃತದಲ್ಲಿ ದುರ್ಗವೆಂದು ಕರೆಯಲಾಗುತ್ತಿತ್ತು. ಅವುಗಳಲ್ಲಿ ಗಿರಿದುರ್ಗ, ಜಲದುರ್ಗ, ವನದುರ್ಗ, ಸ್ಥಳದುರ್ಗಗಳು ಮುಖ್ಯವಾಗಿವೆ. ಕನ್ನಡದಲ್ಲಿ ಇವುಗಳನ್ನು ಬೆಟ್ಟಗೋಂಟೆ, ಕಡಲ್‌ಗೋಂಟೆ, ಪಳುಗೋಂಟೆ, ನೆಲಗೋಂಟೆಗಳೆಂದು ಕರೆಯಲಾಗಿದೆ. ಇದು ಮಧ್ಯಯುಗದ ಚರಿತ್ರೆಯಲ್ಲಿ ಮಹತ್ತರ ಪಾತ್ರ ವಹಿಸಿತ್ತು. ಪ್ರಾಚೀನ ರಾಜಕೀಯ ಚಿಂತಕರು ಕೋಟೆಯ ರಚನೆಗೆ ಹೆಚ್ಚು ಮಹತ್ವ ನೀಡಿದ್ದರು. ಕೋಟೆಯು ರಾಜಕೀಯವೆಂಬ ದೇಹದ ಪ್ರಮುಖ ಹಾಗೂ ಅನಿವಾರ್ಯ ಅಂಗವಾಗಿತ್ತು. ಯಾವುದೇ ರಾಜ್ಯದ ರಾಜಧಾನಿಯು ದೇಹದಲ್ಲಿನ ಹೃದಯವಿದ್ದಂತೆ ಅದನ್ನು ವಶಮಾಡಿಕೊಂಡರೆ ಸಾಮಾನ್ಯವಾಗಿ ಒಂದು ರಾಜ್ಯವು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿದ್ದಿತು. ಆದುದರಿಂದ ರಕ್ಷಣೆಯ ದೃಷ್ಟಿಯಿಂದ ಅತ್ಯವಶ್ಯಕವಾಗಿತ್ತು.

ಕರ್ನಾಟಕ ಕೋಟೆ ಮತ್ತು ಕೋಟೆಕಾಳಗಗಳನ್ನು ಕುರಿತು ಹಲವು ಸಾಹಿತ್ಯ ಕೃತಿಗಳು ವರ್ಣಿಸಿವೆ. ನಂಜುಂಡ ಕವಿಯ ರಾಮನಾಥ ಚರಿತೆ, ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ, ಮೂರನೆಯ ಮಂಗರಸನ ಸಂಯುಕ್ತ ಕೌಮುದಿ, ಭೀಮಕವಿಯ ಚೆನ್ನಬಸವ ಪುರಾಣ, ಗೋವಿಂದ ವೈಧ್ಯನ ಕಂಠೀರವ ನರಸರಾಜ ವಿಜಯೂ ಮತ್ತು ಕೆಳದಿ ಬಸವರಾಜನ ಶಿವತತ್ವಾಕರ ಮೊದಲಾದ ಕೃತಿಗಳು ಕೋಟೆ ಮತ್ತು ಕೋಟೆಕಾಳಗಗಳನ್ನು ಮನದಣಿಯ ವರ್ಣಿಸಿವೆ. ಕೋಟೆಯು ಮಧ್ಯಯುಗದಲ್ಲಿ ಎಷ್ಟು ಅವಶ್ಯಕವೆನ್ನುವ ಬಗೆಗೆ ಹೇಳುತ್ತಾ ಕೋಟೆಯಿಲ್ಲದಿರುವ ರಾಜನ ಸ್ಥಿತಿಯನ್ನು ಶಿವತತ್ವದ ರತ್ನಾಕರದಲ್ಲಿ ಹೀಗೆ ವರ್ಣಿಸಲಾಗಿದೆ.

ವಿಷಹೀನೋ ಯಥಾ ನಾಗೋ ಮದಹೀನೋ ಹಜಃ।
ಸರ್ವೇಷಾಂ ವಶ್ಯತಾಂ ಯಾತಿ ದುರ್ಗ ಹೀನಸ್ತಥಾ ನೃಪಃ ॥

ಅಂದರೆ ಕೋಟೆಯಿಲ್ಲದ ರಾಜನು ವಿಷವಿಲ್ಲದ ಹಾವಿನಂತೆ, ಮದವಿಲ್ಲದ ಆನೆಯಂತೆ ಎಲ್ಲರಿಗೂ ಸುಲಭವಾಗಿ ವಶವಾಗುವನು. ಯುದ್ಧ ಅಥವಾ ಕಾಳಗಗಳೆಂದರೆ ಶತ್ರುರಾಜನ ಸಾಮ್ರಾಜ್ಯದ ಭೂಭಾಗವನ್ನು ವಶಪಡಿಸಿಕೊಳ್ಳುವುದರ ಜೊತೆಗೆ ಶತ್ರುರಾಜನ ಅರಮನೆ ಸಂಪತ್ತು ಮೊದಲಾದವುಗಳನ್ನು ಆಕ್ರಮಿಸುವುದು. ಅಲ್ಲಿ ಹಾರಾಡುತ್ತಿದ್ದ ಶತ್ರುರಾಜನ ಬಾವುಟ ಅಥವಾ ಧ್ವಜವನ್ನು ಉರುಳಿಸಿ ತಮ್ಮ ಧ್ವಜವನ್ನು ಹಾರಿಸುವುದೂ ಆಗಿತ್ತು. ಆದುದರಿಂದ ವಿಜಯನಗರ

ಮತ್ತು ಆನಂತರದ ಅವಧಿಯಲ್ಲಿ ರಾಜರು ಮತ್ತು ಪಾಳೆಯಗಾರರು. ತಮ್ಮ ಅರಮನೆಗಳ ಸುತ್ತ ರಕ್ಷಣೆಗಾಗಿ ಭದ್ರವಾದ ಕೋಟೆಕೊತ್ತಲಗಳನ್ನು ನಿರ್ಮಿಸುತ್ತಿದ್ದರು.

ಕೋಟೆಯೆಂದಾಕ್ಷಣ ನೆನಪಿಗೆ ಬರುವ ಭಾಗಗಳೆಂದರೆ ಆಳವಾದ ಅಗಳು, ಅದನ್ನು ಬಳಸಿ ಕಟ್ಟಲಾದ ಎತ್ತರದ ಆಳ್ವೇರಿಗಳು ಕೊತ್ತಲಗಳು ತೆನೆಗಳು ಮುಗಿಲಟ್ಟಣೆಗಳು ಹೆಬ್ಬಾಗಿಲು ಮತ್ತು ಧ್ವಜಕೇತುಗಳು ಪ್ರಮುಖವಾಗಿವೆ. ವಿಜಯನಗರ ಕಾಲದಲ್ಲಿ ಬಯಲು ಕಾಳಗಗಳಿಗಿಂತ ಹೆಚ್ಚಾಗಿ ಕೋಟೆಕಾಳಗಗಳು ನಡೆದಿರುವುದನ್ನು ಕಾಣಬಹುದು. ಕೋಟೆಕಾಳಗಗಳು, ನಡೆದಿರುವುದನ್ನು ಶಾಸನಗಳು ಕೋಟೆಗಳ ಹೆಸರನ್ನು ಮಾತ್ರ ಉಲ್ಲೇಖಿಸಿದರೆ ಸಾಹಿತ್ಯ ಕೃತಿಗಳು ಹಾಗೂ ಪ್ರವಾಸಿ ವರದಿಗಳು ಕಾಳಗಗಳ ಬಗ್ಗೆ ಪೂರ್ಣವಾದ ವಿವರಗಳನ್ನು ನೀಡುತ್ತವೆ. ಕರ್ನಾಟಕದ ಕೋಟೆಕಾಳಗಗಳ ಬಗೆಗೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಅವುಗಳಲ್ಲಿ ಬೆಟಗೇರಿ ಕೃಷ್ಣಶರ್ಮರ 'ಕನ್ನಡಿಗರ ಕೋಟೆಕಾಳಗ' ಮುಖ್ಯವಾದುದು. ಅದು ಕೋಟೆಯ ವಿಧಗಳು, ಭಾಗಗಳು, ಶಸ್ತ್ರಾಸ್ತ್ರಗಳು ಇನ್ನೂ ಮುಂತಾದ ಸಂಗತಿಗಳನ್ನು ಕುರಿತಿದೆ. ವಿರೂಪಾಕ್ಷ ಪಂಡಿತ ತನ್ನ ಕೃತಿಯಲ್ಲಿ 'ಬಿಡದೆ ಕೂಗುವ ಪಹರೆ ತಿರುಗುತಿಹ ಪಂಜುಗಳೇ ಗಡಿಬಡಿಪ ಕೋಂಟೆವರೆ, ದನಿಗೆಯ್ವ ಪೆಟಲುಗಳು, ಒಡನೊಡನೆ ಸುಳಿವ ಮೇಲ್ವಹರಿಯೊಳ್ ಚೀರುತಿಹ ಕಹಳೆಗಳ್, ಭರದೊಳು ಪೊಡೆವ ತಂಟರವಂ ಮೋಸವೋಗದಿರೆನುತ ಆಡಿಗಡಿಗೆ ಸುಯ್ದೊನಮಂ ಮಾಳ್ವ ಭಟರ ವಂಗಡ ಮಸೆದುದಾಗಳಾ ಆಳ್ವೇರಿಯೆಡೆಯೊಳು' ಎಂದು ಕೋಟೆಕಾಳಗದ ಚಿತ್ರಣವನ್ನು ಕಣ್ಮುಂದೆ ತರುತ್ತಾನೆ. ಒಟ್ಟಿನಲ್ಲಿ ಹಿಂದಿನ ಸಾಂಪ್ರದಾಯಿಕ ಅಸ್ತ್ರಗಳಿಗೆ ಪ್ರತಿಯಾಗಿ ಬಂದೂಕು, ಫಿರಂಗಿ, ಕ್ಷಿಪಣಿಗಳಂತಹ ವಿನೂತನ ಆಯುಧಗಳು ಕೋಟೆಕಾಳಗ, ಯುದ್ಧದ ಗತಿ ಹಾಗೂ ಯುದ್ಧತಂತ್ರ ವಿಧಾನಗಳಲ್ಲಿ ಪರಿಣಾಮಕಾರಿ ಬದಲಾವಣೆಗಳನ್ನು ಉಂಟು ಮಾಡಿದವೆನ್ನಬಹುದು.[೯]

ಕ್ರಿ.ಶ. ೧೩೯೯ರಲ್ಲಿ ಯದುರಾಯನಿಂದ ಮೈಸೂರು ಒಡೆಯರ ಸಂಸ್ಥಾನವು ಸ್ಥಾಪಿತವಾದರೂ ಸಹ ಯದುರಿಯನಿಂದ ಬೆಟ್ಟದ ಚಾಮರಾಜ ಒಡೆಯರವರೆಗೆ ನಮಗೆ ಕೋಟೆಗಳ ಹಾಗೂ ರಕ್ಷಣಾ ವಾಸ್ತುಶಿಲ್ಪದ ರಚನೆಯ ಬಗ್ಗೆ ಯಾವುದೇ ಉಲ್ಲೇಖಗಳು ಸಾಹಿತ್ಯಾಧಾರಗಳಲ್ಲಿ ನಮಗೆ ಲಭ್ಯವಿಲ್ಲ. ಅದಕ್ಕೆ ಕಾರಣ ಪ್ರಾರಂಭದ ಮೈಸೂರು ಒಡೆಯರು ಅಸಮರ್ಥರು, ಅಧ್ಯಕ್ಷರು ಆಗಿದ್ದಷ್ಟೇ ಅಲ್ಲದೆ ಸಾಮ್ರಾಜ್ಯಕ್ಕೆ ಭದ್ರಬುನಾದಿಯನ್ನು ಹಾಕುವ ಪ್ರಯತ್ನವನ್ನು ಯಾವುದೇ ಅರಸರು ಮಾಡಲಿಲ್ಲ. ಅದಕ್ಕೆ ಕಾರಣ ವಿಜಯನಗರದ ಅರಸರಿಗೆ ಇವರು ಸಾಮಂತ ಪಾಳೆಯಗಾರರಾಗಿ ಆಳ್ವಿಕೆಯನ್ನು ನಿಷ್ಠೆಯಿಂದ ನಿರ್ವಹಿಸಿದ್ದು ಪ್ರಮುಖವಾದ ಕಾರಣವೆಂದು ಹೇಳಬಹುದು. ಆದರೆ ರಾಜಒಡೆಯರು ಕ್ರಿ.ಶ.೧೫೭೮ರಲ್ಲಿ ಮೈಸೂರು ಪಾಳೆಯಪಟ್ಟಿನ ಅರಸರಾಗಿ ಪಟ್ಟಾಭಿಷೇಕವಾದಾಗ ಮೊದಲ ತಮ್ಮ ಪಾಳೆಯಪಟ್ಟಿನ ಎಲ್ಲೆಗಳನ್ನು ವಿಸ್ತರಿಸುವ ಕಾರ್ಯಕ್ಕೆ ಕೈಹಾಕಿದರು. ಅಲ್ಲದೆ ತಾವು ಗೆದ್ದುಕೊಂಡ ಕೆಲವೊಂದು ಪ್ರಮುಖ ಸ್ಥಳಗಳಲ್ಲಿ ಕೋಟೆಗಳ ನಿರ್ಮಾಮ ಕಾರ್ಯದರೂವಾರಿಯಾಗಿ ಮೊದಲಿಗರು ರಾಜಒಡೆಯರೇ ಆಗಿದ್ದಾರೆ.

ಕ್ರಿ.ಶ.೧೫೮೬ರಲ್ಲಿ ರಾಜಒಡೆಯರು ರಂಗಸಮುದ್ರವನ್ನು ಆಳುತ್ತಿದ್ದ ತಿರುಮಲ ರಾಜಯ್ಯನನ್ನು ಸೋಲಿಸಿ, ರಂಗಸಮುದ್ರವನ್ನು ತನ್ನ ವಶಮಾಡಿಕೊಂಡು ಕೋಟೆಯನ್ನು ನಿರ್ಮಿಸಿದರು.[೮೦] ಇದೇ ಮೊದಲ ಮೈಸೂರು ಪಾಳೆಯಪಟ್ಟಿನ ಮೊದಲ ರಕ್ಷಣಾ ವಾಸ್ತುಶಿಲ್ಪದ ಉಲ್ಲೇಖವೆನಿಸಿದೆ. ಹಾಗೆಯೇ ಕ್ರಿ.ಶ. ೧೬೩೮ರಲ್ಲಿ ಪಟ್ಟಕ್ಕೆ ಬಂದ ಕಂಠೀರವ ನರಸರಾಜ ಒಡೆಯರು ತಿರುಚನಾಪಳ್ಳಿಯ ಜಟ್ಟಿಯೊಬ್ಬ ತನ್ನನ್ನು ಕಾಳಗದಲ್ಲಿ ಯಾರೂ ಜಯಿಸಲಾರರು ಎಂಬ ಗರ್ವ ಹಾಗೂ ಪ್ರತಿಷ್ಠೆಯಿಂದ ತನ್ನ ದಟ್ಟ ಚಲ್ಲಣವನ್ನು ಕೋಟೆಯ ಅಗಸೆ ಬಾಗಿಲಿಗೆ ಕಟ್ಟಿದ್ದನು.[೮೧] ಈ ವಿಷಯವನ್ನು ತಿಳಿದ ಕಂಠೀರವ ನರಸರಾಜ ಒಡೆಯರು ತಮ್ಮ ಸೇವಕರೊಂದಿಗೆ ತಿರುಚನಾಪಳ್ಳಿಗೆ ತೆರಳಿ ಜಟ್ಟಿಯು ಕೋಟೆಯ ಹೆಬ್ಬಾಗಿಲಿಗೆ ಕಟ್ಟಿದ್ದ ದಟ್ಟಚಲ್ಲಣವನ್ನು ಕಿತ್ತುಹಾಕಿ ಜಟ್ಟಿಯನ್ನು ಕೊಂದು ಹಾಕಿದರು. ಅದೇ ವರ್ಷವೇ ಬಿಜಾಪುರದ ಎರಡನೆಯ ಮಹಮನ್ ಆದಿಲ್‌ಷಾನ ದಂಡಾಧಿಕಾರಿಯಾದ ರಣದುಲ್ಲಾಖಾನನ್ನು ಶ್ರೀರಂಗಪಟ್ಟಣದ ಮೇಲೆ ದಾಳಿಮಾಡಿದನು. ಈ ದಾಳಿಗಳನ್ನು ತಡೆಯುವ ನಿಟ್ಟಿನಲ್ಲಿ ಕಂಠೀರವ ನರಸರಾಜ ಒಡೆಯರು ಶತ್ರುಗಳು ಆಕ್ರಮಣಗಳನ್ನು ತಡೆಯಲು ಕೋಟೆಯನ್ನು ಬಲಪಡಿಸುವ ಕೆಲಸವನ್ನು ಯಶಸ್ವಿಯಾಗಿ ನಿರ್ವಹಿಸಿದರು.

**ಶ್ರೀರಂಗಪಟ್ಟಣದ ಕೋಟೆ:** ನಾಗಮಂಗಲದ ರಾಜನಾಗಿದ್ದ ತಿಮ್ಮಣ್ಣನಾಯಕನು ಕ್ರಿ.ಶ.೧೪೫೪ರಲ್ಲಿ ವಿಜಯನಗರದ ಅರಸರು ಅಪ್ಪಣೆಯನ್ನು ಪಡೆದು ಆಳುತ್ತಿದ್ದ ವಿಜಯನಗರದ ಕೊನೆಯ ಅರಸನಾದ ತಿರುಮಲರಾಯನಿಂದ ರಾಜಒಡೆಯರು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡು ಕೋಟೆಯನ್ನು ಬಲಪಡಿಸಿದರು. ಅಲ್ಲದೆ ಮೊದಲೇ ತಿಳಿಸಿದಂತೆ ರಣದುಲ್ಲಾಖಾನನು ಮೈಸೂರಿನ ಶ್ರೀರಂಗಪಟ್ಟಣದ ಮೇಲೆ ದಾಳಿಮಾಡಿದನು. ಈ ದಾಳಿಯ ಸಂದರ್ಭದಲ್ಲಿ ಕಂಠೀರವ ನರಸರಾಜ ಒಡೆಯರ ಸೈನ್ಯ ಮತ್ತು ಬಿಜಾಪುರದ ಸೈನ್ಯಕ್ಕೂ ನಡೆದ ಯುದ್ಧವನ್ನು ಗೋವಿಂದ ವೈಧ್ಯನು 'ಕಂಠೀರವ ನರಸರಾಜ ವಿಜಯಂ' ಕೃತಿಯಲ್ಲಿ ಕಣ್ಣಿಗೆ ಕಟ್ಟುವಂತೆ ಯುದ್ಧದ ಚಿತ್ರಣವನ್ನು ವರ್ಣಿಸಿದ್ದಾನೆ. ಅದರಲ್ಲಿನ ಶ್ರೀರಂಗಪಟ್ಟಣದ ಕೋಟೆಯ ಚಿತ್ರಣ ಈ ರೀತಿಯಾಗಿದೆ.

ಮುಗಿಲು ಮುಟ್ಟುವ ಕೋಟೆಯ ತೆನೆಯೆಡೆ
ಹೊಗರೆದ್ದ ದನಿ ಮೊನೆ ಶೂಲ
ಝುಗಝುಗಿಸುವ ಹೇರಿಟ್ಟ ಮರಳು ಗೈಗ
ಉಗುಳುತ್ತಿದ್ದವು ಕೆಂಗಿಡಿಗಳ.[೮೨]

ಕೋಟೆಯ ತೆನೆಗಳು ವಿಜಯನಗರದ ತರುವಾಯ ಕಾಲದಲ್ಲೂ ಸಹ ರಚಿಸಲ್ಪಡುತ್ತಿದ್ದವು.

ಕೋಟೆಕೊತ್ತಲಗಳ ತಾಗಿ ಕೆಂದೂಳ್ಸಹ
ದಾಟಿ ಪಾರುವ ಶತಾಘ್ನಿಗಳ
ಮಿಾಟಿನ ಗುಂಡುಗಳೆಸದು ವುಲ್ಕಾಪಾತ
ದಾಟುವ ತೋರಿಸುವಾಗ[೮೩]

ಶ್ರೀರಂಗಪಟ್ಟಣವನ್ನು ಆಕ್ರಮಿಸಿದ ರಣದುಲ್ಲಾಖಾನನ ಸೈನ್ಯವು ಭಾರಿ ಹೋರಾಟದಲ್ಲಿ ತೊಡಗಿತು. ಕೋಟೆಯೊಳಗಿಂದ ಸಂಗ್ರಾಮದ ಬೇರಿಯಸದ್ದಾಯಿತು. ಬಿಲ್ಲವಜೇಡೆ, ಪಟುಭಟರ ಬೊಬ್ಬೆ, ಹಯಗಳ ಹೇಷಾರವ, ಕೊಲ್ಲಾರ ಬಂಡಿಗಳ ಚೀತ್ಕಾರಗಳ ಜೊತೆಗೆ ಹೋರಾಟದ ರೀತಿಯು ಈ ರೀತಿಯಾಗಿತ್ತು.

ಇಡು ಪಿರಂಗಿಯ ಬೇಗ ಪಿಡಿನಚ್ಚಣಿಯ

ತುಡುಕು ಗುರಾಣಿ ಖಂಡೆಯವ

ಹೊಡೆಬಲು ಜಬರುಬಂಗಿಯಲಿ ಕೋಟೆಯ

ಎಂಬ ಆರ್ಭಟಗಳು ಆಕಾಶದ ತುಂಬ ಧ್ವನಿ ಮೂಡಿಸಿದವು-

ಖಾನನ ಭಟರೂ ೪ ದಿಕ್ಕಿನ ಕೋಟೆಯ ತೆನೆಗೆ ಸಂಧಿಸಿದರು. ಮೇರುವೆಗಳ ಮೇಲೇರಿ ಪೆಟಲು ಗುಂಡುಗಳ ಮಳೆಗರೆದರು.[೮೧] ಅಂತೆಯೇ ಶ್ರೀರಂಗ ಪಟ್ಟಣದ ಸೈನಿಕರ ದಾಳಿಗೆ ಬಿಜಾಪುರ ಸೈನಿಕರು ಪ್ರತಿರೋಧವನ್ನು ಈ ರೀತಿಯಾಗಿ ತೋರಿದರು.

ಜಾಡಿಸಿ ಬರುವ ಪೆಟಲ ಗುಂಡುಗಳ ಮೇ

ಲೀಡಿರಿದರಿವ ಬಾಣಗಳ

ನೋಡದೆ. ಹೆಣಗಳ ತುಳಿದು ಖಾನರು ಕೈಯ

ನೀಡಿದ ಕೋರ್ಜಿಯ ತೆನೆಗೆ ಲಗ್ಗೆಯೊಳಗೇರಿದರು.[೮೨]

ಕಂಠೀರವ ನರಸರಾಜ ಒಡೆಯರು ಕೋಟೆಗೆ ಲಗ್ಗೆಯೇರುವ ಶತ್ರು ಸೈನಿಕರು ಅಡಿಯಿಡದಂತೆ ಅವರ ಕಾಲುಗಳನ್ನು ಕಡಿದು ತಲೆಗಳನ್ನು ಕತ್ತರಿಸಿ ಕೋಟೆಯ ಹೊರಗಿರುವ ಕುದುರೆಗಳನ್ನು ತರಿದು ಬಂಡಿಗಳನ್ನು ಮುರಿದು, ಆನೆಗಳನ್ನಿರಿದು ಒಂಟೆಗಳನ್ನೋಡಿಸಿ ಅತಿಭಯಂಕರವಾಗಿ ಯುದ್ಧ ಮಾಡಿದರು ಎಂದು ಗೋವಿಂದ ವೈದ್ಯನು ವರ್ಣಿಸುತ್ತಾನೆ.

ಯುದ್ಧದ ಮೂರನೆಯ ದಿನ ಬಿಜಾಪುರದ ಸೈನಿಕರು ವೀರಭದ್ರ ಕೊತ್ತಲದ ಮಾರ್ಗವಾಗಿ ಬಂದು, ಕೋಟೆಯ ಮೇಲೆ ಕಾವಲು ಕಾಯುತ್ತಿದ್ದ ಕಾವಲುಗಾರರನ್ನು ಹೊಡೆದು ಹಾಕಿ ಲಗ್ಗೆಯೇರಬೇಕೆಂದಿದ್ದರು. ಠಾಣೆದಾರ ಬಸವರಾಜಯ್ಯ ಹೋಬಳಿದಾರ ಸಿದ್ಧನಾಯಕ ಓಲೆಕಾರರುಗಳ ಜೊತೆ ಸೇರಿ ತುಪಾಕಿಗಳನ್ನು ಹಿಡಿದು ಶತ್ರುಗಳನ್ನು ಹೊಡೆದುರುಳಿಸಿದರು. ಆದರೆ ಮೈಸೂರಿನಲ್ಲಿ ಸ್ತ್ರೀಯರು ಸಹ ಶ್ರೀರಂಗಪಟ್ಟಣದ ಯುದ್ಧದಲ್ಲಿ ಕೋಟೆಗೋಡೆ ಮೇಲೆ ನಿಂತು ಯುದ್ಧ ಮಾಡಿದರು. ತಲೆಕೆದರಿ ಆಯುಧಗಳನ್ನು ಕೈಯಲ್ಲಿ ಹಿಡಿದು ಅತಿ ಭಯಂಕರವಾಗಿ ಯುದ್ಧಕ್ಕೆ ಸಿದ್ಧವಾಗಿದ್ದರು.[೮೩]

ಶ್ರೀರಂಗಪಟ್ಟಣದ ಕೋಟೆಯು ರಣದುಲ್ಲಾಖಾನನ ದಾಳಿಯಿಂದ ದುರ್ಬಲವಾದ ಕಾರಣದಿಂದ ಉತ್ತರ ಭಾಗದಲ್ಲಿ ಕೋಟೆಯನ್ನು ದೊಡ್ಡದೊಡ್ಡ ಕಲ್ಲುಗಳಿಂದ ನಿರ್ಮಿಸಿ ಕೋಟೆಕೊತ್ತಲ ಅಗಳುಗಳನ್ನು ವಿಸ್ತಾರವಾಗಿ ನಿರ್ಮಿಸಿದರು. ಶತ್ರುಗಳು ದಾಳಿ ಮಾಡಿದರೂ ಕೋಟೆಯೊಳಗಿನ ಜನರಿಗೆ ಆಹಾರದ ಅಭಾವ ಉಂಟಾಗದಂತೆ ಆಹಾರ ಧಾನ್ಯಗಳು ಮತ್ತು ದಿನಸಿಪದಾರ್ಥಗಳು ಹಾಗೂ ಮದ್ದುಗುಂಡುಗಳನ್ನು ಸಂಗ್ರಹಿಸಲು ಉಗ್ರಾಣಗಳನ್ನು ಮದ್ದಿನ

ಮನೆಗಳು ಆಯುಧಾಗಾರಗಳನ್ನೂ ನಿರ್ಮಿಸಿದರು.[೬೦] ಅಲ್ಲದೆ ಶ್ರೀರಂಗಪಟ್ಟಣದ ಕೋಟೆಯ ಕೊತ್ತಲಗಳಲ್ಲಿ ಅಲಗಿನ ಚಾವಡಿಯಲ್ಲಿ ತಯಾರಾದ ಫಿರಂಗಿಗಳನ್ನಿಡಿಸಿದರು. ಈ ಫಿರಂಗಿಗಳು ವಿವಿಧ ಅಳತೆಯ ಹಾಗೂ ಗಾತ್ರಗಳನ್ನು ಹೊಂದಿದ್ದು ಅಳತೆ ಮತ್ತು ಗಾತ್ರಗಳಿಗೆ ತಕ್ಕಂತೆ ಕಾರ್ಯಕ್ಷಮತೆಯನ್ನು ಹೊಂದಿದ್ದವು.

ಕ್ರಿ.ಶ.೧೬೭೩ರಲ್ಲಿ ಶ್ರೀರಂಗಪಟ್ಟಣದ ಸಿಂಹಾಸನ ಹೇರಿದ ಚಿಕ್ಕದೇವರಾಜ ಒಡೆಯರು. ಶ್ರೀರಂಗಪಟ್ಟಣದ ಒಳಕೋಟೆಯನ್ನು ರಿಪೇರಿ ಮಾಡಿಸಿ ಫಿರಂಗಿಗಳನ್ನು ಇಡಿಸಿದರು. ಈ ಫಿರಂಗಿಗಳು ಸಹ ವಿವಿಧ ಗಾತ್ರ ಮತ್ತು ಕಾರ್ಯಕ್ಷಮತೆಗೆ ತಕ್ಕಂತೆ ವಿವಿಧ ಹೆಸರುಗಳನ್ನು ಹೊಂದಿದ್ದನ್ನು ಮರಾಠರ ಜಯಾಜಿಘಾಟ್ ಮತ್ತು ನಿಂಬಾಜಿಘಾಟ್ ಕ್ರಿ.ಶ.೧೬೮೧ರಲ್ಲಿ ದಾಳಿ ಮಾಡಿದಾಗ ರಾತ್ರಿಯ ವೇಳೆಯಲ್ಲಿ ಹಸುಗಳ ಕೊಂಬಿಗೆ ಪಂಜುಗಳನ್ನು ಕಟ್ಟಿ ಮರಾಠರ ಸೈನಿಕ ಶಿಬಿರದ ಮೇಲೆ ದಾಳಿಮಾಡಿಸಲಾಯಿತು. ಇದರಿಂದ ಮರಾಠರು ದಿಕ್ಕಾಪಾಲಾಗಿ ತಮ್ಮ ಶಿಬಿರಗಳನ್ನು ಬಿಟ್ಟು ಓಡಿಹೋದರು.

ಕ್ರಿ.ಶ. ೧೭೭೪ರಲ್ಲಿ ಮರಾಠರು ಮೈಸೂರಿನ ಮೇಲೆ ಮತ್ತೆ ದಾಳಿಮಾಡಿದರು. ಶಿದ್ದೋಜಿ ಘೋರ್ಪಡೆಯು ಇದರ ಮುಖಂಡತ್ವವನ್ನು ವಹಿಸಿದ್ದನು. ಕೋಟೆಯ ಮೇಲಿನಿಂದ ದೊಡ್ಡ ಕೃಷ್ಣರಾಜ ಒಡೆಯರು ಫಿರಂಗಿಗಳಿಂದ ಪ್ರತಿರೋಧವನ್ನು ಒಡ್ಡಿದರು. ಅಲ್ಲದೆ ಸೆರೆಸಿಕ್ಕ ಶತ್ರುಗಳ ಕಿವಿ ಮೂಗುಗಳನ್ನು ಕತ್ತರಿಸಿದರು. ಮುಖ್ಯವಾಗಿ ಫಿರಂಗಿ, ಕೋವಿ, ಮಕರಡಿಬ್ಬಿ, ಜಂಜಾಲು, ಜಬರಜಂಗಿ, ಬಾಣ ಮೊದಲಾದ ಆಯುಧಗಳಿಂದ ಶತ್ರುಗಳ ಮೇಲೆ ಪ್ರತಿದಾಳಿ ಮಾಡಿದರು. ಬಾಜಿರಾಯನು 'ನಾವು ಕತ್ತಿಯಲ್ಲಿ ಯುದ್ಧಮಾಡಿದರೆ ಇವರು ಮದ್ದುಗುಂಡುಗಳಿಂದ ಯುದ್ಧಮಾಡುವರು. ಇದು ಶ್ರೀರಂಗಪಟ್ಟಣವಲ್ಲ, ಫಿರಂಗಿಪಟ್ಟಣವೆಂದು ತೋರುತ್ತದೆ ಎಂದು ಇವರ ಸಂಗಡ ಯುದ್ಧ ಮಾಡಲಾರೆ ಎಂದು ಓಡಿಹೋದರು.[೬೧] ಕ್ರಿ.ಶ. ೧೭೩೨ರಲ್ಲಿ ಶ್ರೀರಂಗಪಟ್ಟಣದ ಸಿಂಹಾಸನವೇರಿದ ಚಾಮರಾಜ ಒಡೆಯರ ಕಾಲದಲ್ಲಿ ದಳವಾಯಿ ದೇವಯ್ಯನ ನೇತೃತ್ವದಲ್ಲಿ ಕೋಟೆಯ ಹೊರಗಿನ ಮೈದಾನದಲ್ಲಿ ಕವಾಯತುಗೆ ಹೋದಾಗ ದಳವಾಯಿ ದೇವರಾಜಯ್ಯನು ಕೋಟೆಯ ಬಾಗಿಲನ್ನು ಹಾಕಿಸಿ ತನ್ನ ಕಡೆಯ ಸೇವಕರಿಂದಲೇ ಚಾಮರಾಜ ಒಡೆಯರನ್ನು ಬಂಧಿಸಿ ಅವರನ್ನು ಕಬ್ಬಾಳುದುರ್ಗಕ್ಕೆ ಕಳುಹಿಸಿದನು.[೬೨]

ಹೈದರ್ ಅಲಿಯು ತಿರುಚನಾಪಳ್ಳಿಗೆ ಮುತ್ತಿಗೆ ಹಾಕಿದ್ದ ಸಮಯದಲ್ಲಿ ಚನ್ನಪಟ್ಟಣ (ಮದ್ರಾಸ್)ದ ಮಹಮದ್ ಅಲಿಖಾನನು. ಪಿತೂರಿಯಿಂದ ಆರ್ಕಾಟಿನ ಚಂದಾಸಾಹೇಬ ಮತ್ತು ಅವನ ಕಡೆಯ ಶೇಷಗಿರಿ ರಾಯನನ್ನು ತನ್ನ ಗುಡಾರಕ್ಕೆ ಕರೆಸಿ ಅವರ ತಲೆಗಳನ್ನು ಕಡಿಸಿ ಶ್ರೀರಂಗಪಟ್ಟಣಕ್ಕೆ ಕಳಿಸಿದನು. ಇಮ್ಮಡಿ ಕೃಷ್ಣರಾಜ ಒಡೆಯರು ಈ ತಲೆಗಳನ್ನು ಶ್ರೀರಂಗಪಟ್ಟಣದ ಕೋಟೆಬಾಗಿಲಿಗೆ ಕಟ್ಟಿಸಿದರು. ಕ್ರಿ.ಶ. ೧೭೬೦-೬೧ರಲ್ಲಿ ಮರಾಠರಿಂದ ದಾಳಿನಡೆದಾಗ ಇಮ್ಮಡಿ ಕೃಷ್ಣರಾಜ ಒಡೆಯರು ಹೈದರಾಲಿಯನ್ನು ಕರೆದು ದಳವಾಯಿಯಾಗಿ ಅಧಿಕಾರವನ್ನು ನೀಡಿದರು.

ಕ್ರಿ.ಶ. ೧೭೮೨ರಲ್ಲಿ ಹೈದರನ ಮರಣದ ತರುವಾಯ ಆತನ ಮಗ ಟಿಪ್ಪು ಸುಲ್ತಾನ ಸ್ವತಂತ್ರವಾಗಿ ಆಳ್ವಿಕೆಯನ್ನು ಮಾಡಿದನು. ಬ್ರಿಟಿಷರ ವಿರುದ್ಧ ಯೂರೋಪಿನವರೇ ಆದ ಫ್ರೆಂಚರೊಡನೆ ಸ್ನೇಹದಿಂದಿದ್ದು ಬ್ರಿಟಿಷರ ಬಲವನ್ನು ದಕ್ಷಿಣ ಭಾರತದಲ್ಲಿ ಮುರಿಯಲು ಪ್ರಯತ್ನಿಸಿದನು. ಟಿಪ್ಪು ಸುಲ್ತಾನನು ಮೈಸೂರಿನ ರಾಜಮನೆತನದ ಮೇಲೆ ಹೊಂದಿದ ಅಗೌರವ ಮತ್ತು ಅಸಹಿಷ್ಣುತೆಯ ಭಾವನೆಗಳೇ ಮೈಸೂರಿನ ಅರಸುಮನೆತನ ಮತ್ತು ಬ್ರಿಟಿಷರೊಂದಿಗೆ ಮಾಡಿಕೊಂಡ ಗುಪ್ತವಾದ ಒಪ್ಪಂದಗಳಿಗೆ ಕಾರಣವಾಯಿತು. ಬ್ರಿಟಿಷರ ಮಿತ್ರಪಡೆಯು ಶ್ರೀರಂಗಪಟ್ಟಣವನ್ನು ಮುತ್ತಿ ಮೈಸೂರನ್ನು ಶ್ರೀರಂಗಪಟ್ಟಣದ ಒಪ್ಪಂದಕ್ಕೆ ಒಳಪಡಿಸಿದವು. ೪ನೆಯ ಆಂಗ್ಲೋ–ಮೈಸೂರು ಯುದ್ಧದಲ್ಲಿ ಟಿಪ್ಪು ಊಟ ಮಾಡುತ್ತಿದ್ದಾಗ ಬ್ರಿಟಿಷರ ಮಿತ್ರಪಡೆಗಳು ಕೋಟೆ ದುರಸ್ತಿಗಾಗಿ ಬಿಟ್ಟ ದಕ್ಷಿಣ ದಿಕ್ಕಿನ ಚಿಕ್ಕದಾರಿಯನ್ನು ಉಪಯೋಗಿಸಿಕೊಂಡು ದಾಳಿಮಾಡಿ ಟಿಪ್ಪುವನ್ನು ಸೋಲಿಸಿ ಅವನನ್ನು ಸುತ್ತುವರಿದು ಕೊಂದವು.

ಶ್ರೀರಂಗಪಟ್ಟಣದ ಕೋಟೆಯು ಕಾವೇರಿ ನದಿಯಿಂದ ಸುತ್ತುವರೆದ ಜಲದುರ್ಗ. ನದಿಯೇ ಕಂದಕವಾಗಿ ಮಾರ್ಪಟ್ಟರೂ ಸಹ ಹೊರಗೋಡೆಯ ಸುತ್ತು ಮತ್ತೊಂದು ಕಂದಕವನ್ನು ನಿರ್ಮಿಸಲಾಗಿದೆ. ಹೊರ, ಮಧ್ಯ ಮತ್ತು ಒಳಕೋಟೆಗಳಿಂದ ಸುತ್ತುವರೆದಿದ್ದು ಉತ್ತರದಿಕ್ಕಿನ ಮಣ್ಣಿನ ಕೋಟೆಯನ್ನು ಬ್ರಿಟಿಷರು ತಮ್ಮ ವಿಜಯದ ನಂತರ ನೆಲಸಮ ಮಾಡಿದರು. ಪಶ್ಚಿಮ ಮತ್ತು ಉತ್ತರ ದಿಕ್ಕಿನಲ್ಲಿ ಮಣ್ಣಿನ ಹೊರಕೋಟೆಯ ಅವಶೇಷಗಳನ್ನು ಕಾಣಬಹುದು. ಕೆಲವೆಡೆ ಈ ಹೊರಗೋಡೆಯು ಅಲ್ಲಲ್ಲಿ ಕಲ್ಲಿನಿಂದ ನಿರ್ಮಿತವಾಗಿದ್ದು ಗಾರೆಯನ್ನು ಬಳಸಲಾಗಿದೆ. ಕೋಟೆಯುದ್ದಕ್ಕೂ ಅಲ್ಲಲ್ಲಿ ಚೌಕಾಕಾರದ ಬುರುಜುಗಳಿವೆ. ಕೋಟೆಯ ಕುಂಭಿಯಲ್ಲಿ ತೋಪುಗಳ ಬಾಯಿಯನ್ನು ತೂರಿಸಲು ದೊಡ್ಡದಾದ ಸಂಧಿಗಳು ಮತ್ತು ಬಂದೂಕಿನ ಕಿಂಡಿಗಳಿರುವುದನ್ನು ಕಾಣಬಹುದು. ಈ ಬಂದೂಕಿನ ಕಿಂಡಿಗಳು ಒಂದರಲ್ಲಿ ಐದು ಭಾಗಗಳಾಗಿರುವುದನ್ನು ಕಾಣಬಹುದು. ಕೋಟೆಯ ಎಲ್ಲಾದಿಕ್ಕುಗಳಿಗೂ ವಿವಿಧ ಹೆಬ್ಬಾಗಿಲುಗಳನ್ನು ನಿರ್ಮಿಸಲಾಗಿದೆ. ಪೂರ್ವದಿಕ್ಕಿಗೆ ಬೆಂಗಳೂರು ಬಾಗಿಲು, ಈಶಾನ್ಯಕ್ಕೆ ನೀರ ಬಾಗಿಲು, ಉತ್ತರಕ್ಕೆ ಜೀಬಿ ಬಾಗಿಲು ವಾಯುವ್ಯಕ್ಕೆ ದಿಲ್ಲಿ ಬಾಗಿಲು, ದಕ್ಷಿಣಕ್ಕೆ ಮೈಸೂರು ಬಾಗಿಲು, ಮತ್ತು ಆನೆ ಬಾಗಿಲು, ನೈರುತ್ಯಕ್ಕೆ ಸೋಮಲಿಂಗ ಬಾಗಿಲು ಎಂಬ ದಿಲ್ಲಿಬಾಗಿಲಿನ ಅಕ್ಕಪಕ್ಕದಲ್ಲಿರುವ ಬುರುಜುಗಳು ಸಾಮಾನ್ಯವಾಗಿರುವಂತೆ ವೃತ್ತಾಕಾರದ ರಚನೆಯನ್ನು ಹೊಂದಿವೆ. ಅಲ್ಲದೆ ಬಾಗಿಲುಗಳು ಕಮಾನಿನ ರಚನೆಯನ್ನು ಹೊಂದಿದ್ದು ಕಲ್ಲಿನಕಂಬ ಮತ್ತು ತೊಲೆಗಳಿಂದ ರಚನೆಯಾಗಿವೆ.

ಕೋಟೆಯ ಒಳಭಾಗದಲ್ಲಿ ಕೋಟೆಗಿಂತ ಎತ್ತರವಾದ ಚೌಕಾಕಾರದ ಬತ್ತೇರಿಗಳಿವೆ. ಈ ಬತ್ತೇರಿಗಳು ತೋಪುಗಳನ್ನು ಕೂರಿಸಲು ಇಳಿಜಾರಾದ ರಚನೆಯನ್ನು ಹೊಂದಿದ್ದು ಅಲ್ಲಲ್ಲಿ ಅಗಲವಾದ ಸಂಧಿಗಳ ರೀತಿ ಜಾಗಬಿಡಲಾಗಿದ್ದು ಅತ್ಯಂತ ಹೆಚ್ಚು ಬಲಶಾಲಿಯಾದ ತೋಪುಗಳನ್ನು ಕೂರಿಸಿರುತ್ತಿದ್ದರು. ಒಳಕೋಟೆಯಲ್ಲಿ ವಿವಿಧ ಭಾಗಗಳಲ್ಲಿ ಆರು ಮದ್ದಿನಮನೆಗಳನ್ನು

ನಿರ್ಮಿಸಲಾಗಿದೆ. ಆಕಸ್ಮಿಕವಾಗಿ ಈ ಮದ್ದಿನ ಮನೆಗಳಿಗೆ ಬೆಂಕಿ ಬಿದ್ದರೂ ಹೆಚ್ಚು ಹಾನಿಯಾಗದಂತೆ ಎಚ್ಚರವಹಿಸಿ ಇವುಗಳ ವಾಸ್ತುವನ್ನು ವಿನ್ಯಾಸಗೊಳಿಸಲಾಗಿದೆ. ನೆಲಮಟ್ಟಕ್ಕಿಂತ ಆರೇಳು ಅಡಿ ಆಳದಿಂದ ನಿರ್ಮಿಸಿ ಭೂಮಟ್ಟದಿಂದ ನಾಲ್ಕೈದು ಅಡಿ ಎತ್ತರದ ಇಳಿಜಾರಾದ ಛಾವಣಿಗಳನ್ನು ನಿರ್ಮಿಸಲಾಗಿದೆ. ಇವುಗಳ ನಿರ್ಮಾಣ ಚೌಕಾಕಾರ ಅಥವಾ ಆಯತಾಕಾರವಾಗಿದ್ದು, ಎಡ ಅಥವಾ ಬಲಭಾಗದಲ್ಲಿರುವ ಆರೇಳು ಮೆಟ್ಟಿಲುಗಳನ್ನು ಇಳಿದರೆ ಮದ್ದುಗುಂಡುಗಳನ್ನು ಸಂಗ್ರಹಿಸಿಡುವ ನೆಲಮಟ್ಟದ ಭಾಗವು ಕಂಡು ಬರುತ್ತದೆ.

**ಬಂಧಿಖಾನೆ**

ಕೈದಿಗಳನ್ನು ಬಂಧಿಸಿಡುವ ಬಂಧಿಖಾನೆಯು ವಿಶಿಷ್ಟವಾಗಿದೆ. ಇದು ಉತ್ತರ ದಿಕ್ಕಿನ ಕೋಟೆಗೋಡೆಯಲ್ಲಿ ಒಂದು ವಿಶಾಲವಾದ ಆಯತಾಕಾರದ ಕೊತ್ತಲವಿದ್ದು, ಇದರ ಕೆಳಗೆ ಬಂಧಿಖಾನೆಯಿದೆ. ಸುಮಾರು ೧೦೦ ಅಡಿಉದ್ದ, ೪೦ ಅಡಿ ಅಗಲವಾಗಿದ್ದು ಚಿಕ್ಕಚಿಕ್ಕ ಗಾತ್ರದ ಇಟ್ಟಿಗೆಗಳಿಂದ ನಿರ್ಮಿತವಾದ ಕಮಾನಿನಾಕಾರದ ಛಾವಣಿಯನ್ನು ಹೊಂದಿದೆ. ಗೋಡೆಗಳಲ್ಲಿ ಮುಂದಕ್ಕೆ ಚಾಚಲ್ಪಟ್ಟ ಕಲ್ಲುಗಳು ರಂಧ್ರಗಳಿಂದ ಕೂಡಿದ್ದು ಕೈದಿಗಳನ್ನು ಸರಪಳಿಗಳಿಂದ ಈ ರಂಧ್ರಗಳಿಗೆ ಬಂಧಿಸುತ್ತಿದ್ದರು. ಟಿಪ್ಪು ಸುಲ್ತಾನನು ಕರ್ನಲ್‌ಬೇಲಿಯನ್ನು ಮೂರನೆಯ ಆಂಗ್ಲೋ ಮೈಸೂರು ಯುದ್ಧದಲ್ಲಿ ಸೆರೆಹಿಡಿದು ಬಂಧಿಸಿದ್ದನು. ಆದ್ದರಿಂದ ಈ ಕಟ್ಟಡವು ಕರ್ನಲ್‌ಬೇಲಿ ಕಾರಾಗೃಹ ಎಂದೇ ಹೆಸರಾಗಿದ್ದರೂ ಸಹ ೧೮೭೫ರಲ್ಲಿ ಸರ್ ಥಾಮಸ್ ಇನ್‌ಮನ್ ಎಂಬ ಎಂಜಿನಿಯರ್ ಪತ್ತೆ ಹಚ್ಚಿದ್ದರಿಂದ ಅವನ ಹೆಸರಿನಿಂದಲೇ ಕರೆಯಲಾಗುತ್ತದೆ. ಇಲ್ಲಿ ಮರಾಠರ ದೋಂಡಿಯ ವಾಘಾನನ್ನೂ ಸಹ ಬಂಧಿಸಲಾಗಿತ್ತು.

ಕೋಟೆಯಲ್ಲಿ ಮೈಸೂರು ಮಹಾರಾಜರ ಚಿಕ್ಕ ಅರಮನೆ ಟಿಪ್ಪುಸುಲ್ತಾನನ ಲಾಲ್‌ಮಹಲ್ ಅರಮನೆಯ ಅವಶೇಷಗಳು ರಂಗನಾಥ, ಲಕ್ಷ್ಮೀನರಸಿಂಹ, ಲಕ್ಷ್ಮೀನಾರಾಯಣ, ಜನಾರ್ಧನ, ನಗರೇಶ್ವರ, ಗಂಗಾಧರ, ಕೋದಂಡರಾಮ ಮುಂತಾದ ದೇವಾಲಯಗಳು ಮತ್ತು ಮಸೀದಿಗಳನ್ನು ಕಾಣಬಹುದು. ಕೋಟೆಯ ಪೂರ್ವಭಾಗದಲ್ಲಿ ದರಿಯಾ ದೌಲತ್ ಇದೆ. ದರಿಯಾ ದೌಲತ್ ಎಂದರೆ ಪರ್ಶಿಯನ್ ಭಾಷೆಯಲ್ಲಿ ನೀರಿನ ಮೇಲಿನ ಸ್ವರ್ಗ ಎಂದರ್ಥ.

**ನೆಲದುರ್ಗಗಳು**

ಮೈಸೂರು ಒಡೆಯರ ಕಾಲದಲ್ಲಿ ರಚನೆಯಾದ ಕೋಟೆಗಳಲ್ಲಿ ದೇವನಹಳ್ಳಿ, ಸಿರಾ, ಬೆಂಗಳೂರು, ಮಾಗಡಿ, ಸಾವನದುರ್ಗ ಅಥವಾ ನೆಲಪಟ್ಟಗಳಲ್ಲಿನ ಕೋಟೆಗಳು ಮೈಸೂರು ಒಡೆಯರ ಸಮಕಾಲೀನ ಪಾಳೆಯಗಾರರಿಂದ ನಿರ್ಮಿತವಾದಂತಹ ನೆಲದುರ್ಗಗಳಾಗಿವೆ. ಮೈಸೂರು ಕೋಟೆ ಮಾತ್ರ ಮೈಸೂರು ಒಡೆಯರ ನೇರ ಆಳ್ವಿಕೆಯಲ್ಲಿ ನಿರ್ಮಿಸಿದಂತಹ ರಕ್ಷಣಾ ವಾಸ್ತು ಶಿಲ್ಪವಾಗಿದೆ. ಸಿರಾ ಮತ್ತು ದೇವನಹಳ್ಳಿಯ ಕೋಟೆಗಳು ಒಂದೇ ರೀತಿಯ ನಿರ್ಮಾಣಗಳಾದರೂ ಸಹ ಸಿರಾ ಕೋಟೆಯು ಚೌಕಾಕಾರವಾಗಿದ್ದು ದೇವನಹಳ್ಳಿಯ ಕೋಟೆಯು ಕೂರ್ಮಾಕೃತಿಯಲ್ಲಿ

ನಿರ್ಮಾಣಗೊಂಡಿದೆ. ಮಾಗಡಿ, ಬೆಂಗಳೂರು ಕೋಟೆಗಳು ಚೌಕಾಕಾರದಲ್ಲಿದ್ದರೆ ಸಾವನದುರ್ಗ ಮತ್ತು ಮೈಸೂರಿನ ಕೋಟೆಗಳ ನಿರ್ಮಾಣವು ಷಟ್‌ಭುಜಾಕೃತಿಯ ಮಾದರಿಯಲ್ಲಿ ರಚನೆಯಾಗಿವೆ. ಸಾಮಾನ್ಯವಾಗಿ ಈ ಕೋಟೆಗಳಲ್ಲಿ ರಚನೆಯಾಗಿರುವ ಕೊತ್ತಲಗಳು ಅರ್ಧವೃತ್ತಾಕಾರ ಇಲ್ಲವೇ ಚೌಕಾಕಾರದಲ್ಲಿ ರಚನೆಯಾಗಿರುವುದನ್ನು ಕಾಣಬಹುದಾಗಿದೆ. ಈ ಎಲ್ಲಾ ಕೋಟೆಗಳು ಬದಲಾದ ಕಾಲಘಟ್ಟದ ಯುದ್ಧವ್ಯವಸ್ಥೆಗೆ ಅನುಗುಣವಾಗಿ ನಿರ್ಮಿಸಿರುವುದನ್ನು ಕಾಣಬಹುದು. ಸಾವನದುರ್ಗದ ನೆಲಪಟ್ಟ ಕೋಟೆಯು ಕಲ್ಲು ಮಣ್ಣುಗಳಿಂದ ನಿರ್ಮಿತವಾಗಿದೆ. ಉಳಿದಂತೆ ಬೆಂಗಳೂರು ಕೋಟೆಯು ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಮಣ್ಣಿನ ಕೋಟೆಯಾಗಿತ್ತು ಆದರೆ ಹೈದರ್ ಅಲಿಯು ಮೈಸೂರಿನ ದಳವಾಯಿಯಾಗಿ ನೇಮಕವಾದ ಮೇಲೆ ಮಣ್ಣಿನ ಕೋಟೆಯನ್ನು ಕೆಡವಿ ಕಲ್ಲು ಮತ್ತು ಗಾರೆಗಳಿಂದ ಸುಮಾರು ೩೨ ಅಡಿಗಳಷ್ಟು ದಪ್ಪ ಮತ್ತು ೮ ಅಡಿಗಳಷ್ಟು ಅಗಲವಾದ ಕೋಟೆಯನ್ನು ನಿರ್ಮಿಸಿದನು. ಈ ನೆಲದುರ್ಗಗಳ ಕೊತ್ತಲಗಳಲ್ಲಿ ಶತ್ರುಗಳನ್ನು ಸುಲಭವಾಗಿ ವೀಕ್ಷಿಸಲು ಅನುವಾಗುವಂತೆ ಕೋಟೆಯ ಮೇಲಿನ ಕೊತ್ತಲಗಳಿಗೆ ಹೊಂದಿಕೊಂಡಂತೆ ಅಕ್ಕಪಕ್ಕದಲ್ಲಿ ಸಣ್ಣಸಣ್ಣ ಕೊಠಡಿಯ ಮಾದರಿಯಲ್ಲಿ ವೀಕ್ಷಣಾಲಯಗಳಿವೆ. ಈ ವೀಕ್ಷಣಾಲಯಗಳು ಕಾವಲುಗಾರರು ವಿಶ್ರಮಿಸಲು ಮತ್ತು ಮದ್ದುಗುಂಡುಗಳನ್ನು ಸಂಗ್ರಹಿಸಲು ಹಾಗೂ ಅನಿವಾರ್ಯ ಸಂದರ್ಭಗಳಲ್ಲಿ ಶತ್ರುಗಳೊಂದಿಗೆ ಹೋರಾಡಲು ಅನುಕೂಲವಾಗುವಂತೆ ನಿರ್ಮಿಸಲಾಗಿದೆ.

**ಮೈಸೂರು ಕೋಟೆ**

ಮೈಸೂರು ಕೋಟೆಯನ್ನು ಯಾರು ನಿರ್ಮಿಸಿದರೆಂದು ಖಚಿತವಾಗಿ ಹೇಳುವುದು ಕಷ್ಟ. ಕ್ರಿ.ಶ.೧೫೩೪ರಲ್ಲಿ ಚಾಮರಾಜ ಒಡೆಯರು ಇದನ್ನು ಬಲಪಡಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದಿವಾನ್ ಪೂರ್ಣಯ್ಯನವರು ಕಲ್ಲುಗಾರೆಗಳ ಬಳಕೆಯಿಂದ ಶಿಥಿಲವಾಗಿದ್ದ ಕೋಟೆಯನ್ನು ಅಭಿವೃದ್ಧಿಪಡಿಸಿದರು. ಅಲ್ಲದೆ ಮೈಸೂರು ಕೋಟೆಯಲ್ಲಿ ಅನೇಕ ಫಿರಂಗಿಗಳನ್ನಿಟ್ಟಿದ್ದರು. ಈ ಕೋಟೆಯು ಆರು ಬಾಗಿಲುಗಳು ಮತ್ತು ಅನೇಕ ಚೌಕಾಕಾರದ ಕೊತ್ತಲಗಳನ್ನು ಹೊಂದಿದೆ. ಕೋಟೆಯ ಕೈಪಿಡಿ ಗೋಡೆಯನ್ನು ಇಟ್ಟಿಗೆ ಗಾರೆಯಿಂದ ನಿರ್ಮಿಸಿ ಅಲ್ಲಲ್ಲಿ ಬಂದೂಕು ಮತ್ತು ಫಿರಂಗಿಗಳಿಗೆ ಕಿಂಡಿಗಳನ್ನು ಬಿಡಲಾಗಿದೆ.[೯೪]

**ದೇವನಹಳ್ಳಿ ಕೋಟೆ**

ಕ್ರಿ.ಶ. ೧೬ರಿಂದ ೧೮ನೆಯ ಶತಮಾನದ ಮಧ್ಯದವರೆಗೆ ಆಳಿದರು. ದೇವನಹಳ್ಳಿಯ ಮೂಲ ಹೆಸರು ದೇವನದೊಡ್ಡಿ. ದೇವನಹಳ್ಳಿಯನ್ನು ಕ್ರಿ.ಶ. ೧೭೪೬ರಲ್ಲಿ ಚಿಕ್ಕಪ್ಪಗೌಡನು ಆಳುತ್ತಿದ್ದನು. ಕ್ರಿ.ಶ. ೧೭೪೬ರಲ್ಲಿ ಮೈಸೂರಿನ ದಳವಾಯಿ ನಂಜರಾಜಯ್ಯ ದೇವನಹಳ್ಳಿಗೆ ಮುತ್ತಿಗೆ ಹಾಕಿದನು. ಈ ಮುತ್ತಿಗೆಯಲ್ಲಿ ಹೈದರ್ ಅಲಿಯು ಮೈಸೂರಿನ ಇತಿಹಾಸದಲ್ಲಿ ಕತ್ತಿಗೋಪಾಲರಾಜ ಅರಸರಿಂದ ಅಸ್ತಿತ್ವಕ್ಕೆ ಬರುವಂತಾಯಿತು. ಹೈದರ್ ಅಲಿಯು ದಳವಾಯಿಯಾಗಿ ಅಧಿಕಾರಕ್ಕೆ ಬಂದಾಗ ಈ ಕೋಟೆಯನ್ನು ಮತ್ತೆ ಪುನರ್ ನಿರ್ಮಿಸಿದನು. ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ

ದೇವನಹಳ್ಳಿ ಪ್ರಮುಖ ಪಟ್ಟಣವಾಗಿತ್ತು. ಕ್ರಿ.ಶ. ೧೭೯೧ರಲ್ಲಿ ಕಾರ್ನ್ ವಾಲೀಸನ ವಶವಾಯಿತು.[೯೫] ಈ ಕೋಟೆಯು ಅರ್ಧವೃತ್ತಾಕಾರದ ಕೊತ್ತಲಗಳನ್ನು ಹೊಂದಿದ್ದು, ಕೋಟೆಯ ಕೈಪಿಡಿಯು ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿತವಾಗಿದೆ. ಹದಿಮೂರು ಅರ್ಧ ವೃತ್ತಾಕಾರದ ಕೊತ್ತಲಗಳು, ಎರಡು ಚೌಕಾಕಾರದ ಬತ್ತೇರಿಗಳಿವೆ.

ದೇವನಹಳ್ಳಿ ಕೋಟೆಯು ಹೈದರಾಲಿಯ ಕಾಲದಲ್ಲಿ ಫ್ರೆಂಚರ ಕೋಟೆ ರಚನಾತಜ್ಞರ ನೆರವಿನೊಂದಿಗೆ ದೇವನಹಳ್ಳಿ ಕೋಟೆಯನ್ನು ಪುನರ್ ರೂಪಿಸಿದನು. ಟಿಪ್ಪುವಿನ ಕಾಲದಲ್ಲಿ ಈ ಕೋಟೆಯು ಪುನರ್ ಅಭಿವೃದ್ಧಿಯಾಯಿತು.[೯೬] ಈ ಕೋಟೆಯು ಸುಮಾರು ೩೦೦ ಮೀ ಉದ್ದ ೧೮೫ ಮೀ ಅಗಲವಾದ ವಿಸ್ತೀರ್ಣವನ್ನು ಹೊಂದಿರುವ ಆಯತಾಕಾರದ ಕೋಟೆಯಾಗಿದೆ. ಉತ್ತರ ದಿಕ್ಕಿನಲ್ಲಿರುವ ಪ್ರವೇಶದ್ವಾರವು ಮೊದಲೇ ತಿಳಿಸಿದ ಹಾಗೆ ಫ್ರೆಂಚ್ ತಂತ್ರಜ್ಞಾನದಲ್ಲಿ ನಿರ್ಮಿಸಲ್ಪಟ್ಟಿದ್ದು, ಕಂದಕದ ಮೇಲೆ ಕೋಟೆಯ ಪ್ರವೇಶದ್ವಾರದ ಮುಖ್ಯ ಬಾಗಿಲು ಸೇತುವೆಯ ರೂಪದಲ್ಲಿ ಬಳಕೆಯಾಗುತ್ತಿತ್ತು. ಸೈನ್ಯದ ಒಳಬರುವಿಕೆ ಮತ್ತು ಹೊರಹೋದಾಗ ಹಗ್ಗದ ಸಹಾಯದಿಂದ ಬಾಗಿಲನ್ನು ಎಳೆದುಕಟ್ಟಿ ಕೋಟೆಯ ಬಾಗಿಲನ್ನು ಭದ್ರಪಡಿಸಲಾಗುತ್ತಿತ್ತು. ಕೋಟೆಯ ಸುತ್ತಲೂ ಕಂದಕವಿದ್ದು ಅರ್ಕಾವತಿ ನದಿಯಿಂದ ಪಕ್ಕದ ಕೆರೆಗೆ ನೀರು ಸರಬರಾಜು ಮಾಡಿ ಕಂದಕಕ್ಕೆ ಹರಿಸಲಾಗುತ್ತಿತ್ತು. ಕೋಟೆಯ ಕೊತ್ತಲಗಳಿಗೆ ಫಿರಂಗಿಗಳನ್ನು ಸಾಗಿಸಲು ಇಳಿಜಾರಾದ ವೇದಿಕೆಯನ್ನು ಉತ್ತರ, ಪಶ್ಚಿಮ ಮತ್ತು ದಕ್ಷಿಣ ಭಾಗಗಳಲ್ಲಿ ನಿರ್ಮಿಸಲಾಗಿದ್ದು, ಮದ್ದುಗುಂಡುಗಳು ಹಾಗೂ ಇತರೆ ರಕ್ಷಣಾ ಸಾಮಾಗ್ರಿಗಳನ್ನು ಒದಗಿಸಲು ಸಹಾಯಕವಾಗುವಂತೆ ಎರಡು ಹಂತದಲ್ಲಿ ೩ಅಡಿ ಎತ್ತರ ಎರಡುವರೆ ಅಡಿ ಅಗಲದ ಎರಡು ಒಳಗೋಡೆಗಳನ್ನು ನಿರ್ಮಿಸಲಾಗಿದೆ. 'ಈ ಕೋಟೆಯಲ್ಲಿ ಮೂಲ ಚೌಕಾಕಾರದ ಕೊತ್ತಲಗಳನ್ನು ವರ್ತುಲಾಕಾರಕ್ಕೆ ಪರಿವರ್ತಿಸಿರುವ ಕ್ರಮಗಳು ನಮಗೆ ಸೂಕ್ಷ್ಮವಾಗಿ ಗಮನಿಸಿದಾಗ ಮಾತ್ರ ತಿಳಿದು ಬರುತ್ತದೆ.'[೯೭] ಪಹರೆ ಕಟ್ಟೆಗಳು ಪಕ್ಕದಲ್ಲಿಯೇ ನೆಲಮಾಳಿಗೆಯಲ್ಲಿ ಚಿಕ್ಕದಾದ ಮದ್ದಿನಮನೆಗಳನ್ನು ನಿರ್ಮಿಸಲಾಗಿದೆ. ಕೋಟೆಯ ಒಳಭಾಗದಲ್ಲಿ ದೇವಾಲಯಗಳು ಅವುಗಳ ಮುಂಭಾಗದಲ್ಲಿ ಸೈನ್ಯಾಧಿಕಾರಿಗಳ ಅಥವಾ ಉನ್ನತಾಧಿಕಾರಿಗಳ ವಾಸ ಗೃಹಗಳಿದ್ದವು. ದೇವಾಲಯದ ಬಲಬದಿಯಲ್ಲಿ ಸೈನಿಕರ ಜಮಾವಣೆಯ ಹಾಗೂ ಅವರ ವಾಸದ ಮನೆಗಳಿದ್ದವು. ಅಲ್ಲದೆ ಸೈನಿಕರ ಸಲುವಾಗಿ ನೀರಿನ ವ್ಯವಸ್ಥೆಗೆ ನಿರ್ಮಿಸಿದ್ದ ಬಾವಿಗಳ ಹಾಗೂ ಹಳೆಯ ವಾಸದಮನೆಗಳ ಅವಶೇಷಗಳಿರುವುದನ್ನು ಕಾಣಬಹುದು. ಒಟ್ಟಿನಲ್ಲಿ ಹೇಳುವುದಾದರೆ ಈ ಕೋಟೆಯು ಟಿಪ್ಪುವಿನ ಕಾಲದಲ್ಲಿ ಹೊಸ ಮಾರ್ಪಾಡುಗಳೊಂದಿಗೆ ಹೆಚ್ಚಿನ ಬದಲಾವಣೆ ಮತ್ತು ವಿಸ್ತೃತವಾದ ರಕ್ಷಣಾಕ್ರಮಗಳನ್ನು ಅಳವಡಿಸಿಕೊಳ್ಳಲು ಸಹಾಯಕವಾಯಿತು.

**ಬೆಂಗಳೂರು ಕೋಟೆ**

ಬೆಂಗಳೂರು ಎಂಬ ಹೆಸರು ಕ್ರಿ.ಶ. ೯-೧೦ನೆಯ ಶತಮಾನದ ಬೇಲೂರಿನ ಹೊಯ್ಸಳರ ಕಾಲದ ಶಾಸನದಲ್ಲಿ ತಿಳಿದುಬರುತ್ತದೆ. ಬೆಂಗಳೂರನ್ನು ಯಲಹಂಕ ನಾಡಪ್ರಭುಗಳು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಕ್ರಿ.ಶ.೧೮೩೭ರಿಂದ ೧೬೩೮ರ ಕಾಲಾವಧಿಯವರೆಗೆ ಯಲಹಂಕ ನಾಡಪ್ರಭುಗಳ ನೇರಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. ೧೬೮೭ರಲ್ಲಿ ಮೊಗಲರ ಸೇನಾನಿಯಾದ ಖಾಸಿಂಖಾನನು ಬೆಂಗಳೂರನ್ನು ಮಾರಾಟ ಮಾಡಲು ಪ್ರಯತ್ನಿಸಿದಾಗ ಚಿಕ್ಕದೇವರಾಯ ಒಡೆಯರು ಮೂರುಲಕ್ಷ ರೂಪಾಯಿಗಳಿಗೆ ಬೆಂಗಳೂರನ್ನು ಕೊಂಡುಕೊಂಡರು. ಅಲ್ಲದೆ ಬುದ್ಧಿವಂತರಾದ ಅಧಿಕಾರಿಗಳನ್ನು ಬೆಂಗಳೂರಿನಲ್ಲಿ ಕೋಟೆಯನ್ನು ಜೀರ್ಣೋದ್ಧಾರ ಮಾಡಿದರು.[೮] ಬೆಂಗಳೂರಿನ ಕೆ.ಆರ್.ಮಾರ್ಕೆಟ್ ಸಮೀಪದ ಈಗಿನ ಕೋಟೆಯನ್ನು ೩ನೇ ಕಂಠೀರವ ನರಸರಾಜ ಒಡೆಯರ್ ಕಟ್ಟಿಸಿದರು. ಬೆಂಗಳೂರು ಕೆಲವು ವರ್ಷಗಳ ಕಾಲ ದಳವಾಯಿಗಳ ನೇರ ಆಳ್ವಿಕೆಗೆ ಒಳಪಟ್ಟಿತ್ತು. ಮೈಸೂರಿನ ರಾಜಕೀಯ ಪರಿಸ್ಥಿತಿಯು ಬಿಗಡಾಯಿಸಿದಾಗ ಹೈದರ್ ಅಲಿಯು ಚಾಣಾಕ್ಷತನದಿಂದ ತನ್ನ ನೇರ ಆಳ್ವಿಕೆಗೆ ತೆಗೆದುಕೊಂಡನು. ಈತನ ಕಾಲಾವಧಿಯಲ್ಲಿ ಬೆಂಗಳೂರಿನ ಕೋಟೆಯು ಸಂಪೂರ್ಣವಾಗಿ ನವೀಕರಣಗೊಂಡು ಫಿರಂಗಿ ಬಳಕೆಯ ಯುದ್ಧಗಳಿಗೆ ಸಿದ್ಧಗೊಂಡಿತು. ಮೂರನೆಯ ಆಂಗ್ಲೋ- ಮೈಸೂರು ಯುದ್ಧದಲ್ಲಿ ಬ್ರಿಟಿಷರು ಬೆಂಗಳೂರಿನ ಮೇಲೆ ದಾಳಿಮಾಡಿ ತಮ್ಮ ವಶಮಾಡಿಕೊಂಡರು. ಬೆಂಗಳೂರನ್ನು ೪ನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಮರಣದ ನಂತರ ತಮ್ಮ ವಶಪಡಿಸಿಕೊಂಡರು.[೯]

ಬೆಂಗಳೂರಿನ ಕೋಟೆಯು ಅರಸರಿಗೆ ಮೀಸಲಾಗಿದ್ದಂತಹ ರಾಜಕೇಂದ್ರಿತ ಕೋಟೆಯಾಗಿದ್ದಿತು. ದೊಡ್ಡ-ದೊಡ್ಡ ಕಲ್ಲುಗಳು, ಗಾರೆ ಮತ್ತು ಇಟ್ಟಿಗೆಗಳಿಂದ ನಿರ್ಮಾಣವಾಗಿದೆ. ಕೋಟೆಯ ಮೇಲಿನ ಕೊತ್ತಲಗಳನ್ನು ಚೌಕಾಕಾರದಲ್ಲಿ ನಿರ್ಮಿಸಲಾಗಿದೆ. ಈ ಕೊತ್ತಲಗಳು ಸುಮಾರು ೫ರಿಂದ ೬ಮೀಟರ್ ಲಂಬವಾಗಿ ಮುಂಚಾಚಿಕೊಂಡಿದ್ದವು. ಕೋಟೆಗೋಡೆಯು ೭ರಿಂದ ೮ಮೀಟರ್ ಎತ್ತರ ಮತ್ತು ೩ಮೀಟರ್ ದಪ್ಪವಾಗಿತ್ತು ಎಂದು ಈಗ ಉಳಿದಿರುವ ಅವಶೇಷಗಳಿಂದಲೇ ಗುರ್ತಿಸಬಹುದು. ಹೈದರ್ ಅಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಅಂದಿನ ಯುದ್ಧತಂತ್ರಕ್ಕೆ ತಕ್ಕಂತೆ ಮಾರ್ಪಡಿಸಿ ಇಳಿಜಾರಿನ ಕುಂಭಿ, ತೆರೆದ ಕಿಂಡಿಗಳು ಹಾಗೂ ವರ್ತುಲಾಕಾರದ ಕೊತ್ತಲಗಳನ್ನು ಅಳವಡಿಸಲಾಯಿತು. ಉತ್ತರ ಮತ್ತು ದಕ್ಷಿಣಕ್ಕೆ ದ್ವಾರಗಳಿವೆ. ಎರಡೂ ಮರದ ಬಾಗಿಲುಗಳನ್ನು ಹೊಂದಿದ್ದು ಸುಮಾರು ೧೮-ರಿಂದ ೨೦ಅಡಿಗಳಷ್ಟು ಎತ್ತರವಾದ ಬಾಗಿಲುಗಳನ್ನು ಹೊಂದಿವೆ. ದಕ್ಷಿಣ ದ್ವಾರದ ಬಾಗಿಲು ಸುಮಾರು ಒಂದುವರೆ ಅಡಿಯಷ್ಟು ಉದ್ದದ ಕಬ್ಬಿಣದ ಮುಳ್ಳುಗಳನ್ನು ಹೊಂದಿದೆ. ಇದು ಸುಲಭವಾಗಿ ಶತ್ರುಗಳು ಪ್ರವೇಶಿಸದಂತೆ ತಡೆಯುವ ವ್ಯವಸ್ಥೆಯಾಗಿತ್ತು. ಅಲ್ಲದೆ ಈ ಬಾಗಿಲುಗಳನ್ನು ಎಂ. ಚಿದಾನಂದಮೂರ್ತಿಯವರು ಹೇಳುವಂತೆ ಒಂಟೆಗಳನ್ನು ಬಾಗಿಲಿಗೆ ಅಡ್ಡಲಾಗಿ ನಿಲ್ಲಿಸಿ ಆನೆಗಳ ಸಹಾಯದಿಂದ ನೂಕಿಸುತ್ತಿದ್ದರು. ಬಂಧಿಖಾನೆಗಳು ಈ ಕೋಟೆಯ ದ್ವಾರದ ಮೇಲಂತಸ್ತಿನಲ್ಲಿವೆ ಇವು ಚಿಕ್ಕ ಗೂಡಿನಾಕಾರದಲ್ಲಿ ರಚನೆಯಾಗಿದ್ದು

ಗಾಳಿಬೆಳಕಿಲ್ಲದ ಚಿಕ್ಕ ಕೋಣೆಗಳಾಗಿದ್ದು, ಸಾಲಾಗಿ ಹಾಗೂ ಕೆಲವು ಇಕ್ಕಟ್ಟಾದ ಕತ್ತಲ ಕೋಣೆಗಳಂತಿವೆ. ಬ್ರಿಟಿಷ್ ಅಧಿಕಾರಿ ಡೇವಿಡ್ ಬೈರ್ಡ್ ಮತ್ತಿತರನ್ನು ಇಲ್ಲಿಯೇ ಬಂಧಿಸಿದ್ದನು.[೧೦೦]

ಬೆಂಗಳೂರು ಕೋಟೆಯು ನೆಲದುರ್ಗವಾಗಿದ್ದರಿಂದ ವೈರಿಗಳ ಆಕ್ರಮಣವನ್ನು ಎದುರಿಸಲು ಕೋಟೆಯ ಸುತ್ತಲೂ ಆಳವಾದ ಕಂದಕವನ್ನು ನಿರ್ಮಿಸಲಾಗಿತ್ತು. ನೆಲದುರ್ಗಗಳನ್ನು ಸುಲಭವಾಗಿ ಆಕ್ರಮಿಸುವ ಈ ಕಂದಕಗಳಲ್ಲಿ ಮೊಸಳೆಗಳಿಂದ ಕೂಡಿತ್ತೆಂದು ಬ್ರಿಟಿಷ್ ಉಲ್ಲೇಖಗಳು ತಿಳಿಸುತ್ತವೆ. ಪೇಟೆ ಆವರಣವು ಸಮತಟ್ಟಾದ ಪ್ರದೇಶದಲ್ಲಿದ್ದುದರಿಂದ ಸುತ್ತಲೂ ನಿರ್ಮಿಸಿದ ಕಂದಕ ಕೋಟೆ ಗೋಡೆಯಿಂದ ೧೦ ಅಡಿಗಳಷ್ಟು ದೂರದಲ್ಲಿ ನಿರ್ಮಿತವಾಗಿದ್ದಿತು. ಇಲ್ಲಿಯ ಕಂದಕ ಕುಸಿದು ಬೀಳದಂತೆ ಎರಡೂ ಭಾಗಗಳಲ್ಲಿ ಇಳಿಜಾರಾದ ಗೋಡೆಗಳನ್ನು ಕಟ್ಟಲಾಗಿತ್ತು. ಈ ಕಂದಕವು ದ್ವಾರದ ಮುಂಭಾಗಗಳಲ್ಲಿ ಕಂದಕವನ್ನು ದಾಟಲು ಮರಗಳಿಂದ ಮಾಡಿದ ಸೇತುವೆಗಳಿದ್ದವು.[೧೦೧] ಶತ್ರುಗಳಿಂದ ಆಕ್ರಮಗಳಾಗುವ ಸಂದರ್ಭದಲ್ಲಿ ಈ ಮರದ ಸೇತುವೆಗಳನ್ನು ಕಡಿದು ಬಾಗಿಲನ್ನು ಭದ್ರಪಡಿಸಲಾಗುತ್ತಿತ್ತು.

**ಮಾಗಡಿಕೋಟೆ**

ಮಾಗಡಿಯನ್ನು ಕ್ರಿಶ.೧೧೩೯ರಲ್ಲಿ ಚೋಳರ ಕಾಲದಲ್ಲಿ ಸ್ಥಾಪನೆಯಾಯಿತು. ಈ ಪ್ರದೇಶವನ್ನು ಗಂಗರು, ಹೊಯ್ಸಳರು, ವಿಜಯನಗರದ ಅರಸರು ಆಳ್ವಿಕೆ ಮಾಡಿದ್ದು ಕೊನೆಗೆ ಯಲಹಂಕ ನಾಡಪ್ರಭುಗಳ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. ೧೭೨೮ರಲ್ಲಿ ಮೈಸೂರಿನ ದಳವಾಯಿಯಾದ ದೇವರಾಜಯ್ಯನು ಮಾಗಡಿಯ ಮುಮ್ಮಡಿ ಕೆಂಪೇಗೌಡನನ್ನು ಬಂಧಿಸಿ ಶ್ರೀರಂಗಪಟ್ಟಣದಲ್ಲಿ ಸೆರೆಮನೆಗೆ ತಳ್ಳಿದನು. ಕ್ರಿ.ಶ. ೧೭೯೧ರಲ್ಲಿ ಮಾಗಡಿಯು ಬ್ರಿಟಿಷರ ವಶವಾಯಿತು.

ಮಾಗಡಿಯು ಕೋಟೆಯು ೧೫೦ ಮೀ ಉದ್ದಗಲವನ್ನು ಹೊಂದಿರುವ ಚೌಕಾಕಾರದ ಕೋಟೆ ಕೆತ್ತನೆಯ ಮಾಡಿದ ಕಲ್ಲುಗಳಿಂದ ನಿರ್ಮಿಸಲಾಗಿದೆ. ಗಾರೆ ಮತ್ತು ಇಟ್ಟಿಗೆಯ ಬಳಕೆಯಿಲ್ಲದೆ ನಿರ್ಮಿಸಿದ್ದು ಕೋಟೆ ಗೋಡೆಯು ಸುಮಾರು ಆರುವರೆ ಮೀಟರ್ ಎತ್ತರವಾಗಿದೆ. ಅಲ್ಲದೆ ಕೋಟೆಯ ಅಗಲ ಸುಮಾರು ೪೧/೨ ಮೀಟರ್ ಅಗಲವನ್ನು ಹೊಂದಿದೆ. ಕೋಟೆಯ ಹೊರಮೈ ದಪ್ಪ ಕಲ್ಲುಗಳಿಂದ ನಿರ್ಮಿತವಾಗಿದ್ದರೆ. ಒಳಭಾಗವು ಚಿಕ್ಕ ಕಲ್ಲುಗಳು ಮತ್ತು ಮಣ್ಣಿನಿಂದ ನಿರ್ಮಿತವಾಗಿದೆ. ಕೋಟೆಯ ಪಹರೆಹಾಗಿ ಗೋಡೆಯ ಮೇಲ್ಭಾಗದಲ್ಲಿ ಪಹರೆಗೋಡೆಯನ್ನು ನಿರ್ಮಿಸಲಾಗಿತ್ತು. ಕೋಟೆಯ ನಾಲ್ಕು ಮೂಲೆಗಳಲ್ಲಿ ಚೌಕಾಕಾರದ ಮುಂಚಾಚಿದ ನಾಲ್ಕು ಕೊತ್ತಲಗಳಿವೆ. ಇವು ಕೋಟೆಗೋಡೆಗಿಂತಲೂ ಎತ್ತರವಾಗಿದ್ದು ಸುಮಾರು ಎಂಟು ಮೀಟರ್ ನಷ್ಟ ಎತ್ತರ ಮತ್ತು ಐದು ಮೀಟರ್ ಅಗಲವಾಗಿದೆ. ಕೋಟೆಯ ವಾಯುವ್ಯ ಮೂಲೆಯ ಕೊತ್ತಲಕ್ಕೆ ಹೊಂದಿಕೊಂಡಂತೆ ಒಳಭಾಗದಲ್ಲಿ ಒಂದು ವರ್ತುಲಾಕಾರದ ಗೋಪುರವನ್ನು ಮಾಡಲಾಗಿದೆ ಚೌಕಾಕಾರದ ಕೊತ್ತಲಕ್ಕಿಂತಲೂ ಇದು ಎತ್ತರವಾಗಿದ್ದು ಮೇಲ್ಭಾಗದಲ್ಲಿ ಫಿರಂಗಿಗಳನ್ನಿಡಲು ಮಾಡಿದ ವ್ಯವಸ್ಥೆಯಂತೆ ಕಂಡುಬರುತ್ತವೆ.[೧೦೨]

**ಗಿರಿದುರ್ಗಗಳು**

ಮೈಸೂರು ಒಡೆಯರ ಕಾಲದಲ್ಲಿ ಹಲವಾರು ಕೋಟೆಗಳು ವಿವಿಧ ಪಾಳೆಗಾರರಿಂದ ನಿರ್ಮಿತವಾಗಿವೆ. ಆದರೆ ಮೈಸೂರು ಒಡೆಯರು ಅವುಗಳನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡು ತಮ್ಮ ಆಡಳಿತಕ್ಕೆ ಸೇರಿಸಿಕೊಂಡರು ಅವುಗಳಲ್ಲಿ ಪ್ರಮುಖವಾಗಿ ಸಾವನದುರ್ಗ, ಶಿವಗಂಗೆ, ಹುತ್ರಿದುರ್ಗ, ಹುಲಿಯೂರುದುರ್ಗ, ನಿಜಗಲ್ಲು, ಚಿತ್ರದುರ್ಗ, ರಾಮಗಿರಿ, ಶಿವಗಿರಿ, ಹುಲಿಕಲ್ಲು, ಮಂಜಿರಾಬಾದ್ ಕೋಟೆಗಳು ಪ್ರಮುಖವಾಗಿವೆ.

**ಸಾವನದುರ್ಗ**

ಸಾವನದುರ್ಗವು ಮಾಗಡಿಯಿಂದ ಆಗ್ನೇಯಕ್ಕೆ ೧೧ ಕಿ.ಮೀ ದೂರದಲ್ಲಿದ್ದು ಸಮುದ್ರ ಮಟ್ಟದಿಂದ ಸುಮಾರು ೧೦೦೯ ಮೀಟರ್ ಎತ್ತರದಲ್ಲಿದೆ. ಗಂಗರು ಮತ್ತು ಹೊಯ್ಸಳರ ಕಾಲದಿಂದಲೂ ಸಹ ಇದನ್ನು ಸಾಮಂತರಾಯನ ದುರ್ಗವೆಂದು ಕರೆಯುತ್ತಿದ್ದರು. ವಿಜಯನಗರ ಕಾಲದಲ್ಲಿ ಸ್ಥಳೀಯನಾಯಕರುಗಳು ಮತ್ತು ಕೆಂಪೇಗೌಡ ಮತ್ತು ಮೈಸೂರು ಒಡೆಯರ ವಿವಿಧ ಕಾಲಘಟ್ಟಗಳಲ್ಲಿ ಕೋಟೆಯನ್ನು ಬಲಪಡಿಸಲಾಯಿತು. ಕ್ರಿ.ಶ.೧೭೨೮ ರಲ್ಲಿ ಮುಮ್ಮಡಿ ಕೆಂಪನಂಜಪ್ಪ ಗೌಡನನ್ನು ಸೋಲಿಸಿ ದಳವಾಯಿ ದೇವರಾಜನು ಮೈಸೂರು ಒಡೆಯರು ಅಧಿಕಾರವನ್ನು ವಿಸ್ತರಿಸಲು ಕಾರಣವಾದನು. ನೆಲಪಟ್ಟಣವು ಸಾವನದುರ್ಗದಲ್ಲಿನ ಭದ್ರವಾದ ಕೋಟೆಗಳ ನಿರ್ಮಾಣದಿಂದ ರಕ್ಷಿಸಲ್ಪಟ್ಟದ್ದು ಮೂಲ ಕೋಟೆಯ ಭಾಗಗಳು ನಾಶವಾಗಿವೆ.[೧೦೩]

ನೆಲಪಟ್ಟಣದ ಸುತ್ತಲೂ ಕೋಟೆಗೋಡೆಗಳ ಅವಶೇಷಗಳು ಕಂಡುಬರುತ್ತವೆ. ಪ್ರಮುಖವಾಗಿ ಕೋಟೆಯನ್ನು ನೆಲಪಟ್ಟಣದ ಸುತ್ತಲಿನ ಪ್ರಾಥಮಿಕ ಗೋಡೆ ಮತ್ತು ಅದನ್ನು ಸುತ್ತುವರಿದಂತೆ ನಿರ್ಮಿಸಲಾಗಿರುವ ಎರಡನೆಯ ಹಂತದ ಗೋಡೆ ಈ ರಕ್ಷಣಾ ವಾಸ್ತುವನ್ನು ಚೌಕಾಕಾರದಲ್ಲಿ ನಿರ್ಮಿಸಲಾಗಿದೆ. ಕೋಟೆಗೋಡೆಯು ಸುಮಾರು ೧೬ಅಡಿ ಎತ್ತರ ೫ಅಡಿ ಅಗಲವಾಗಿ ರಚನೆಯಾಗಿವೆ. ಕರಿಯಬೆಟ್ಟ, ಬಿಳಿಯಬೆಟ್ಟ ಮತ್ತು ಬಸವನ ಬೆಟ್ಟಗಳೆಂಬ ಬೆಟ್ಟಗಳನ್ನು ಒಳಗೊಂಡಂತೆ ನೆಲಪಟ್ಟಣದ ಸೂತ್ತಲೂ ಎರಡನೆಯ ಹಂತದ ಬಲವಾದ ರಕ್ಷಣಾ ಕೋಟೆಯಿದೆ. ಕರಿಯಬೆಟ್ಟ ಮತ್ತು ಬಿಳಿಯಬೆಟ್ಟಗಳಿಗೆ ಅರಮನೆಯ ದ್ವಾರದಿಂದ ಪ್ರವೇಶಿಸಬೇಕಾಗುತ್ತದೆ. ಈ ನೆಲಪಟ್ಟಣವು ಅರಸರ ವಾಸಸ್ಥಳವಾಗಿದ್ದಿತು.

**ಕರಿಬೆಟ್ಟದ ಕೋಟೆ**

ಈ ಕೋಟೆಯನ್ನು ಎತ್ತರದ ಬೆಟ್ಟದ ತುದಿಯವರೆಗೆ ದಪ್ಪದಪ್ಪ ಕಲ್ಲುಗಳಿಂದ ನಿರ್ಮಿಸಲಾಗಿದೆ. ಅನೇಕ ದ್ವಾರಗಳನ್ನು ನಿರ್ಮಿಸಲಾಗಿದ್ದು ಶತ್ರುಗಳು ಸುಲಭವಾಗಿ ಒಳನುಸುಳದಂತೆ ಇಂಗ್ಲೀಷಿನ Z ಆಕೃತಿಯಲ್ಲಿ ದ್ವಾರಗಳನ್ನು ನಿರ್ಮಿಸಲಾಗಿದೆ. ಅಲ್ಲದೆ ಕರಿಯ ಬೆಟ್ಟಕ್ಕೆ ದಾರಿಯಿರುವಲ್ಲಿ ಸ್ವಾಭಾವಿಕವಾದ ಕಂದಕವಿದ್ದು. ಗುರ್ತಿಸಲಾರದಷ್ಟು ಆಳದಲ್ಲಿ ಇದು ರಚನೆಯಾಗಿದೆ. ಇಲ್ಲಿನ ಕೊತ್ತಲಗಳು ಚೌಕಾಕಾರದಲ್ಲಿದ್ದು ಕೆಲವು ಕಡೆಗಳಲ್ಲಿ ವರ್ತುಲಾಕಾರದಲ್ಲಿ ನಿರ್ಮಿಸಲಾಗಿದೆ ಈ ಕೊತ್ತಲಗಳು ೪ಮೀ ವಿಸ್ತೀರ್ಣ ಚೌಕಾಕಾರದಲ್ಲಿವೆ. ಕೋಟೆಯ ಬದಿಯಲ್ಲಿ ಬರುವ ವೈರಿಗಳನ್ನು ಗಮನಿಸಲು ಸಹಕಾರಿಯಾಗಿವೆ. ಬೆಟ್ಟದ ಮೇಲ್ಭಾಗದಲ್ಲಿ ಉಗ್ರಾಣಗಳು ರಚನೆಯಾಗಿವೆ.

**ಬಿಳಿಬೆಟ್ಟದ ಕೋಟೆ**

ಪೂರ್ವದಿಕ್ಕಿನಲ್ಲಿರುವ ಬಿಳಿಯ ಬೆಟ್ಟದ ಪ್ರದೇಶದಲ್ಲಿ ಕೋಟೆಯನ್ನು ನಿರ್ಮಿಸಲಾಗಿದ್ದು ಚೌಕಾಕಾರ ಮತ್ತು ವರ್ತುಲಾಕಾರದಲ್ಲಿ ನಿರ್ಮಿಸಲಾಗಿದೆ. ರಕ್ಷಣೆಗೆ ಸಂಬಂಧಿಸಿದಂತೆ ಮದ್ದಿನ ಮನೆ ಕಾವಲುಮನೆಗಳನ್ನು ಗುರ್ತಿಸಬಹುದಾಗಿದೆ. ಈ ಬೆಟ್ಟದ ಮೇಲ್ಭಾಗದ ಸುತ್ತಲೂ ನಿರ್ಮಿಸಿರುವ ಗೋಡೆಯು ಅನೇಕ ಕೊತ್ತಲಗಳಿಂದ ಕೂಡಿದೆ. ಈ ಸುತ್ತಲಿನ ಆವರಣದಲ್ಲಿರಬಹುದಾದ ಕಾವಲುಮನೆ ಈಗ ನಾಶವಾಗಿದ್ದು ಸಾಧಾರಣವಾದ ಕೋಟೆಯ ಪ್ರವೇಶದ್ವಾರವನ್ನು ಹೊಂದಿದ್ದು ವೈರಿಗಳು ಸುಲಭವಾಗಿ ಪ್ರವೇಶಿಸಲು ಸಾಧ್ಯವಾಗದಂತೆ ಅಡ್ಡಗೋಡೆಯನ್ನು ನಿರ್ಮಿಸಲಾಗಿದೆ. ಈ ದ್ವಾರದ ಪಕ್ಕದ ಕೊತ್ತಲಗಳು ವರ್ತುಲಾಕಾರವಾಗಿದ್ದು, ಇವು ಬೆಂಗಳೂರು ಅಥವಾ ಶ್ರೀರಂಗಪಟ್ಟಣ ಕೋಟೆಯ ಮಾದರಿಯಲ್ಲಿ ನಿರ್ಮಿತವಾಗಿವೆ. ಆದ್ದರಿಂದ ಒಂದೇ ಕಾಲಮಾನದಲ್ಲಿ ರಚನೆಯಾಗಿವೆ ಎಂದು ಹೇಳಬಹುದು.[೧೦೪]

**ಬಸವನ ದುರ್ಗ**

ಸಾವನದುರ್ಗ ದಕ್ಷಿಣ ಭಾಗದ ಬೆಟ್ಟದ ಮೇಲಿರುವ ಕೋಟೆ ಪ್ರದೇಶವಾಗಿದೆ. ಈ ಬೆಟ್ಟವು ಸಮತಟ್ಟಾಗಿದ್ದು ದಕ್ಷಿಣ ಭಾಗದಲ್ಲಿ ರಕ್ಷಣಾ ವಾಸ್ತುವಿನಂತೆ ರಚನೆಯಾಗಿದ್ದು ಶತ್ರುಗಳ ಆಕ್ರಮಣವನ್ನು ಪ್ರಾಕೃತಿಕವಾಗಿ ತಡೆಗಟ್ಟುವಂತೆ ರಚನೆಯಾಗಿದೆ. ಇಲ್ಲಿ ಕಾವಲು ಗೋಪುರಗಳು ಸೈನಿಕರ ಕಟ್ಟಡಗಳು ಅರಮನೆ ಕಟ್ಟಡಗಳು ಮೊದಲಾದವುಗಳನ್ನು ಕಾಣಬಹುದಾಗಿದೆ. ಕೋಟೆ ಗೋಡೆಯು ಸುಮಾರು ೨ರಿಂದ ಮೂರು ಮೀಟರ್ ಎತ್ತರವಾಗಿದ್ದು ನಾಲ್ಕು ಪ್ರವೇಶದ್ವಾರಗಳನ್ನು ಹೊಂದಿದೆ. ಅರಮನೆಯ ಪ್ರವೇಶದ್ವಾರದ ೪ ಮೂಲೆಗಳಲ್ಲಿ ಚೌಕಾಕಾರದ ಕೊತ್ತಲಗಳನ್ನು ರಚಿಸಲಾಗಿದೆ. ಅಲ್ಲದೆ ಈ ಮೂರು ಬೆಟ್ಟಗಳ ಮೇಲಿರುವ ನೀರಿನ ದೋಣೆಗಳು ಸೈನಿಕರಿಗೆ ಸದಾಕಾಲ ನೀರನ್ನು ಒದಗಿಸುವ ಮೂಲಗಳಾಗಿದ್ದವು.[೧೦೫] ಒಟ್ಟಾರೆಯಾಗಿ ಸಾವನದುರ್ಗವು ಮೈಸೂರು ಒಡೆಯರ ಕಾಲದಲ್ಲಿ ಪ್ರಮುಖ ಗಿರಿದುರ್ಗವಾಗಿತ್ತು.

**ಹುಲಿಯೂರುದುರ್ಗ ಕೋಟೆ**

ಪ್ರಾಚೀನ ಕಾಲದಲ್ಲಿ ಈ ಗ್ರಾಮದಲ್ಲಿ ಹುಲಿಗಳು ಹೆಚ್ಚಾಗಿದ್ದರಿಂದ ಹುಲಿಯೂರು ಎಂಬ ಹೆಸರು ಬಂದಿದೆ. ಹುಲಿಯೂರನ್ನು ಹಿಂದೆ ವ್ಯಾಘ್ರಪುರ, ಚಿತ್ರಕಾಯಪುರ ಎಂಬುದಾಗಿಯೂ ಶಾಂತೇಶನ ಸಿದ್ದೇಶ್ವರ ಪುರಾಣದಲ್ಲಿ ಉಲ್ಲೇಖಿಸಲಾಗಿದೆ. ಲಕ್ಕಶೆಟ್ಟಿಪುರ ಕಿಚ್ಚವಾಡಿ, ಉಜ್ಜನಿ ಶಾಸನಗಳು ಕ್ರಿ.ಶ. ೧೫೪೩ರವರೆಗೂ ಈ ಗ್ರಾಮಕ್ಕೆ ಹುಲಿಯೂರು ಎಂಬುದಾಗಿಯೇ ಉಲ್ಲೇಖಿಸಿದೆ. ಕ್ರಿ.ಶ.೧೬೩೮ರಲ್ಲಿ ಈ ಕೋಟೆಯು ನಿರ್ಮಾಣವಾಗಿದೆ. ಅದೇ ವರ್ಷದಲ್ಲಿ ಗಡಿದುರ್ಗ ನಿರ್ಮಾಣವಾಗಿದ್ದನ್ನು ಸ್ಪಷ್ಟವಾಗಿ ಉಲ್ಲೇಖಿಸುವುದರಿಂದ ಹುಲಿಯೂರುದುರ್ಗವಾಗಿ ಇದು ಪ್ರಸಿದ್ಧಿಗೆ ಬಂದಿತು. ಇದು ಯಲಹಂಕ ನಾಡಪ್ರಭುಗಳ ಕಾಲದಲ್ಲಿ ರಚನೆಯಾದ ಕೋಟೆ. ಇದೊಂದು ಆಯಕಟ್ಟಿನ ಪ್ರದೇಶವಾಗಿದ್ದು, ನಂತರ ಚಿಕ್ಕದೇವರಾಜ ಒಡೆಯರು, ಹೈದರ್ ಮತ್ತು ಟಿಪ್ಪು

ಸುಲ್ತಾನರ ಆಳ್ವಿಕೆಗೆ ಒಳಪಟ್ಟು ಹಲವಾರು ಬಾರಿ ಹಲವು ಭಾಗಗಳು ವಿಸ್ತೀರ್ಣವಾಗಿವೆ. ಟಿಪ್ಪು ಸುಲ್ತಾನನು ಸೈನ್ಯ ಜಮಾವಣೆಗಾಗಿ ವಿವಿಧ ರೀತಿಯ ಮಾರ್ಪಾಡುಗಳೊಂದಿಗೆ ಪುನರ್‌ನಿರ್ಮಿಸಿದನು. ಕ್ರಿ.ಶ. ೧೬೪೦ರಲ್ಲಿ ಅಫಜಲ್ ಖಾನ್ ಮತ್ತು ಒಡೆಯರ ನಡುವೆ ಯುದ್ಧ ನಡೆದಾಗ ಕೋಟೆಯ ಸ್ವಲ್ಪ ಭಾಗ ಹಾಳಾಯಿತು. ಕ್ರಿ.ಶ.೧೬೬೭ರಲ್ಲಿ ದೇವರಾಜ ಒಡೆಯರು ಈ ಕೋಟೆಯನ್ನು ತಮ್ಮ ವಶಮಾಡಿಕೊಂಡರು. ಆದರೆ ೧೭೮೯ರಲ್ಲಿ ಟಿಪ್ಪುವಿನ ಕಾಲದಲ್ಲಿ ಬ್ರಿಟಿಷ್ ಸೇನಾಧಿಕಾರಿಯಾಗಿದ್ದ ಲಾರ್ಡ್ ಕಾರ್ನವಾಲೀಸನು ಈ ಕೋಟೆಯನ್ನು ವಶಕ್ಕೆ ಪಡೆದು ದುರಸ್ಥಿಮಾಡಿಸಿದ. ಕ್ರಿ.ಶ.೧೭೯೨ರಲ್ಲಿ ಕರ್ನಲ್ ಮಾಕ್ಸ್‌ವೆಲ್ ಈ ಕೋಟೆಯ ಕಿಲ್ಲೆದಾರನಿಂದ ಮತ್ತೆ ತನ್ನ ಅಧೀನಕ್ಕೆ ತೆಗೆದುಕೊಂಡನು.

ಇಡೀ ಬೆಟ್ಟವೇ ಬೋರಲಾದ ತೆಂಗಿನಚಿಪ್ಪಿನ ಆಕಾರದಲ್ಲಿ ರಚನೆಯಾಗಿರುವುದರಿಂದ ಶತ್ರುಗಳು ಸುಲಭವಾಗಿ ಈ ದುರ್ಗವನ್ನು ಏರುವುದು ಕಷ್ಟಸಾಧ್ಯ. ಈ ಮದ್ದಿನ ದ್ವಾರವು ಒಂದು ಮೀಟರ್ ಎತ್ತರದಲ್ಲಿ ನಿರ್ಮಾಣವಾಗಿದೆ. ದ್ವಾರದಲ್ಲಿರುವ ಕಂಬಗಳಿಗೆ ಬಾಗಿಲನ್ನು ಸೇರಿಸಿದ್ದರೆಂಬ ಅಂಶವು ಸೂಕ್ಷ್ಮವಾಗಿ ಗಮನಿಸಿದರೆ ಮಾತ್ರ ನಮಗೆ ತಿಳಿಯುತ್ತದೆ. ಉಳಿದಂತೆ ಇಟ್ಟಿಗೆ ಗಾರೆಗಳಿಂದ ನಿರ್ಮಾಣವಾಗಿರುವ ತುಪ್ಪದಕೊಳ, ಧಾನ್ಯದ ಕಣಜ, ನೀರಿನಕಟ್ಟೆ, ಕೆಲವು ಕಟ್ಟಡಗಳ ತಳಪಾಯಗಳು. ಕಂಡುಬರುತ್ತವೆ. ಕೋಟೆಯಲ್ಲಿ ನೀರಿಗೆ ಅಭಾವವಾಗಬಾರದೆಂದು ಇಳಿಜಾರಿಗೆ ತಡೆಗೋಡೆಯನ್ನು ನಿರ್ಮಿಸಿ ನೀರನ್ನು ಸಂಗ್ರಹಿಸಿರುವುದನ್ನು ನೋಡಬಹುದು. ಈ ಕೋಟೆಯ ನಿರ್ಮಾಣವು ಕಡಿದಾದ ಬೆಟ್ಟಗಳ ಸಮೂಹವನ್ನು ಬಳಸಿಕೊಂಡು ನಿರ್ಮಿಸಲಾಗಿದೆ. ಕಣಿವೆಯ ಇಳಿಜಾರಿನ ಪ್ರದೇಶದಲ್ಲಿ ೫ ಮೀಟರ್ ಎತ್ತರವಾಗಿದ್ದು ಉಳಿದಂತೆ ಬೆಟ್ಟದ ಬಂಡೆಯಲ್ಲಿ ಗೋಡೆಯು ೨ ರಿಂದ ೩ ಮೀಟರ್ ಎತ್ತರ ಹಾಗೂ ೧.೫ ಮೀಟರ್ ದಪ್ಪವಾಗಿದೆ. ಗೋಡೆಗಳಲ್ಲಿ ಅಲ್ಲಲ್ಲಿ ಚೌಕಾಕಾರದ ಕೊತ್ತಲಗಳನ್ನು ನಿರ್ಮಿಸಿ ೫ ಮೀಟರ್ ಉದ್ದವಾಗಿ ಕೊತ್ತಲಗಳನ್ನು ಮುಂಚಾ ಚಿಕೊಂಡಂತೆ ನಿರ್ಮಿಸಲಾಗಿದೆ. ಇವು ೭ ಮೀಟರ್ ಎತ್ತರ ಮತ್ತು ೪ ಮೀಟರ್ ಅಗಲವಾಗಿದೆ. ತಗ್ಗು ಪ್ರದೇಶದಲ್ಲಿರುವ ಕೋಟೆಗೋಡೆಗಳು ಹೆಚ್ಚು ಭದ್ರವಾಗಿದ್ದು ವೈರಿಗಳ ಆಕ್ರಮಣವನ್ನು ಸಮರ್ಥವಾಗಿ ತಡೆಯಲು ಸಹಾಯಕವಾಗಿದೆ. ಕೋಟೆಯ ಕುಂಬಿಗೋಡೆಯಲ್ಲಿ ಕಿಂಡಿಗಳನ್ನು ನಿರ್ಮಿಸಲಾಗಿದ್ದು ಇವುಗಳ ಮೂಲಕ ಶತ್ರುಗಳ ಚಲನವಲನದ ಮೇಲೆ ಗಮನವಿಡಲು ಮತ್ತು ಆಕ್ರಮಣ ಮಾಡಲು ಸಹಾಯಕವಾಗಿವೆ.

ಈ ಕೋಟೆಯು ಐದು ದ್ವಾರಗಳನ್ನು ಹೊಂದಿದೆ. ಈ ದ್ವಾರಗಳು ಸರಳವಾದ ಬಾಗಿಲುವಾಡಗಳಿಂದ ಕೂಡಿದ್ದು ರಕ್ಷಣಾತ್ಮಕವಾಗಿ ರಚನೆಯಾಗಿವೆ. ಇವು ವೈರಿಗಳು ಸುಲಭವಾಗಿ ಪ್ರವೇಶಿಸಲು ಅಸಾಧ್ಯವಾಗದಂತೆ ದ್ವಾರದ ಮುಂಭಾಗದಲ್ಲಿ ಇಕ್ಕಟ್ಟಾದ ದಾರಿಗಳನ್ನು ಮರೆಮಾಡುವ ತಡೆಗೋಡೆಗಳನ್ನು ಅಡ್ಡಲಾಗಿ ನಿರ್ಮಿಸಲಾಗಿದೆ.[೧೦೬] ಊರಿನ ಕೋಟೆಯಿಂದ ಬೆಟ್ಟದ ಕೋಟೆಗೆ ದಕ್ಷಿಣಾಭಿಮುಖವಾಗಿ ನಿರ್ಮಿಸಲಾದ ಈ ದ್ವಾರವು ಪ್ರಸ್ತುತದಲ್ಲಿಯೂ ಕೂಡ ಸುಸ್ಥಿತಿಯಲ್ಲಿದೆ. ಕೋಟೆಯ ದಕ್ಷಿಣದ್ವಾರದ ಬಾಗಿಲುವಾಡವು ಸರಳವಾಗಿದ್ದು ಬಾಗಿಲಿನ ಎಡಗಡೆಯಲ್ಲಿ

ಮುಂಚಾಚಿದ ಚೌಕಾಕಾರದ ಕೊತ್ತಲುವಿದ್ದು ಆಯತಾಕಾರದ ಕೊತ್ತಲವು ದ್ವಾರಕ್ಕೆ ಹೆಚ್ಚಿನ ಭದ್ರತೆಯನ್ನು ನೀಡುತ್ತದೆ. ಈ ದ್ವಾರವು ವೈರಿಗಳಿಗೆ ಪ್ರವೇಶ ಮಾಡಲು ಅವಕಾಶವನ್ನು ನೀಡದಂತೆ ಇಕ್ಕಟ್ಟಾದ ರಸ್ತೆಗಳಿವೆ. ಬೆಟ್ಟದ ಮೇಲ್ಭಾಗದಲ್ಲಿನ ವಿಶಾಲವಾದ ಪ್ರದೇಶದಲ್ಲಿ ಅರಮನೆ ಆವರಣವಿದೆ. ಈ ಅರಮನೆಯ ಆವರಣಕ್ಕೆ ಹೊಂದಿಕೊಂಡಂತೆ. ಉಗ್ರಾಣ, ಮದ್ದಿನಮನೆ, ನೀರಿನ ದೋಣಿಗಳು ಇತ್ಯಾದಿಗಳು ನಿರ್ಮಿತವಾಗಿವೆ. ಇವುಗಳಿಗೆ ರಕ್ಷಣೆಯನ್ನು ಒದಗಿಸುವಂತೆ ಕೋಟೆಗೋಡೆ ಮತ್ತು ಬುರುಜುಗಳು ನಿರ್ಮಾಣವಾಗಿವೆ. ಅಲ್ಲದೆ ಕೋಟೆಯ ಮಧ್ಯದಲ್ಲಿ ಉತ್ತರಾಭಿಮುಖವಾಗಿ ಆಯತಾಕಾರದ ಅರಮನೆಯನ್ನು ನಿರ್ಮಿಸಿದ್ದು ಪಡಸಾಲೆ, ಜಗಲಿಗಳು, ಶಯನ ಗೃಹಗಳಿದ್ದು ಅಕ್ಕಪಕ್ಕದಲ್ಲಿ ಸೈನಿಕರ ಮನೆಗಳನ್ನು ಕಾಣಬಹುದು.

ಇಲ್ಲಿರುವಂತಹ ನೀರಿನ ದೋಣೆಗಳು ಮೇಲ್ಭಾಗದಲ್ಲಿ ವಾಸಮಾಡುತ್ತಿದ್ದ ಜನರಿಗೆ ನೈಸರ್ಗಿಕವಾಗಿಯೇ ನೀರಿನ ವ್ಯವಸ್ಥೆಯನ್ನು ಕಲ್ಪಿಸಿವೆ. ಬೆಟ್ಟದಲ್ಲಿ ಮಳೆನೀರನ್ನು ಸಾಕಷ್ಟು ಪ್ರಮಾಣದಲ್ಲಿ ಶೇಖರಿಸಲು ಈ ದೋಣೆಗಳು ಸಹಕಾರಿಯಾಗಿವೆ. ಬೆಟ್ಟದ ಆಗ್ನೇಯ ಭಾಗದಲ್ಲಿ ದೋಣೆಗೆ ಗೋಡೆಯನ್ನು ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿಸಲಾಗಿದೆ.

**ರಾಮಗಿರಿ ಕೋಟೆ**

ಅರ್ಕಾವತಿ ನದಿಯ ಕಣಿವೆಯ ಎಡಭಾಗಕ್ಕೆ ಕಡಿದಾದ ಬೆಟ್ಟದಲ್ಲಿ ನಿರ್ಮಾಣವಾಗಿದ್ದು ಶಿವಗಿರಿ ಎಂಬ ಬೆಟ್ಟವನ್ನು ಹೊಂದಿಕೊಂಡಂತೆ ಕೋಟೆಯನ್ನು ನಿರ್ಮಿಸಲಾಗಿತ್ತು. ಕ್ರಿ.ಶ.೧೫೪೦ರ ಶಾಸನದ ಪ್ರಕಾರ ರಾಮಗಿರಿಯಲ್ಲಿ ಕಾರ್ಖಾನೆ ಬಂಡೆ ಎಂಬ ಪ್ರದೇಶವಿದು ಯಲಹಂಕ ನಾಡಪ್ರಭುಗಳ ಕಾಲದಲ್ಲೇ ಇದು ಪ್ರಸಿದ್ಧಿಯನ್ನು ಹೊಂದಿತ್ತು.[೧೦೭]

ಕೋಟೆಯು ಸುಮಾರು ಮೂರು ಹಂತಗಳನ್ನು ಹೊಂದಿದ್ದು ಸುಮಾರು ೪ ಮೀಟರ್ ಎತ್ತರದ ಕೋಟೆಗೋಡೆಯನ್ನು ನಿರ್ಮಿಸಲಾಗಿತ್ತು. ಎರಡನೆಯ ಹಂತದ ಕೋಟೆಯಲ್ಲಿ ಕೋಟೆಯನ್ನು ನಿರ್ವಹಣೆ ಮಾಡುತ್ತಿದ್ದ ಅಧಿಕಾರಿಗಳ ಹಾಗೂ ಸೈನಿಕರ ವಾಸಸ್ಥಳವಿದ್ದಿತು. ಈ ಕೋಟೆಯು ಬ್ರಿಟಿಷ್ ಸೈನ್ಯ ಮತ್ತು ಟಿಪ್ಪು ಸುಲ್ತಾನನಿ ಕ್ರಿ.ಶ.೧೭೯೧ರಲ್ಲಿ ಒಪ್ಪಂದವಾಗಿ ಪುನಃ ಟಿಪ್ಪುವಿನ ಆಳ್ವಿಕೆಗೆ ಒಳಪಟ್ಟಿತ್ತು. ಅಲ್ಲದೆ ಆ ಸಂದರ್ಭದಲ್ಲಿ ಟಿಪ್ಪು ಬ್ರಿಟಿಷರ ಸೈನ್ಯ ಜಮಾವಣೆಯಾಗದಂತೆ ಕೋಟೆಯನ್ನು ನೆಲಸಮಮಾಡಿದನೆಂದು ಬುಕಾನನ್ ಉಲ್ಲೇಖಿಸುತ್ತಾನೆ.[೧೧೩] ಈ ಕೋಟೆಯನ್ನು ಒಡೆದು ಹಾಕಿದ್ದರಿಂದ ಶಾಶ್ವತ ಸೈನಿಕ ನೆಲೆಗಳಾದ ಇವು ಅವನತಿಯತ್ತ ಸಾಗಿದವು. ಶಿವಗಿರಿಯಿಂದ ಬ್ರಿಟಿಷರ ಮೇಲೆ ಮೈಸೂರಿನ ಸೈನ್ಯವು ಆಕ್ರಮಣ ಮಾಡಬಹುದಾಗಿದ್ದರೂ ಆ ರೀತಿಯ ಯಾವುದೇ ಪ್ರಯತ್ನಗಳು ಆಗಲಿಲ್ಲ. ಶಿವಗಿರಿಕೋಟೆಯು ಇಟ್ಟಿಗೆ ಗಾರೆಗಳಿಂದ ನಿರ್ಮಾಣವಾಗಿದ್ದು ಮೂಲತಃ ಟಿಪ್ಪುವಿನ ಕಾಲದ ಮಾರ್ಪಾಡಾಗಿವೆ ಎಂದು ಹೇಳಬಹುದು.

**ನಂದಿದುರ್ಗ**

ನಂದಿದುರ್ಗವು. ಚೋಳರ ಕಾಲದಿಂದಲೂ ಸಹ ಒಂದು ಪ್ರಧಾನವಾದ ಗಿರಿದುರ್ಗವಾಗಿತ್ತು. ಯಲಹಂಕ ನಾಡಪ್ರಭುಗಳು ನಂದಿಬೆಟ್ಟದ ಪರಿಸರದಲ್ಲಿ ತಮ್ಮ ಆಳ್ವಿಕೆಯನ್ನು ನಂದಿದುರ್ಗಕ್ಕೂ

ವಿಸ್ತರಿಸಿದರು. ಆದರೂ ಸಹ ಹೈದರನ ಕಾಲದಲ್ಲಿ ಮೈಸೂರು ಒಡೆಯರ ಆಳ್ವಿಕೆಗೆ ಒಳಪಟ್ಟಿತ್ತು. ಅಲ್ಲದೆ ಟಿಪ್ಪುವಿನ ಆಡಳಿತಾವಧಿಯಲ್ಲಿ ಪ್ರಮುಖವಾದ ಗಿರಿದುರ್ಗವಾಗಿ ರೂಪುಗೊಂಡಿತು. ಟಿಪ್ಪುವಿನ ಕಾಲಾವಧಿಯಲ್ಲಿ ಜೀರ್ಣೋದ್ಧಾರಗೊಂಡಿತು. ಕೋಟೆಗೋಡೆಯು ಮೂರರಿಂದ ಐದುಅಡಿಗಳಷ್ಟು ಎತ್ತರವಾಗಿದ್ದು ವರ್ತುಲಾಕಾರದ ಕೊತ್ತಲಗಳನ್ನು ನಿರ್ಮಿಸಲಾಗಿದೆ. ಕೇವಲ ಬೆರಳೆಣಿಕೆಯಷ್ಟು ಚೌಕಾಕಾರದ ಕೊತ್ತಲಗಳು ರಚನೆಯಾಗಿವೆ. ಕಲ್ಲು, ಇಟ್ಟಿಗೆ ಮತ್ತು ಗಾರೆಯನ್ನು ಬಳಸಲಾಗಿದೆ. ಇಲ್ಲಿನ ವಾತಾವರಣವು ತಂಪಾಗಿದ್ದುದರಿಂದ ಟಿಪ್ಪು ತನ್ನ ಬೇಸಿಗೆ ಅರಮನೆಯನ್ನು ಇಲ್ಲಿ ನಿರ್ಮಿಸಿಕೊಂಡಿದ್ದನು. ಇಳಿಜಾರಾದ ವಾಯುವ್ಯ ಭಾಗದಲ್ಲಿ ೪ ಸುತ್ತಿನ ಕೋಟೆಯು ನಿರ್ಮಾಣವಾಗಿದ್ದು ಒಂದು ಮತ್ತು ಎರಡನೇ ಸುತ್ತಿನ ಕೋಟೆಯು ಹಾಳಾಗಿದೆ. ಆದರೆ ಮೂರು ಮತ್ತು ನಾಲ್ಕನೇ ಸುತ್ತಿನ ಕೋಟೆಯು ಸುಸ್ತಿರವಾಗಿದೆ. ಮೂರನೆಯ ಹಂತದ ಪ್ರವೇಶ ದ್ವಾರವು ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿ ಇಟ್ಟಿಗೆ ಮತ್ತು ಗಾರೆಗಳ ಬಳಕೆಯಿಂದ ನಿರ್ಮಾಣವಾಗಿದೆ. ೪ನೇ ಹಂತದ ಕೋಟೆಗೋಡೆಯು ಎರಡರಿಂದ ಮೂರು ಭಾಗವಾದ ಅಂಬುಗ ಕಿಂಡಿಗಳು ಮತ್ತು ಕೋವಿಕಿಂಡಿಗಳು ರಚನೆಯಾಗಿದ್ದು ಶತ್ರುಗಳನ್ನು ಸುಲಭವಾಗಿ ಶತ್ರುಗಳ ಮೇಲೆ ನಿಗಾ ಇಡಲು ಇವು ಸಹಾಯಕವಾಗಿವೆ. ಫಿರಂಗಿಗಳಿಂದ ಧಾಳಿ ಮಾಡಲು ಸಹಾಯಕವಾಗುವಂತೆ ಕೊತ್ತಲಗಳನ್ನು ನಿರ್ಮಿಸಲಾಗಿದೆ. ಫಿರಂಗಿ ಗುಂಡುಗಳು ಕೊತ್ತಲಗಳಿಗೆ ತಾಗಿ ವಾಪಸ್ಸಾಗುವಂತೆ ಕೊತ್ತಲಗಳ ರಚನೆಯಾಗಿದೆ. ಕೊತ್ತಲಗಳು ಹೊರಗಿನಿಂದ ಸುಮಾರು ೩೫ ಡಿಗ್ರಿಗಳಷ್ಟು ಒಳಬಾಗಿದ್ದು ಟಿಪ್ಪುವಿನ ಕಾಲದ ರಕ್ಷಣಾತಂತ್ರಗಳನ್ನು ಸುಲಭವಾಗಿ ಗುರ್ತಿಸಲು ಸಾಧ್ಯವಾಗುತ್ತದೆ. ಈಶಾನ್ಯದಿಕ್ಕಿನಲ್ಲಿ ರಚನೆಯಾಗಿರುವ ಮದ್ದಿನಮನೆಯು ಸುಮಾರು ಹದಿನಾರು ಅಡಿಗಳಷ್ಟು ಉದ್ದ ೧೨ ಅಡಿಗಳಷ್ಟು ಅಗಲ ಮತ್ತು ೧೦ ಅಡಿಗಳಷ್ಟು ಎತ್ತರವಾಗಿದೆ. ಸಧ್ಯದ ಸ್ಥಿತಿಯಲ್ಲಿ ಇದು ಬಿದ್ದುಹೋಗಿದ್ದು ಕೇವಲ ಅವಶೇಷವಾಗಿ ಉಳಿದಿದೆ. ೪ನೇ ಹಂತದ ಕೋಟೆಯ ಪ್ರವೇಶ ದ್ವಾರವು ಬುರುಜುಗಳನ್ನು ಹೊಂದಿದ್ದು ಇವು ವೃತ್ತಾಕಾರದಲ್ಲಿವೆ. ಈ ಬುರುಜುಗಳು ಸುಮಾರು ೧೬ಅಡಿಗಳಷ್ಟು ಎತ್ತರವಾಗಿದೆ.

**ದೇವರಾಯನ ದುರ್ಗ**

ದೇವರಾಯನ ದುರ್ಗವು ಕ್ರಿ.ಶ.೧೬೭೬ರಲ್ಲಿ ಚಿಕ್ಕದೇವರಾಯ ಒಡೆಯರು ದೇವರಾಯನದುರ್ಗದ ಪಾಳೇಯಗಾರನಾದ ನರಸಪ್ಪ ಒಡೆಯರಿಂದ ಗೆದ್ದುಕೊಂಡರು.[೧೧೩] ಮೂರುಸುತ್ತಿನ ಕೋಟೆಯಾಗಿದೆ. ಕೋಟೆಯ ಮೊದಲನೆಯ ಬಾಗಿಲು ಸುಮಾರು ೧೬ ಅಡಿ ಎತ್ತರವಾಗಿದ್ದು ಎರಡು ಚೌಕಾಕಾರದ ಕೊತ್ತಲಗಳನ್ನು ಹೊಂದಿದೆ. ಈ ಕೊತ್ತಲವು ಸುಮಾರು ೮ ಅಡಿ ಉದ್ದ ಮತ್ತು ೬ ಅಡಿ ಅಗಲವಾಗಿವೆ. ಎರಡನೆಯ ಬಾಗಿಲಿನಲ್ಲಿ ಭದ್ರಾಕಾಳಿಯ ಮಂಟಪವಿದ್ದು ಶಿಥಿಲವಾಗಿದೆ. ಕೋಟೆಯ ನೈರುತ್ಯ ಮೂಲೆಯಲ್ಲಿ ಚೌಕಾಕಾರದ ಒಂದು ದೊಡ್ಡ ಬತ್ತೇರಿಯಿದ್ದು ನಾಲ್ಕು ಹಂತಗಳಲ್ಲಿ ಪಿರಮಿಡ್ ಮಾದರಿಯಲ್ಲಿ ಇದನ್ನು ನಿರ್ಮಿಸಲಾಗಿದೆ.

ಬತ್ತೇರಿಯ ಮೇಲಿನ ಕೈಪಿಡಿಗೋಡೆಯಲ್ಲಿ ತೋಪುಗಳಿಗಾಗಿ ಬಿಟ್ಟ ಅಗಲವಾದ ಸಂಧಿಗಳಿವೆ. ಕೋಟೆಯೊಳಗೆ ೧೦ ಕಂಬಗಳ ೪ ಸಾಲುಗಳಲ್ಲಿ ನಿರ್ಮಾಣವಾಗಿರುವ ಕುದುರೆ ಲಾಯವಿದೆ.[೧೯೪] ಈ ಕುದುರೆ ಲಾಯವು ಕೋಟೆ ರಕ್ಷಣೆಗೆ ಅಗತ್ಯವಾಗಿದ್ದ ಮತ್ತು ದೂರದ ಪ್ರದೇಶಗಳಿಗೆ ಸೈನ್ಯರವಾನೆಗೆ ಅಗತ್ಯವಾಗಿದ್ದ ಕುದುರೆಗಳಿಗೆ ಅವಶ್ಯಕವಾಗಿದ್ದ ಲಾಯವಿದ್ದಿರಬೇಕೆಂದು ತೋರುತ್ತದೆ.

ಮೂರನೆಯ ಬಾಗಿಲು ಸಾಮಾನ್ಯವಾದ ರಚನೆಯಿಂದ ಕೂಡಿದ್ದು ಅಷ್ಟೇನೂ ರಚನೆಯಲ್ಲಿ ವಿಶೇಷತೆಗಳನ್ನು ಹೊಂದಿಲ್ಲ. ನಾಲ್ಕನೆಯ ಬಾಗಿಲು ವೃತ್ತಾಕಾರದ ಕೊತ್ತಲಗಳ ಮಧ್ಯದಲ್ಲಿದೆ. ಈ ಬಾಗಿಲ ಮೇಲೆ ಮಣ್ಣಿನ ಕೈಪಿಡಿಗೋಡೆಯಿದ್ದು ಅಂಬುಗಂಡಿಗಳು ಮತ್ತು ಕೋವಿಕಿಂಡಿಗಳಿವೆ. ಆದರೆ ಐದು ಮತ್ತು ಆರನೆಯ ಬಾಗಿಲುಗಳು ವಿಸ್ತಾರವಾದ ಗೋಡೆಯನ್ನು ಹೊಂದಿದ್ದು ಬೆಟ್ಟದ ಮೇಲಿನ ಇಳಿಜಾರಿನ ಪ್ರದೇಶದಲ್ಲಿ ನಿರ್ಮಾಣವಾಗಿವೆ. ಏಳನೆಯ ಬಾಗಿಲನ್ನು ದಾಟಿ ಒಳಹೋದರೆ ಫಿರಂಗಿ ಬತ್ತೇರಿಯ ಅವಶೇಷಗಳು ಕಂಡುಬರುತ್ತವೆ. ಅಲ್ಲದೆ ೧೮ನೇ ಶತಮಾನದ ಮದ್ದಿನಮನೆಯಿದೆ. ಈ ಮದ್ದಿನ ಮನೆಗಳು ಹೈದರಾಲಿ ಮತ್ತು ಟಿಪ್ಪುವಿನ ಕಾಲದವು ಎಂದು ಸುಲಭವಾಗಿ ಗುರುತಿಸಬಹುದಾಗಿದೆ.

**ನಿಜಗಲ್‌ದುರ್ಗ**

ನಿಜಗಲ್‌ದುರ್ಗವು ಬೆಂಗಳೂರು ತುಮಕೂರು ಮಾರ್ಗದಲ್ಲಿರುವ ಡಾಬಸ್‌ಪೇಟೆಯಿಂದ ಸುಮಾರು ೨ಕಿ.ಮೀ. ದೂರದಲ್ಲಿ ಪಶ್ಚಿಮದಿಕ್ಕಿಗಿದೆ. ಇದೂ ಸಹ ಗಿರಿದುರ್ಗವಾಗಿದ್ದು ಮರಾಠರ ಆಳ್ವಿಕೆಯಲ್ಲಿದ್ದ ಈ ಕೋಟೆಗೆ ಹೈದರ್ ಅಲಿಯು ಚಿತ್ರದುರ್ಗ ಮದಕರಿನಾಯಕನ ನೇತೃತ್ವದಲ್ಲಿ ಲಗ್ಗೆಹಾಕಿದನು. ಅದಕ್ಕೆ ಕಾರಣವೆಂದರೆ ಈ ಕೋಟೆಯು ಒಂದು ಆಯಕಟ್ಟಿನ ಪ್ರದೇಶದಲ್ಲಿದ್ದು ದಕ್ಷಿಣದಲ್ಲಿ ಮರಾಠರ ವಶದಲ್ಲಿದ್ದಂತಹ ಒಂದು ಪ್ರಮುಖ ಕೋಟೆಯಾಗಿತ್ತು. ಅಲ್ಲದೆ ಈ ದುರ್ಗವನ್ನು ವಶಪಡಿಸಿಕೊಂಡರೆ ಮಾತ್ರ ಪದೇಪದೇ ಮೈಸೂರಿನ ಮೇಲೆ ಉಪಟಳವನ್ನು ತಪ್ಪಿಸಲು ಸಾಧ್ಯವಾಗುತ್ತಿತ್ತು.

ನಿಜಗಲ್ಲುದುರ್ಗವು ಪೂರ್ವಭಿಮುಖವಾಗಿ ಇಳಿಜಾರಾಗಿರುವ ಮತ್ತು ಉತ್ತರ, ಪಶ್ಚಿಮ ದಿಕ್ಕುಗಳಲ್ಲಿ ಅತ್ಯಂತ ಕಡಿದಾದ ಬೆಟ್ಟದಲ್ಲಿ ನಿರ್ಮಾಣವಾದ ಕೋಟೆಯಾಗಿದೆ. ಈ ಕೋಟೆಯು ಪೂರ್ವ ಮತ್ತು ದಕ್ಷಿಣ ದಿಕ್ಕಿನಲ್ಲಿ ಮೂರುಸುತ್ತಿನ ಕೋಟೆಯನ್ನು ಒಳಗೊಂಡಿದೆ. ಪೂರ್ವದಿಕ್ಕಿನಲ್ಲಿ ಪ್ರವೇಶದ್ವಾರವಿದ್ದು, ಎತ್ತರವಾದ ಕೋಟೆಗೋಡೆಗಳು, ಬುರುಜು ಬತ್ತೇರಿಗಳನ್ನು ಆಯತಾಕಾರದಲ್ಲಿ ನಿರ್ಮಿಸಲಾಗಿದೆ. ಅತ್ಯಂತ ವ್ಯವಸ್ಥಿತವಾದ ನಿರ್ಮಾಣವನ್ನು ಹೊಂದಿರುವ ಈ ಬೆಟ್ಟದ ಮೇಲೆ ನೀರಿನ ದೋಣೆಯಿದ್ದು ಯುದ್ಧ ಮತ್ತು ಇತರೆ ಸಂದರ್ಭಗಳಲ್ಲಿ ನೀರಿನ ವ್ಯವಸ್ಥೆಯನ್ನು ಸ್ವಾಭಾವಿಕವಾಗಿಯೇ ಕಲ್ಪಿಸುತ್ತಿತ್ತು. ಕೆಲವೊಮ್ಮೆ ಈ ನೀರಿನ ದೋಣೆಗಳಲ್ಲಿ ಸಹ ವಿಷಪೂರಿತ ಹಾವುಗಳು, ಮೊಸಳೆ ಮೊದಲಾದ ಕ್ರೂರ ವಿಷಜಂತುಗಳನ್ನು ಬಿಡಲಾಗುತ್ತಿತ್ತು. ಈ ಕೋಟೆ ಕಾಳಗದಲ್ಲಿ ಸೈನಿಕರು ಕಾದಎಣ್ಣೆ, ಬಿಸಿಅಂಬಲಿ, ಬಿಸಿ ಮರಳು, ಕಲ್ಲುಗುಂಡುಗಳನ್ನು ಕೋಟೆಯ ಲಗ್ಗೆಯೇರುವ ಶತ್ರುಗಳ ಮೇಲೆ ಪ್ರತಿದಾಳಿ ನಡೆಸಲಾಯಿತು. ಒಂದೆಡೆ ಮದ್ದುಗುಂಡುಗಳನ್ನು

ಶೇಖರಿಸಿಟ್ಟಿದ್ದ ಹೈದರನ ಯುದ್ಧಸನ್ನದ್ಧ ಕಾವಲುಪಡೆ ಅಡಿಗೆ ಮಾಡಲು ಬೆಂಕಿ ಹಾಕುವಂತೆ ನಾಟಕಮಾಡಿತು ಮತ್ತೊಂದೆಡೆ ಚಿತ್ರದುರ್ಗ ಬೇಡಪಡೆಯು ಉಡಗಳ ಸಹಾಯದಿಂದ ಪಶ್ಚಿಮ ಮತ್ತು ಉತ್ತರದಿಕ್ಕಿನಿಂದ ಲಗ್ಗೆಯೆರಿತು. ಕೋಟೆಯೊಳಗಡೆ ಹಠತ್ತಾಗಿ ಕಾಣಿಸಿಕೊಂಡು ಈ ಬೇಡಪಡೆ ಸುಲಭವಾಗಿ ಶತ್ರುಗಳ ಮೇಲೆ ದಾಳಿಮಾಡಿ ಕೋಟೆಯನ್ನು ವಶಪಡಿಸಿಕೊಂಡಿತು. ಅನಿರೀಕ್ಷಿತವಾದ ಈ ದಾಳಿಯಿಂದ ಮರಾಠರ ವಶದಲ್ಲಿದ್ದ ಈ ಕೋಟೆಯು ಹೈದರನ ವಶವಾಯಿತು.

ಈ ಕೋಟೆಯು ಅಲ್ಲಲ್ಲಿ ಕಾವಲು ಗೋಪುರಗಳು, ಬುರುಜುಗಳು ಬತ್ತೇರಿಗಳನ್ನು ಹೊಂದಿದೆ. ಈ ಕೋಟೆಯ ಬುರುಜುಗಳು ಮತ್ತು ಕಾವಲು ಗೋಪುರಗಳು ಆಯತಾಕಾರದಲ್ಲಿ ನಿರ್ಮಾಣವಾಗಿದ್ದು ಅಲ್ಲಲ್ಲಿ ಬಂದೂಕು (ಕೋವಿ) ಕಿಂಡಿಗಳನ್ನು ಹೊಂದಿದೆ. ವಿಶಾಲವಾದ ಈ ಕೋಟೆಗೋಡೆಯು ವಿಸ್ತಾರವಾಗಿದ್ದು ಸುಮಾರು ೫ ೧/೨ ಅಡಿ ಅಗಲವಿದೆ. ಕೋಟೆಯೊಳಗಡೆ ನಿರ್ಮಿಸಿರುವ ಬುರುಜುಗಳು ಶತ್ರುಗಳನ್ನು ಸುಲಭವಾಗಿ ಗುರ್ತಿಸಲು ಸಾಧ್ಯವಾಗುವಂತೆ ಕಿಂಡಿಗಳನ್ನು ಹೊಂದಿದ್ದು ಮತ್ತು ಮದ್ದುಗುಂಡುಗಳು ಇತರೆ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುವ ಸಲುವಾಗಿ ಸುಲಭವಾಗಿಯೂ ಮತ್ತು ವಿಸ್ತಾರವಾಗಿಯೂ ರಚನೆಯಾಗಿವೆ. ಮದ್ದಿನಮನೆಯು ಸುಮಾರು ೧೨ಅಡಿ ಉದ್ದ ಮತ್ತು ೫ಅಡಿ ಅಗಲವಾಗಿದ್ದು ೧೦ ಅಡಿಗಳಷ್ಟು ಎತ್ತರವಾಗಿವೆ. ಈ ಕೋಟೆಯಲ್ಲಿ ಶತ್ರುಗಳ ಮೇಲೆ ದಾಳಿಮಾಡಲು ಹಳೆಯ ತುಪ್ಪ ಮತ್ತು ಕೋಟೆಯಲ್ಲಿ ವಾಸವಾಗಿದ್ದ ಸೈನಿಕರುಗಳ ಮಲಮೂತ್ರಗಳನ್ನು ಯುದ್ಧಸಾಮಗ್ರಿಗಳಾಗಿ ಬಳಸಿಕೊಂಡಿದ್ದಾರೆ. ಇದು ಹೈದರ್ ಅಲಿಯ ಕಾಲದಲ್ಲಿ ನಲ್ಲಪ್ಪನಿಂದ ರಚನೆಯಾದ **ಹೈದರ್‌ನಾಮಾ** ಕೃತಿಯು ಸಹ ತಿಳಿಸುತ್ತದೆ.

**ಹುತ್ರಿದುರ್ಗ**

ಹುತ್ರಿದುರ್ಗವು ಬಸವನ ಬೆಟ್ಟ, ಕುಂಬಿಬೆಟ್ಟ, ತಿರುಮಲ ಬೆಟ್ಟ, ಓಲಗದರೆ ಬೆಟ್ಟ ಎಂಬ ನಾಲ್ಕು ಬೆಟ್ಟಗಳ ಒಂದು ಸಮೂಹವಾಗಿದೆ. ಈ ಕೋಟೆಯನ್ನು ಸ್ವತಂತ್ರವಾಗಿ ಆಳ್ವಿಕೆ ಮಾಡಿದ ಪಾಳೆಯಗಾರರು ಇಲ್ಲದೆ ಹೋದರೂ ಮಾಗಡಿ–ನಾಡ ಪ್ರಭುಗಳಿಗೆ ಗಿರಿದುರ್ಗವಾಗಿತ್ತು. ಇಂತಹ ಗಿರಿದುರ್ಗದ ಸುತ್ತಲೂ ಮತ್ತೆ ಕೋಟೆಗಳನ್ನು ಕಟ್ಟಿರುವುದು ವಿಶೇಷ ಎನಿಸುತ್ತದೆ. ಹುತ್ತಗಳಿಂದ ಕೂಡಿದ ಈ ಕೋಟೆಯು ಉತ್ತರೀದುರ್ಗ ಎಂದೇ ಹೆಸರಾಗಿದೆ. ಬೆಟ್ಟಗಳಲ್ಲಿದ್ದ ಆಯಾಯ ಕಿಲ್ಲೆದಾರರ ಹೆಸರುಗಳಿಂದಲೇ ಆಯಾಯ ಬೆಟ್ಟಗಳಿಗೆ ಹೆಸರು ಬಂದಿರಬೇಕು. ಆದ್ದರಿಂದ ತಿರುಮಲ ಬೆಟ್ಟ, ಬಸವನದುರ್ಗ ಬೆಟ್ಟ, ಓಲಗದರೆ ಬೆಟ್ಟ, ಶಂಕರನ ಬೆಟ್ಟ ಎಂಬುದಾಗಿ ಹೆಸರಾಗಿರುವ ಸಾಧ್ಯತೆಗಳಿವೆ.

ಈ ಕೋಟೆಯು ಕ್ರಿ.ಶ. ೧೬೩೮ರಲ್ಲಿ ಮಾಗಡಿ ಕೆಂಪೇಗೌಡನಿಂದ ನಿರ್ಮಿಸಲ್ಪಟ್ಟಿತ್ತು. ಆತನ ಉತ್ತರಾಧಿಕಾರಿಗಳು, ಒಡೆಯರು, ಹೈದರ್ ಮತ್ತು ಟಿಪ್ಪು ವಿವಿಧ ಕಾಲಘಟ್ಟಗಳಲ್ಲಿ ವಿಸ್ತರಿಸಿದರೆ ಮರಾಠರ ತ್ರಯಂಬಕರಾವ್ ಮತ್ತು ಆಂಗ್ಲರ ಜನರಲ್ ಸ್ಟುವರ್ಟ್ ಎಂಬ ಅಧಿಕಾರಿಗಳು ಕೋಟೆಯನ್ನು ಮುತ್ತಿ ಕೆಲವು ಭಾಗಗಳನ್ನು ಹಾಳುಮಾಡಿದರು. ಕ್ರಿ.ಶ. ೧೭೯೧ರಲ್ಲಿ ಟಿಪ್ಪುವಿನ

ಮರಣದ ತರುವಾಯ ಕೋಟೆಯು ಮೈಸೂರು ಒಡೆಯರ ಆಳ್ವಿಕೆಗೆ ಒಳಪಟ್ಟಿತು. ಆದರೆ ನಂತರದ ಕಾಲದಲ್ಲಿ ನಿರ್ಲಕ್ಷಕ್ಕೊಳಗಾಯಿತು.

ಈ ಕೋಟೆಯು ೭ ಸುತ್ತುಗಳನ್ನು ೯ ಹೆಬ್ಬಾಗಿಲುಗಳನ್ನು ಮತ್ತು ೨ ದಿಡ್ಡಿ ಬಾಗಿಲುಗಳನ್ನು ಹೊಂದಿದೆ. ಸ್ಥಳೀಯವಾಗಿಸಿಗುವ ಬಂಡೆಗಳನ್ನು ಹಾಗಾಗಿಯೇ ಕೆಂಪೇಗೌಡನು ಕೋಟೆಯನ್ನು ಇಲ್ಲಿ ನಿರ್ಮಾಣ ಮಾಡಿರಬೇಕು. ಬೆಟ್ಟದ ಬುಡದಲ್ಲಿ ಅತ್ಯಂತ ಶಿಸ್ತು ಬದ್ಧವಾದ ಕೋಟೆಗೋಡೆಯು ನಿರ್ಮಾಣವಾಗಿದ್ದು ಮೇಲೇರಿದಂತೆ ಬೆಟ್ಟದಲ್ಲೇ ಸಿಗುವ ಕಲ್ಲುಗಳನ್ನು ಬಳಸಿಕೊಂಡು ಕೋಟೆಗೋಡೆಯನ್ನು ಪೂರ್ಣಗೊಳಿಸಲಾಗಿದೆ. ಮೇಲೇರಲು ಉತ್ತರದಿಕ್ಕಿನ ಒಂದು ಭಾಗದಲ್ಲಿ ಕೋಟೆಯ ಗೋಡೆಯು ಆಧಾರವಾಗಿದ್ದು ಉಳಿದ ಮೂರು ದಿಕ್ಕುಗಳಲ್ಲಿ ಅತ್ಯಂತ ಆಳವಾದ ಕಡಿದಾದ ಪ್ರಪಾತವಿದ್ದು ಸುಲಭವಾಗಿಯೇ ರಕ್ಷಣೆಯನ್ನು ಒದಗಿಸುತ್ತದೆ. ಕೋಟೆಗೆ ಬಳಸಿರುವ ಕಲ್ಲುಗಳನ್ನು ಆಯತ ತ್ರಿಭುಜ ಚೌಕಾಕಾರದಲ್ಲಿ ಕತ್ತರಿಸಲಾಗಿದೆ. ಗೋಡೆಯನ್ನು ನೇರವಾಗಿ ೯೦ ಡಿಗ್ರಿಯಂತೆ ಸುಮಾರು ೩ರಿಂದ ೫ ಮೀಟರ್‌ವರೆಗೆ ಬೃಹತ್ತಾದ ಮಣ್ಣಿನ ಇಳಿ ಮೋರೆಯನ್ನು ನಿರ್ಮಿಸಲಾಗಿದ್ದು ಮದ್ದುಗುಂಡುಗಳು ತಾಗಿದರೂ ಗೋಡೆಯು ಹಾಳಾಗಬಾರದೆಂದು ಈ ರೀತಿ ನಿರ್ಮಿಸಲಾಗಿದೆ. ಕೋಟೆಯ ಗೋಡೆಗಳು ಕುಸಿಯದಿರಲೆಂದು ಗೋಡೆಯ ಅಂಚಿಗೆ ಹೊರಭಾಗದಲ್ಲಿ ರಂಧ್ರಗಳನ್ನು ಕೊರೆದು ಅವುಗಳಿಗೆ ಕಬ್ಬಿಣದ ಗೂಟಗಳನ್ನು ಹೊಡೆದಿರುವುದು ಅವರ ಗೋಡೆಯ ತಂತ್ರಜ್ಞಾನವನ್ನು ತಿಳಿಸುತ್ತದೆ.

ಕೋಟೆಯು ಯಾವ ಭಾಗದಲ್ಲೂ ಕೈಪಿಡಿ ಗೋಡೆಯನ್ನು ಹೊಂದಿಲ್ಲ. ಬಹುಶಃ ಮಣ್ಣಿನ ರಚನೆಗಳಾಗಿದ್ದು ಕಾಲಾನುಕ್ರಮದಲ್ಲಿ ಹಾಳಾಗಿರುವ ಸಾಧ್ಯತೆಗಳಿವೆ. ಪ್ರವೇಶ ದ್ವಾರದಲ್ಲಿ ಬಿಟ್ಟರೆ ಉಳಿದಂತೆ ಎಲ್ಲೂ ಕೂಡ ಕೊತ್ತಲಗಳಿಲ್ಲ. ಅದು ದ್ವಾರದ ಬಳಿ ಶತ್ರುಗಳ ಆಕ್ರಮಣ ತಡೆಯಲು ನಿರ್ಮಾಣವಾಗಿರಬೇಕು. ನೆಲಕೋಟೆಯ ಈ ಪ್ರವೇಶದ್ವಾರಗಳು ಆಂಗ್ಲ ಭಾಷೆಯ ಝಡ್ ಮಾದರಿಯಲ್ಲಿ ನಿರ್ಮಾಣವಾಗಿವೆ. ತುದಿಭಾಗಕ್ಕೆ ಹೋಗಲು ಕಡಿದಾದ ಹೆಬ್ಬಂಡೆಗಳಲ್ಲಿ ಕಿರಿದಾದ ಮೆಟ್ಟಿಲುಗಳನ್ನು ಕೊರೆಯಲಾಗಿದೆ. ಇದರಿಂದ ಬಹುತೇಕ ಮುಖ್ಯ ಅಧಿಕಾರಿಗಳ ವಸತಿಕಟ್ಟಡಗಳು ಬೆಟ್ಟದ ಮೇಲ್ಭಾಗದಲ್ಲಿ ಕಾಣಸಿಗುತ್ತವೆ. ಈ ಮೇಲ್ಭಾಗದಲ್ಲಿ ಮದ್ದಿನ ಮನೆಯನ್ನು ನಿರ್ಮಿಸಲಾಗಿದೆ. ಈ ಮದ್ದಿನಮನೆಯು ಒಂದು ಹಂತದವರೆಗೆ ಕಲ್ಲುಗಳಿಂದ ನಿರ್ಮಾಣವಾಗಿದ್ದು ಮೇಲಿನ ಭಾಗವು ಇಟ್ಟಿಗೆ ಮತ್ತು ಗಾರೆಯಿಂದ ಪೂರ್ಣಗೊಂಡಿದೆ. ಅದರ ತುದಿಯಲ್ಲಿ ತ್ರಿಭುಜ ಮಾದರಿಯ ಸಣ್ಣಕಿಂಡಿಗಳನ್ನು ಗಾಳಿಬೆಳಕಿಗಾಗಿ ರಚನೆ ಮಾಡಿದ್ದಾರೆ. ಬಳಸಿಕೊಂಡು ಕೋಟೆಯನ್ನು ನಿರ್ಮಾಣ ಮಾಡಿಕೊಳ್ಳಲಾಗಿದೆ. ಟಿಪ್ಪು ಮರಾಠರ ಸೈನ್ಯವನ್ನು ಹಿಮ್ಮೆಟ್ಟಿಸಿದ್ದು ಇದೇ ಕೋಟೆಯಲ್ಲಿಯೇ. ಆದರೂ ಟಿಪ್ಪು ಈ ಕೋಟೆಯನ್ನು ನಿರ್ಲಕ್ಷಿಸಿದ್ದು ಒಂದು ರೀತಿಯ ತಾರತಮ್ಯವೇ ಸರಿ. ಈ ಕೋಟೆಯು ಪ್ರಾಕೃತಿಕವಾದ ಬಂಡೆಗಳನ್ನು ಆಸರೆಯಾಗಿ ಬಳಸಿಕೊಂಡು ನಿರ್ಮಾಣವಾಗಿದೆ. ಅಲ್ಲಲ್ಲಿ ಮಧ್ಯೆಮಧ್ಯೆ ಕೆತ್ತಿ ಅಣಿಗೊಳಿಸಿದ ಕಲ್ಲುಗಳಿಗೆ ಸರಿ ಹೊಂದುವಂತೆ ಕಾಡುಗಲ್ಲುಗಳನ್ನೂ

ಸಹ ನಿರ್ಮಾಣದಲ್ಲಿ ಬಳಸಲಾಗಿದೆ. ಕೋಟೆಯ ಗೋಡೆಗೆ ಅಗಲವಾದ ಹಾಗೂ ಓಡಾಡಲು ಸೈನಿಕರಿಗೆ ಯಾವುದೇ ಜಾಗವನ್ನು ಸುಲಭವಾಗಿ ಬಳಸಿಕೊಂಡು ನಿಂತು ಯುದ್ಧಮಾಡುವಂತೆ ನಿರ್ಮಿಸಲಾಗಿಲ್ಲ ಆದರೂ ಪ್ರಾಕೃತಿಕ ಕಲ್ಲಾಸರೆಗಳು ಒಳಭಾಗದ ಸೈನಿಕರು ಶತ್ರುಗಳಿಗೆ ಕಾಣಿಸದಂತೆ ಪ್ರಾಕೃತಿಕ ರಕ್ಷಣಾತಂತ್ರವನ್ನು ಬಳಸಿರುವಂತೆ ತೋರುತ್ತದೆ. ಅಲ್ಲದೆ ಫಿರಂಗಿ ಹಾಗೂ ಅಂಬುಗಂಡಿಗಳನ್ನು ಕೋಟೆಯ ಗೋಡೆಗಳಲ್ಲಿ ರಚನೆ ಮಾಡಿದ್ದಾರೆ. ಶತ್ರುಗಳ ಮೇಲೆ ನಿರಂತರವಾದ ದಾಳಿಮಾಡಲು ಹತ್ತಿರವಾಗುವಂತೆ ಆಯುಧ ತಯಾರಿಕಾ ಕೇಂದ್ರಕ್ಕೆ ನೇರವಾದ ರಹಸ್ಯ ದಾರಿಯಿದೆ. ಇನ್ನುಳಿದಂತೆ ಬಸವನ ಬೆಟ್ಟದಲ್ಲಿ ಕೂಡ ಪ್ರಾಕೃತಿಕ ಕಲ್ಲಾಸರೆಗಳಿಗೆ ಮಣ್ಣು ಮತ್ತು ಕಲ್ಲಿನಿಂದ ಸ್ವಲ್ಪ ಎತ್ತರವಾಗಿರುವ ಗೋಡೆಯನ್ನು ನಿರ್ಮಿಸಲಾಗಿದೆ. ತಿರುಮಲಬೆಟ್ಟದ ಗೋಡೆಯು ಕೇವಲ ಕಿಲ್ಲೆದಾರನ ಕಟ್ಟಡದ ಸುತ್ತಲೂ ಆಯತಾಕಾರದ ಕಟ್ಟಡವನ್ನು ನಿರ್ಮಿಸಿದ್ದಾರೆ. ಬಹುಶಃ ಇದು ಸೈನಿಕರಿಗೆ ಶಸ್ತ್ರಾಸ್ತ್ರವನ್ನು ಒದಗಿಸುತ್ತಿದ್ದ ಶಸ್ತ್ರಾಗಾರವಾಗಿರಬೇಕು. ಮುಖ್ಯ ದ್ವಾರಗಳನ್ನು ಕೇವಲ ತುರ್ತುಸಂದರ್ಭದಲ್ಲಿ ಮಾತ್ರ ತೆರೆಯಲಾಗುತ್ತಿತ್ತು. ಉಳಿದಂತೆ ಸದಾ ಮುಚ್ಚಿರುತ್ತಿದ್ದವು. ಇದನ್ನು ಪ್ರವೇಶದ್ವಾರದ ಇಕ್ಕೆಲಗಳಿರುವ ದಿಡ್ಡಿಬಾಗಿಲುಗಳಿಂದ ತಿಳಿಯಬಹುದಾಗಿದೆ.

**೪.೩. ಯುದ್ಧೋಪಕರಣಗಳು**

ಸಾಮಾನ್ಯವಾಗಿ ಪ್ರಾಚೀನ ಕಾಲದಿಂದಲೂ ಸಹ ಮಾನವನ ತನ್ನ ಆಹಾರದ ಹುಡುಕಾಟಕ್ಕೆ ಬಳಸಿಕೊಂಡ ಆಯುಧಗಳೇ ಮುಂದೆ ಮಾರ್ಪಾಡಾಗಿ ತನ್ನ ರಕ್ಷಣೆಗೆ ಬಳಸಲ್ಪಟ್ಟವು. ಮುಂದೆ ತನ್ನ ಕುಟುಂಬ ಮತ್ತು ಸಮುದಾಯಗಳ ರಕ್ಷಣೆಯೂ ಸಹ ಇದೇ ರೀತಿ ಮುಂದುವರೆಯುತ್ತಾ ಸಾಗಿತು. ಹೊರಗಿನ ಶತ್ರುಗಳಿಂದ ಅಪಾಯವಾಗಬಾರದೆಂದು ಪ್ರತಿಯೊಬ್ಬ ಗ್ರಾಮಾಧಿಪತಿಯೂ ತಮ್ಮ ಮತ್ತು ತಮ್ಮವರ ರಕ್ಷಣೆಗಾಗಿ ಅನೇಕ ಹೊಸ ಹೊಸ ಆಯುಧಗಳನ್ನು ನಿರ್ಮಿಸಿಕೊಂಡು ಸದಾ ಜಾಗೃತವಾದ ಸಿದ್ಧತೆಯಲ್ಲಿರುತ್ತಿದ್ದರು. ಅಂತಹ ಸಂರಕ್ಷಕ ಸಾಧನಗಳಲ್ಲಿ ಗ್ರಾಮ, ಪುರ, ಪಟ್ಟಣಗಳಿಗೆ ಸುತ್ತುಗೋಡೆ ಮತ್ತು ಕೋಟೆಗೋಡೆಗಳಿಂದ ರಕ್ಷಣೆಯನ್ನು ಒದಗಿಸುತ್ತಿದ್ದರೆ. ಅವುಗಳನ್ನು ಹೊರತುಪಡಿಸಿ ಬೇರೆ ರಕ್ಷಣಾ ಆಯುಧಗಳು ಅತ್ಯಂತ ಅವಶ್ಯಕವಾಗಿದ್ದವು.

ಮೈಸೂರು ಒಡೆಯರ ಆಳ್ವಿಕೆಯ ಪ್ರಾರಂಭವಾದ ಕಾಲಾವಧಿಯಿಂದ ಅಂದರೆ ಕ್ರಿ.ಶ. ೧೩೯೯ರಿಂದ ಕ್ರಿ.ಶ.೧೬೧೦ರವರೆಗೆ ನಮಗೆ ತಿಳಿದುಬರುವ ಆಯುಧಗಳ ಬಗೆಗಿನ ಮಾಹಿತಿಯು ಅತ್ಯಂತ ಕಡಿಮೆ ಎಂದರೆ ತಪ್ಪಾಗಲಾರದು. ಏಕೆಂದರೆ ಈ ಮೊದಲೇ ತಿಳಿಸಿದಂತೆ ಮೈಸೂರಿನ ಪ್ರಾರಂಭದ ಅರಸರು ಕೇವಲ ಹದಿನಾಡೆಂಬ ಸಣ್ಣ ಪಾಳೆಯಪಟ್ಟಿಗೆ ಮಾತ್ರ ಸೀಮಿತವಾಗಿದ್ದರು. ಈ ಕಾಲಾವಧಿಯಲ್ಲಿ ಅವರಿಗೆ ತಮ್ಮದೇ ಆದ ಸ್ವತಂತ್ರವಾದ ಆಳ್ವಿಕೆಯ ಆಸೆಯಿದ್ದರೂ ಸಹ ಅವರು ವಿಜಯನಗರದ ಅರಸರಿಗೆ ಅಮರನಾಯಕರಂತೆ ಅಥವಾ ಸಾಮಂತರಂತೆ ಅಧೀನ ಅರಸರಾಗಿದ್ದರು. ಆದರೆ ಕ್ರಿ.ಶ. ೧೬೧೦ರಲ್ಲಿ ಮೈಸೂರಿನ ಸಿಂಹಾಸನವನ್ನೇರಿದ ರಾಜಒಡೆಯರು ಸ್ವತಂತ್ರರಾಗಿ ವಿಜಯನಗರದ ಕೊನೆಯ ಅರಸ ತಿರುಮಲರಾಯನಿಂದ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡು ತಮ್ಮ ಆಳ್ವಿಕೆಯ ಕೇಂದ್ರವನ್ನಾಗಿ ರೂಪಿಸಿಕೊಂಡರು. ಅಲ್ಲಿಂದ. ಮುಂದೆ

ಮೈಸೂರು ಒಡೆಯರು ತಮಗೆ ಅವಶ್ಯಕತೆಯಿದ್ದ ರಕ್ಷಣಾ ಸಾಮಾಗ್ರಿಗಳ ಉತ್ಪಾದನೆಯನ್ನು ತಾವೇ ಮಾಡಿಕೊಂಡು ಸ್ವಾವಲಂಬನೆಯನ್ನು ಸಾಧಿಸಿದರು. ಅದಕ್ಕೆ ಮೈಸೂರು ಕೋಟೆಯೇ ಮೊದಲ ಕಾರ್ಯಾಗಾರವಾಗಿ ರೂಪುಗೊಂಡಿತ್ತು.

**ಯುದ್ಧೋಪಕರಣಗಳು**

ಆಕ್ರಮಣಕಾರಿ ಪ್ರವೃತ್ತಿ, ನಾಗರಿಕತೆ, ಸಾಮ್ರಾಜ್ಯ ವಿಸ್ತರಣಾ ಮಹತ್ವಾಕಾಂಕ್ಷೆ ಬೆಳೆದಂತೆ ಪರಿಣಾಮಕಾರಿ ಆಯುಧಗಳನ್ನು ಆವಿಷ್ಕರಿಸುವ ಅಗತ್ಯ ಒದಗಿಬಂದಿತು. ಅದಕ್ಕೆ ಅನುಗುಣವಾಗಿ ಬಿಲ್ಲು, ಬಾಣ, ಖಡ್ಗ, ಈಟಿ ಮೊದಲಾದ ಆಯುಧಗಳನ್ನು ಹಿಡಿದು ಯೋಧರು ಕುಳಿತು ಯುದ್ಧ ಮಾಡುತ್ತಾರೆ. ಆನೆಗಳ ದಂತಗಳಿಗೆ ಕಟ್ಟಿರುತ್ತಿದ್ದ ಖಡ್ಗಗಳಿಂದ ಅವುಗಳು ಸಹ ಎದುರಾಳಿಗಳನ್ನು ಕುದುರೆಗಳು ಮತ್ತು ಸೈನಿಕರನ್ನು ದಾಳಿಮಾಡಿ ಕೊಲ್ಲುತ್ತಿದ್ದವು.[೧೦೮] ಮುಂದೆ ಮೈಸೂರು ಒಡೆಯರ ಕಾಲದಲ್ಲೂ ಇದು ಮುಂದುವರೆಯಿತು. ಆದರೆ ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿನ ಹೋರಾಟಗಳು ಬೇರೆ ರೀತಿಯಾಗಿದ್ದವು. ಅಲ್ಲದೆ ಬಿಸಿಯಾದ ಮರಳು, ಕಾದ ಅಂಬಲಿ, ಕಲ್ಲುಗುಂಡುಗಳು ಮತ್ತು ಎಣ್ಣೆಗಳನ್ನು ಕೋಟೆಕಾಳಗಗಳಲ್ಲಿ ಬಳಸುತ್ತಿದ್ದರು. ನಿಜಗಲ್ಲು ದುರ್ಗದ ಕೋಟೆಕಾಳಗದಲ್ಲಿ ಈ ಮೇಲಿನ ಎಲ್ಲಾ ವಸ್ತುಗಳನ್ನು ಬಳಸಲ್ಪಟ್ಟಿದ್ದರು. ಕ್ರಿ.ಶ. ೧೮೭೮ರಲ್ಲಿ ಬೋಳಚಾಮರಾಜ ಒಡೆಯರು-ಮೈಸೂರು ಅರಮನೆಯ ಆಯುಧಾಗಾರವನ್ನು ನಿರ್ಮಿಸಿದರು. ಇದೊಂದು ಅಪೂರ್ವವಾದ ಆಯುಧಗಳ ಸಂಗ್ರಹಶಾಲೆ. ಅಲ್ಲಿ ಹಲವಾರು ಶತಮಾನಗಳ ಹಳೆಯ ಆಯುಧಗಳನ್ನು ಸಂಗ್ರಹಿಸಲಾಗಿದೆ. ಅಲ್ಲೀಗ ಒಂದು ಸಾವಿರಕ್ಕೂ ಹೆಚ್ಚು ಆಯುಧಗಳಿವೆ. ಈ ಹಿಂದೆ ಅವುಗಳ ಸಂಖ್ಯೆಯಲ್ಲಿ ೩,೦೦೦ಕ್ಕೂ ಹೆಚ್ಚಾಗಿದ್ದವು. ಅವುಗಳ ಸಂಗ್ರಹದಲ್ಲಿ ಮೂರನೇ ಕೃಷ್ಣರಾಜ ಒಡೆಯರು ಹೆಚ್ಚಿನ ಆಸಕ್ತಿಯಿಂದ ಅವುಗಳನ್ನು ಕ್ರಮವಾಗಿ ಜೋಡಿಸಿ ಅವಕ್ಕೆಲ್ಲ ಲೋಹದ ಪಟ್ಟಿಗಳನ್ನು ಅಂಟಿಸಿ ಕ್ರಮಸಂಖ್ಯೆಗಳನ್ನು ಬರೆಸಿದ್ದಾರೆ. ಅಲ್ಲದೆ ಪ್ರತಿಯೊಂದು ಆಯುಧದ ಮೇಲೂ ಕೃಷ್ಣ ಎಂಬ ಹೆಸರನ್ನು ಕೆತ್ತಿಸಿದ್ದಾರೆ.

ಈ ಆಯುಧಗಳಲ್ಲಿ ಹೆಚ್ಚಿನವು ಚಾರಿತ್ರಿಕ ದೃಷ್ಟಿಯಿಂದ ಕುತೂಹಲಕಾರಿಯಾಗಿವೆ. ಅವುಗಳಲ್ಲಿ ಎಲಸ್ಟಿಕ್ ಮಾದರಿಯಲ್ಲಿರುವ ನಿಮ್ಚ ಎಂಬ ಖಡ್ಗ ಅತ್ಯಂತ ಪ್ರಾಚೀನ ಖಡ್ಗವಾಗಿದೆ. ಅದನ್ನು ಸೊಂಟಪಟ್ಟಿಯ ಮಾದರಿಯಲ್ಲಿ ಸೊಂಟದಲ್ಲಿ ಧರಿಸಬಹುದಾಗಿದೆ. ಅದನ್ನು ಹೇಗಬೇಕಾದರೂ ಬಗ್ಗಿಸಬಹುದು. ಕಂಠೀರವ ನರಸರಾಜ ಒಡೆಯರು ಈ ಖಡ್ಗವನ್ನು ಬಳಸುತ್ತಿದ್ದರು. ತಿರುಚನಾಪಳ್ಳಿಯ ಜಟ್ಟಿಯನ್ನು ಕೊಲ್ಲಲ್ಲು ಈ ಖಡ್ಗವನ್ನು ಬಳಸಿದ್ದರೆಂಬ ಮಾಹಿತಿಯು ತಿಳಿದುಬರುತ್ತದೆ. ಚುರಾ ಎಂಬ ಚಾಕು ಚಿಕ್ಕದೇವರಾಯ ಒಡೆಯರಿಗೆ ಸಂಬಂಧಿಸಿದ್ದು. ನಿಚಾ ಮತ್ತು ಸಾನ್ವ ಎಂಬ ಎರಡು ಖಡ್ಗಗಳನ್ನು ಅನುಕ್ರಮವಾಗಿ ಹೈದರ್ ಅಲಿ ಮತ್ತು ಟಿಪ್ಪು ಬಳಸುತ್ತಿದ್ದರಂತೆ.

ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ಆಯುಧಾಗಾರದಲ್ಲಿದ್ದ ಒಟ್ಟು ಗುಂಡುಗಳು ಈ ಕೆಳಗಿನಂತಿವೆ.

| ಗುಂಡುಗಳ ಗಾತ್ರ | ಗುಂಡುಗಳ ಸಂಖ್ಯೆ |
|---|---|
| ಹಿಂದಿನ ವಿವಾಧಿ ಸಂವತ್ಸರದವರೆಗಿನ ದೊಡ್ಡ ಗುಂಡುಗಳು | ೧೯೨೭ |
| ಸಣ್ಣ ಗುಂಡುಗಳು | ೬೦೦೦ |
| ಹೇರಳೆಕಾಯಿಗಾತ್ರದ ಗುಂಡುಗಳು | ೩೦೦೦ |
| ಕಬ್ಬಿಣದ ಗುಂಡುಗಳು | ೨೩೦೦೦ |
| ತದನಂತರದ ಗುಂಡುಗಳು | ೪೫೦೦೦ |
| ಚಿಕ್ಕ ಗುಂಡುಗಳು | ೫೩೧೨ |
| ಒಟ್ಟು ಮೊತ್ತ | ೮೪,೨೩೯ |

ಈ ಗುಂಡುಗಳು ಯುದ್ಧದಲ್ಲಿ ಸಿಡಿದರೆ ಅದರೊಳಗಿದ್ದ ಸಣ್ಣ ಸಣ್ಣ ಗುಂಡುಗಳು ಕತ್ತರಿ, ಚೂರಿ, ಕಠಾರಿ, ಮೊಳೆಗಳು ಮೊದಲಾದವು ಸ್ಫೋಟಗೊಂಡು ಹಲವಾರು ಜನರು ಮರಣ ಹೊಂದುವಂತೆ ಮಾಡುತ್ತಿದ್ದವು. ಟೊಳ್ಳು ಗುಂಡುಗಳು, ತುಪಾಕಿ ಗುಂಡುಗಳು ಮತ್ತು ಅವುಗಳನ್ನಿಡಲು ಉಗ್ರಾಣಗಳು ಮತ್ತು ಮದ್ದಿನ ಮನೆಗಳನ್ನು ನಿರ್ಮಿಸಲಾಗುತ್ತಿತ್ತು.[೧೯] ಕೆಳದಿಯ ಅರಸರಕಾಲದ ಲಿಂಗಣ್ಣ ಕವಿಯ ಕೆಳದಿ ನೃಪವಿಜಯ ಮತ್ತು ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯಂ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖವಿರುವಂತೆ ಯುದ್ಧೋಪಕರಣಗಳನ್ನು ಈ ರೀತಿಯಾಗಿ ಉಪಯೋಗಿಸುತ್ತಿದ್ದರು. ಅಂತೆಯೇ ಯುದ್ಧಗಳಲ್ಲಿ ಅವುಗಳನ್ನು ಬಳಸುತ್ತಿದ್ದ ವಿವರಗಳನ್ನು ಕಾಣಬಹುದು.

ಇಡು ಫಿರಂಗಿಯ ಬೇಗ ಪಿಡಿಸಚ್ಚಣಿಗೆಯ
ತುಡುಕು ಗುರಾಣಿ ಕಂಡೆಯವ

ಹೊಡೆ ಬಲು ಜಬರುಜಂಗಿಯಲಿ ಕೋಟೆಯ[೧೧೦] ಎಂಬ ಆರ್ಭಟಗಳು ಯುದ್ಧ ಭೂಮಿಯಲ್ಲಿ ಮೊಳಗುತ್ತಿದ್ದವು. ಹಾಗೆಯೇ ಯುದ್ಧಪ್ರಾರಂಭವಾದ ನಂತರ

ಸಂಭರ್ಟೆಯ ಬಾಣಗಳ
ತೊಳಿಪು ಪೆಟಲಗುಂಡುಗಳ
ಕರಿಗಳ ಕೈಯಿಂದ ಕೆಡಹು ಕೋಟೆಯ ಮೇಲ
ಕುರವಣಿಯ ಬೊಬ್ಬೆಯಲಿ

ತರಿ ಇರಿ ಹೊಡೆ ಕಾಹಿನವರ[೧೧೧] ಎಂಬ ಅಬ್ಬರ ರಣರಂಗದಲ್ಲಿ ತುಂಬಿದ್ದಿತು.

ರಕ್ಷಣೆಯತ್ತ ಗಮನ ಹರಿಸಬೇಕಾಯಿತು. ಯಾವುದೇ ಒಂದು ಸಾರ್ವಭೌಮತೆಯನ್ನು ನೆಲೆಗೊಳಿಸುವಲ್ಲಿ ಆಯುಧಗಳು ಪ್ರಧಾನಪಾತ್ರ ವಹಿಸುತ್ತವೆ. ಇವು ಪ್ರಾಚೀನ ಕಾಲದಿಂದಲೂ ಬಳಕೆಯಾಗುತ್ತಿದ್ದವು. ಕ್ರಿ.ಶ.೯ನೆಯ ಶತಮಾನದಿಂದ ಕ್ರಿ.ಶ. ೧೫ನೆಯ ಶತಮಾನದವರೆಗಿನ ಸಾಹಿತ್ಯಕೃತಿಗಳು ಉಲ್ಲೇಖಿಸುವಂತೆ ಮೌಲ್ಯಯುತವಾದ ಯುದ್ಧಗಳು ನಡೆಯುತ್ತಿದ್ದವು. ಈ ಅವಧಿಯಲ್ಲಿ ಕಂಡುಬರುವ ಕಾವ್ಯಗಳಲ್ಲಿ ಕರ್ನಾಟಕದಲ್ಲಿ ಅಂದು ನಡೆದ ಯುದ್ಧಗಳ ಸ್ವರೂಪವನ್ನು ತಿಳಿಯಲು ಸಾಧ್ಯವಿದೆ. ಅನಂತರ ಯುದ್ಧರಂಗಗಳಲ್ಲಿನ ತೀವ್ರತರವಾದ ಬದಲಾವಣೆಗಳುಂಟಾಗಿ

ಯುದ್ಧತಂತ್ರ ಮತ್ತು ಆಯುಧಗಳಲ್ಲೂ ಹಲವಾರು ಬದಲಾವಣೆಗಳಾದವು. ಸಾಂಪ್ರದಾಯಿಕವಾದ ಮೌಲ್ಯಗಳು ಕಡಿಮೆಯಾಗಿ ಆಕ್ರಮಣತತ್ವದ ಆಧಾರದ ಮೇಲೆ ಯುದ್ಧತಂತ್ರ, ಯುದ್ಧನೀತಿ ಮತ್ತು ಆಯುಧೋಪಕರಣಗಳಲ್ಲೂ ಸಹ ಆಧುನಿಕತೆಯ ಪ್ರಭಾವದಿಂದ ಶಸ್ತ್ರಾಸ್ತ್ರಗಳು ಕಾಲಕ್ರಮೇಣವಾಗಿ ಬದಲಾದವು. ಆದರೆ ಮೈಸೂರು ಒಡೆಯರ ಕಾಲದಲ್ಲಿ ಸಾಂಪ್ರದಾಯಿಕವಾದ ಆಯುಧೋಪಕರಣಗಳ ಜೊತೆಗೆ ಆಧುನಿಕ ಆಯುಧಗಳು ಬಳಕೆಯಾದವು. ಅವುಗಳಲ್ಲಿ ಬಿಲ್ಲು, ಬಾಣ, ಖಡ್ಗ, ಗುರಾಣಿ, ಕಠಾರಿಗಳಷ್ಟೇ ಅಲ್ಲದೆ ಮದ್ದುಗುಂಡುಗಳು ತುಪಾಕಿ ಕ್ಷಿಪಣಿ ಮತ್ತು ಫಿರಂಗಿಗಳನ್ನು ಬಳಸಲಾಯಿತು.

ಕ್ರಿ.ಶ. ೧೩೯೯ರಲ್ಲಿ ಯದುರಾಯನು ಕಾರುಗಳ್ಳಿಯ ಮಾರಪ್ಪನಾಯಕನನ್ನು ಖಡ್ಗದಿಂದ ಕೊಂದು ಅಧಿಕಾರಕ್ಕೆ ಬಂದನು. ಕ್ರಿ.ಶ. ೧೫೫೩ರಲ್ಲಿ ಪಟ್ಟಕ್ಕೆ ಬಂದ ತಿಮ್ಮರಾಜ ಒಡೆಯರು ನಂಜನಗೂಡಿನ ರಥೋತ್ಸವದ ಸಂದರ್ಭ ಕೆಲವು ಪಾಳೆಯಗಾರರನ್ನು ಸೋಲಿಸಿ ಅವರಿಂದ ಅಂದಳ ಆನೆ, ಕುದುರೆಗಳನ್ನು ವಶಪಡಿಸಿಕೊಳ್ಳಲಾಯಿತು ಚಾಮರಾಜ ಒಡೆಯರು ವಿವಿಧ ಪಾಳೆಯಗಾರರನ್ನು ಸೋಲಿಸಿ ಅವರಿಂದ ವಶಪಡಿಸಿಕೊಂಡ ಆಯುಧಗಳನ್ನು ಸಂಗ್ರಹಿಸಲು ಮೈಸೂರಿನ ಕೋಟೆಯಲ್ಲಿ ಅಲಗಿನ ಚಾವಡಿಯನ್ನು ನಿರ್ಮಿಸಿದರು. ಕ್ರಿ.ಶ.೧೬೩೮ರಲ್ಲಿ ಪಟ್ಟಕ್ಕೆ ಬಂದ ಕಂಠೀರವ ನರಸರಾಜ ಒಡೆಯರು ಶ್ರೀರಂಗಪಟ್ಟಣದ ಕೋಟೆಯನ್ನು ಕಲ್ಲುಗಳಿಂದ ನಿರ್ಮಿಸಿ ಕೊತ್ತಲದ ಅಗಳುಗಳನ್ನು ವಿಸ್ತಾರವಾಗಿಕಟ್ಟಿಸಿ ಮದ್ದಿನಮನೆಗಳು ಜಾನಸಾಲೆಗಳನ್ನು ಅಭಿವೃದ್ಧಿಪಡಿಸಿದರು. ಕತ್ತಿ, ಕಠಾರಿ, ಗುರಾಣಿ, ತುಪಾಕಿ, ಅಂಬು, ಬಾಣ, ಭತ್ತಳಿಕೆ, ಸಿಂಗಾಡಿ, ಮದ್ದುಗುಂಡು ಚೂರಿ, ಕತ್ತರಿ ಮೊದಲಾದ ಆಯುಧಗಳನ್ನಿಡಲು ಆಯುಧಾಗಾರವನ್ನು ಸ್ಥಾಪಿಸಿದರು. ಬಿಜಾಪುರದ ಸುಲ್ತಾನನಿಂದ ರಣದುಲ್ಲಾಖಾನನ ನೇತೃತ್ವದಲ್ಲಿ ಶ್ರೀರಂಗಪಟ್ಟಣದ ಮೇಲೆ ದಾಳಿಯಾದಾಗ ಮುಸ್ತಫಖಾನನನ್ನು ಸೋಲಿಸಿ ಅವನಿಂದ ಆನೆ, ಕುದುರೆಗಳ ಜೊತೆಗೆ ಮದ್ದುಗುಂಡು, ಕತ್ತಿ, ಕಠಾರಿ, ತುಪಾರಿ ಮೊದಲಾದ ಆಯುಧಗಳನ್ನು ವಶಪಡಿಸಿಕೊಂಡರು.[೧೧೮] ಹದಿನೆಂಟನೆಯ ಶತಮಾನದಲ್ಲಿ ಆಧುನಿಕ ಆಯುಧಗಳ ಜೊತೆಗೆ ಸಾಂಪ್ರದಾಯಿಕ ಆಯುಧಗಳನ್ನು ಕೂಡಾ ಮೈಸೂರು ಒಡೆಯರ ಕಾಲದಲ್ಲಿ ಬಳಕೆಯಲ್ಲಿದ್ದವು. ಅವುಗಳ ಸಂಖ್ಯೆಯು ಈ ಕೆಳಗಿನಂತಿದೆ.

ತುಪಾಕಿ ೪೫೦, ಕಟಾರಿ ೩೨೪, ಚಿಕ್ಕಕಠಾರಿ ೪೦, ಕತ್ತಿ ೩೨೨, ಚಮದಾಡಂ ೫೧, ಕೊಪಮು ೩, ಕರುಚೂರಿ ೩, ಬಿಲ್ಲು ೧೨, ಹರಿಗಿ ೭, ಕೈಯೂಟಿ ೧೪, ಚೂರಿ ೭, ಪಿಡಾಮು ೧೭, ಬಾಕು, ನ್ಯಾಜದ ಶುಡಾಲಗುಹ ೨೯, ಸಂಗಪೆಟ್ಟಿಗೆ ೧೩, ಸಾಣೆ ೭, ಫಿರಂಗಿಸಾಣ ೨, ಗುರುಬೆ ೧, ಅಂಬು ೬೮೩, ಸಿಂಗಾಡಿ ೩, ಈಟಿ ೫೦, ಊರಿಲಗು ೧೫೭, ಚಕ್ರ ೭೯, ಪಿಂಡಿವಾಳ ೩, ಸರಳು ೧, ತ್ರಿಶೂಲ ೬, ಅಂಕುಶ ೩, ದಂಡಕೋಲು ೧, ಮರದಬಿಲ್ಲಿನ, ಅಂಬು ೨, ಕತ್ತರಿ ೯, ಆನೆಕೊಂಬಿನ ಕತ್ತಿ ೨, ಚಿಕ್ಕಕತ್ತಿ ೧, ಈಟಿಮುಳ್ಳು ಹೊರಟಿ ೧, ಹಳೆ ಶಿಲೆ ೧೨, ಮುರುಕು ಶಿಲೆ ೮, ಕಬ್ಬಿಣಬಿಲ್ಲೆ ಹಾಕಿದ ಶಿಲೆ ೧೫, ಕಲೆಟೊಪ್ಪಿಗೆ ೨, ಕವುಲಗತ್ತ

೩, ಗುರಾಣಿ ೪, ವಂಕಿ ೩, ದೊಣ್ಣೆಕತ್ತಿ ೧, ಭಲ್ಲೆಕಾಲು ಸಹ ಈ ಅಲಗು ೧೦, ಕೊಡಗು ಕತ್ತಿ ೧, ಕೊಡಲಿ ೧, ಕುದುರೆಮುಖದ ಮಟ್ಟು ೮, ಆನೆ ಮಾವುತನ ಶಿಲೆ ೯, ಸರಿಕೋ ಗುಂಢಣವಿಸಹ ೬೨, ದೊಡ್ಡಫಿರಂಗಿ ೧೦, ಚಿಕ್ಕಫಿರಂಗಿ ೧೦, ಕಲ್ಲುಗುಂಡು ೧,೬೨೦, ಬಳಸಿದ ಚಿಕ್ಕಗುಂಡು ೧೦,೬೬೦, ಚಾವಿಗೆ ಹಗ್ಗ ೩೫೦, ಎಲಿಗುದ್ದಲಿ ೩೭೧, ಮೊನೆಗುದ್ದಲಿ ೫೭೪, ಕೆತ್ತುಗುದ್ದಲಿ ೧೮, ದಬಪಕ ೩೦, ಉಕ್ಕಿನಗಟ್ಟಿ ೩೮೬೭೦, ಕಲ್ಲುಳಿ ೨೪೦, ಆನೆಕೊಂಬು ೫, ನೂಲಹಗ್ಗ (ಸೋದಲು) ೧೨೧, ಅರಳೆ ಮಣ ೧೧, ಕಂಚಿನ ಡಮಾನ ಜೋಡು ೧, ಕದಬೆ ಹಗ್ಗ ೩೫೦, ಚಮದಳ ೫೫, ಚೆಲುವಕಬ್ಬಿನ ಚೂರುತುಂಡು ಸಹ ತುಂಬಿನ ಅಂಕಣ ೧, ಮರ ಮುಟ್ಟಿನ ಬಗೆ ಅಂಕಣ ೧, ಅಂತು ಪ್ರಜೋತ್ಪತ್ತಿ ಸಂವತ್ಸರದವರೆಗೆ....ಂತರಸ್ತು[೧೨] ಸಾಂಪ್ರದಾಯಿಕ ಆಯುಧಗಲಲ್ಲಿ ವಿಭಿನ್ನ ರೀತಿಯ ಕತ್ತಿಗಳನ್ನು ಕಾಣಬಹುದು. ಅವುಗಳನ್ನು ವರ್ಗೀಕರಿಸಿ ಹೇಳುವುದಾದರೆ ಕತ್ತಿ, ಕರಾಚೂರಿ, ಚಿಕ್ಕಣಕಠಾರಿ, ಚೂರಿ, ಚಾಕು, ಆನೆಕೊಂಬಿನ ಕತ್ತಿ, ಚಿಕ್ಕ ಕತ್ತಿ, ದೊಣ್ಣೆಕತ್ತಿ, ಕೊಡಗುಕತ್ತಿ, ಮೆಟ್ಟುಗತ್ತಿ, ಊರಿಲಗು(ಖಡ್ಗಕತ್ತಿ) ಭಿನ್ನ ಮಾದರಿಯ ಕತ್ತಿಗಳ ಕತ್ತಿಗಳ ಒಟ್ಟು ಸಂಖ್ಯೆ ೮೭೫ ಕೈಈಟಿ, ಈಟಿ, ಬಿಂಡಿವಾಳ, ಬಲ್ಲೆಕಾಲುಗಳು ೭೦, ಗುದ್ದಲಿಗಳು ೯೬೨, ಗುಂಡುಗಳು ೨೬೮೭೦.

ಒಟ್ಟಾರೆ ಆಯುಧ ಶಾಲೆಯಲ್ಲಿ ಮೈಸೂರಿನಲ್ಲಿ ಹೈದರಾಲಿ ದಳವಾಯಿಯಾಗುವ ಮೊದಲು ಮೈಸೂರು ಕೋಟೆಯಲ್ಲಿ ಬಿಲ್ಲು, ಬಾಣ, ಕತ್ತಿ, ಗುರಾಣಿ, ಕೊಡಲಿ, ತ್ರಿಶೂಲ, ವಂಕಿ, ಈಟಿ, ಚಲ, ಹರಗಿಯಂತರ ಆಯುಧಗಳು ಸೇರಿದಂತೆ ತುಪಾಕಿ ಫಿರಂಗಿಯಂತಹ ಶಸ್ತ್ರಗಳೂ, ಇದ್ದವು. ಅಲ್ಲದೆ ಸಹಸ್ರಾರು ಗುಂಡುಗಳನ್ನು ಸಂಗ್ರಹ ಮಾಡಲಾಗಿತ್ತು. ಇದರ ಜೊತೆಯಲ್ಲಿ ಕುದುರೆಮುಖಕ್ಕೆ ಹಾಕುವ ಮಟ್ಟು, ಆನೆ ಮಾವುತನ ಶಿಲೆ, ಯುದ್ಧ ಭೂಮಿಗೆ ಕೊಂಡೊಯ್ಯುವ ಪೆಟ್ಟಿಗೆ ಆಯುಧಗಳನ್ನು ಸಾಣಿಮಾಡುವ ಯಂತ್ರ, ಕಂಚಿನ ಡಮಾಣ ಜೋಡು, ಚಮಿದಾಡಂ ತಿವಿಯುವ ಆಯುಧ, ಹಗ್ಗ, ಆನೆಗಳ ಅಂಕುಶ ಮೊದಲಾದವುಗಳನ್ನು ಕೂಡಾ ಆಯುಧ ಶಾಲೆಯಲ್ಲಿಡಲಾಗಿತ್ತು. ಚೆಲ್ಲುವ ಕಬ್ಬಿಣದ ಚೂರುಗಳನ್ನು ಕೂಡ ಸಂಗ್ರಹಿಸಿಟ್ಟಿರುವುದನ್ನು ಗುರ್ತಿಸಬಹುದು.[೧೧೩]

**ಫಿರಂಗಿಗಳು**

ಪ್ರಾಚೀನ ಕಾಲದಿಂದಲೂ ಸಹ ಭಾರತೀಯರು ಸಾಂಪ್ರದಾಯಿಕವಾದ ಒಂದೇ ಬಗೆಯ ಆಯುಧಗಳಾದ ಕತ್ತಿ, ಈಟಿ, ಭರ್ಜಿ, ಕೊಡಲಿ, ಬಿಲ್ಲು, ಬಾಣ, ಗದೆ, ಗುರಾಣಿ ಕಮಣೆಕಲ್ಲು ಮೊದಲಾದ ಆಯುಧಗಳನ್ನು ಬಳಸುತ್ತಿದ್ದರು. ಇದು ಮಧ್ಯಕಾಲದವರೆಗೂ ಅಸ್ತಿತ್ವದಲ್ಲಿದ್ದ ಯುದ್ಧ ತಂತ್ರವಾಗಿ ರೂಪುಗೊಂಡಿತ್ತು. ಆದರೆ ಮಧ್ಯ ಯುಗದಲ್ಲಿ ಮೊಗಲರು ಭಾರತಕ್ಕೆ ಬಂದ ಸಂದರ್ಭದಲ್ಲಿ ಶಸ್ತ್ರಾಸ್ತ್ರಗಳು ತಮ್ಮ ಮೂಲ ಅಸ್ತಿತ್ವವನ್ನು ಕಳೆದುಕೊಂಡು ಹೊಸಹೊಸ ಯುದ್ಧೋಪಕರಣಗಳು ಪರಿಚಯವಾದವು ಅವುಗಳಲ್ಲಿ ಬಾಬರನಿಂದ ಪರಿಚಯವಾದ ಫಿರಂಗಿಗಳು ಪ್ರಮುಖವಾಗಿವೆ. ಸಿಡಿಮದ್ದಿನ ಬಳಕೆ ಮತ್ತು ಬೆಳವಣಿಗೆ ಕುರಿತಂತೆ ದಕ್ಷಿಣಭಾರತದಲ್ಲಿ

ಕ್ರಿ.ಶ.೧೩೫೮ರ ವೇಳೆಗೆ ಬಳಕೆಯಾಗಿತ್ತೆಂದು ಹೇಳುತ್ತಾರೆ. ಪೋರ್ಚುಗೀಸರ ಪ್ರಭಾವದಿಂದ ವಿಜಯನಗರದ ಸೈನ್ಯದಲ್ಲಿ ಹೊಸಹೊಸ ಬದಲಾವಣೆಗಳಾದಂತೆ ಮೈಸೂರು ಒಡೆಯರ ಕಾಲದಲ್ಲಿ ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ಹೊಸಹೊಸ ಬದಲಾವಣೆಗಳಾದವು. ಅಂತೆಯೇ ಪ್ರಾರಂಭದಲ್ಲಿ ಮೈಸೂರು ಕೋಟೆಯಲ್ಲಿ ಮೊದಲು ಫಿರಂಗಿಗಳನ್ನು ಇಡಿಸಲಾಗಿತ್ತು. ಅದಕ್ಕಾಗಿ ಮೈಸೂರಿನ ಅಲಗಿನ ಚಾವಡಿಯಲ್ಲಿ ತಯಾರಾದ ಫಿರಂಗಿಗಳನ್ನು ಬಳಸಿಕೊಂಡರು.

ಒಳಕೋಟೆಯಲ್ಲಿರುವ ಫಿರಂಗಿಗಳು. ಆಗ್ನೇಯದಿಕ್ಕಿನಲ್ಲಿ ರಾಮಚಂದ್ರವೆಂಬ ಫಿರಂಗಿ ೧ಕ್ಕೆ ನೀಳಮೊಳ ೧೦೧೧ ಸುತ್ತುಮೊಳ ೨ ಗುಂಡು, ೬ ಅಂಗುಲ, ಬಿರಾಣಿ ೮, ಇರುವ ಗುಂಡು ೧೩೩೮, ನೈರುತ್ಯ ಮೂಲೆಯಲ್ಲಿರುವ ಕೋದಂಡರಾಮನೆಂಬ ಫಿರಂಗಿ ೧ಕ್ಕೆ, ನೀಳಮೊಳ ೧೨, ಸುತ್ತುಮೊಳ ೨, ಗುಂಡು ೫ ಅಂಗುಲ ಬಿರಾಣಿ ೮, ಇರುವ ಗುಂಡು ೯೦೦, ಆರಮನೆಯ ಹಿಂದಣ ಮಣ್ಣು ಕೊತ್ತಲದಲ್ಲಿ ಇರುವ ಮುದ್ದುಕೃಷ್ಣನೆಂಬ ಫಿರಂಗಿ ೧ಕ್ಕೆ ನೀಳಮೊಳ ೮, ಸುತ್ತುಮೊಳ ೨, ಗುಂಡು ೪ ಅಂಗುಲ ಇರುವ ಗುಂಪು ೧೦೫೦ ಬಿರಾಣಿ ೮. ಈಶಾನ್ಯ ಮೂಲೆಯಲ್ಲಿರುವ ಲಕ್ಷ್ಮೀರಮಣನೆಂಬ ಫಿರಂಗಿ ೧ಕ್ಕೆ ನೀಳಮೊಳ ೨೧, ಸುತ್ತು ಮೋಳ ೫, ಗುಂಡು ೯ ಅಂಗುಲ ಬಿರಾಣಿ ೧ ಇರುವ ಗುಂಡು ೧೦೦೦ ಹೊರಕೋಟೆಯಲ್ಲಿ ವಾಯುವ್ಯ ಮೂಲೆಯಲ್ಲಿರುವ ಚಾಮುಂಡೇಶ್ವರಿ ಎಂಬ ಫಿರಂಗಿ ೧ ಕ್ಕೆ ನೀಳಮೊಳ ೧೦, ಸುತ್ತುಮೊಳ ೩, ಗುಂಡು ಅಂಗುಲ ೬, ಇರುವ ಗುಂಡು ೧,೧೦೬. ಇದಕ್ಕೆ ಮೂಡಲಾಗಿ ಬಡಗಣ ಬಾಗಿಲ ಮೇಲಿರುವ ಹುಲಿಮುಖದ ಕೊತ್ತಲದಲ್ಲಿ ನಾಗರಮರಿಯೆಂಬ ಫಿರಂಗಿ ೧ಕ್ಕೆ ನೀಳಮೊಳ ಸುತ್ತುಮೊಳ ೧, ಅಗಲು ೨, ಇರುವ ಗುಂಡು ೧,೦೪೨. ಇದಕ್ಕೆ ಮೂಡಲಾಗಿರುವ ಜೆಣ್ಣಗೌಡನ ಹಳ್ಳಿ ಬಳಿಯಲ್ಲಿ ಇರುವ ರಂಗನಾಥನೆಂಬ ಫಿರಂಗಿ ನೀಳಮೋಳ ೧೪, ಸುತ್ತುಮೊಳ ೨, ಗುಂಡು ಅಂಗುಲ ಇರುವ ಗುಂಡು ೧,೦೧೮. ಇದಕ್ಕೆ ಮೂಡಲಾಗಿರುವ ಬೈರವಣಿಯ ಫಿರಂಗಿ ೧ಕ್ಕೆ ನೀಳಮೊಳ ೧೪, ಸುತ್ತುಮೊಳ ೩, ಗುಂಡು ಅಂಗುಲ ೪, ಇರುವ ಗುಂಡು ೧೦೩೭. ಈಶಾನ್ಯ ಮೂಲೆಯಲ್ಲಿರುವ ರಾಮಬಾಣವೆಂಬ ಫಿರಂಗಿ ೧ಕ್ಕೆ, ನೀಳಮೊಳ ೧೪, ಇದಕ್ಕೆ ತೆಂತಲಾಗಿರುವ ಉಗ್ರನರಸಿಂಹನೆಂಬ ಫಿರಂಗಿ ೧ಕ್ಕೆ ನೀಳಮೊಳ ೧೩, ಸುತ್ತುಮೊಳ ೩, ಗುಂಡು ಅಂಗುಲ ೬, ಇರುವಗುಂಡು ೧೧೦೦. ಅಗ್ನಿಮೂಲೆಯಲ್ಲಿರುವ ತ್ರಿನಯನ ಎಂಬ ಫಿರಂಗಿ ೧ಕ್ಕೆ ನೀಳಮೊಳ ೧೦, ಸುತ್ತುಮೊಳ ೩, ಗುಂಡು ಅಂಗುಲ ೫, ಇರುವ ಗುಂಡು ೧೨೨೩. ಸಂಖ್ಯೆಯಲ್ಲಿದ್ದವು ಪ್ರತಿಯೊಂದು ಫಿರಂಗಿಗೂ ದೇವರ ಹೆಸರನ್ನು ಇಟ್ಟಿದ್ದರು. ಇದು ಅವುಗಳಿಂದ ಗುಂಡುಗಳು ಹೊರಬರುತ್ತಿದ್ದ ವೇಗ ಮತ್ತು ಪ್ರಮುಖತೆಯ ಆಧಾರದ ಮೇಲೆ ಅವುಗಳಿಗೆ ಹೆಸರನ್ನಿಟ್ಟಿದ್ದರು. ಕೋಟೆಯ ಒಳಭಾಗದಲ್ಲಿ ೪ ಫಿರಂಗಿಗಳನ್ನಿಟ್ಟಿದ್ದು ಹೊರಭಾಗದಲ್ಲಿ ೭ ಫಿರಂಗಿಗಳಿದ್ದವು. ಈ ಫಿರಂಗಿಗಳ ಗಾತ್ರಗಳಿಗೆ ಅನುಗುಣವಾಗಿ ಗುಂಡುಗಳಿದ್ದವು. ಹೆರಳೆಕಾಯಿ ಗಾತ್ರದ ಗುಂಡುಗಳು ೩೦೦೦, ದೊಡ್ಡಗುಂಡುಗಳು ೪೫೦೦, ಚಿಕ್ಕಗುಂಡು ೫೩೧೨, ಕಬ್ಬಿಣದಗುಂಡು ೨೧,೦೧೨ ಗುಂಡುಗಳಿದ್ದವು.[೨೫]

ಈ ಮೊದಲೇ ತಿಳಿಸಿದಂತೆ ಯುದ್ಧಕಾಲದಲ್ಲಿ ಗುಂಡುಗಳನ್ನು ಫಿರಂಗಿಗಳಿಂದ ಹಾರಿಸಿದರೆ ಅವು ಒಡೆದು ಅವುಗಳಲ್ಲಿ ತುಂಬಿದ್ದ ಚೂರಿ, ಕತ್ತರಿ, ಕಠಾರಿ, ಮೊಳೆ, ಸಣ್ಣಗುಂಡು ಮೊದಲಾದವುಗಳು ಸಿಡಿದು ಹೆಚ್ಚು ಜನರನ್ನು ಸಾವಿಗೀಡಾಗುವಂತೆ ಮತ್ತು ಗಾಯಗೊಳ್ಳುವಂತೆ ಮಾಡುತ್ತಿದ್ದವು. ಕ್ರಿ.ಶ. ೧೬೭೩ರಲ್ಲಿ ಮೈಸೂರಿನ ಸಿಂಹಾಸನವೇರಿದ ಚಿಕ್ಕದೇವರಾಜ ಒಡೆಯರು ಸೈನ್ಯ ಬಲವನ್ನು ಕ್ರಿ.ಶ. ೧೬೮೭ರ ನಂತರ ಹೊಸದಾಗಿ ೧೨,೦೦೦ ಅಶ್ವದಳ ಒಂದು ಲಕ್ಷ ಕಾಲ್ದಳ, ಇದಕ್ಕೆ ತಕ್ಕಹಾಗೆ ಕಾಮಾಟಿಗಳು, ಕಲಾಸಿಗಳನ್ನೂ ಫಿರಂಗಿ ತುಪಾಕಿಗಳು ಕತ್ತಿ, ಕಠಾರಿ, ಗುರಾಣಿ, ಈಟಿಗಳ ಜೊತೆಗೆ ಫಿರಂಗಿಗಳು ಮೊದಲಾದ ಯುದ್ಧ ಸಾಮಗ್ರಿಗಳನ್ನು ಸಿದ್ಧಗೊಳಿಸಿದರು.[೧೨೨]

ಚಿಕ್ಕದೇವರಾಯ ಒಡೆಯರು ಶ್ರೀರಂಗಪಟ್ಟಣದ ಒಳಕೋಟೆ ಹೊರಕೋಟೆಗಳಲ್ಲಿರುವ ಕೊತ್ತಲಗಳಲ್ಲಿ ಫಿರಂಗಿಗಳನ್ನು, ಶೇಷಕುಬ್ಜ ಎಂಬ ಹೆಸರಿನ ಚಾಕುವನ್ನು ಮುಮ್ಮಡಿ ಕೃಷ್ಣರಾಜ ಒಡೆಯರು ಬಳಸುತ್ತಿದ್ದರು. ಖಾಸ ಎಂಬ ಹೆರಿಗೆ ಕತ್ತಿಯು ಅರಮನೆಯಲ್ಲಿ ಸುಲಭ ಹೆರಿಗೆಗಾಗಿ ಪೂಜಿಸಲು ಬಳಸುತ್ತಿದ್ದರು, ಮುದ್ಗರ, ಸುರಾಯಿ, ಮರಾ, ಜಾಂಭ್ಯ, ಬಾಕು, ಪಂಚಕತ್ರಿ, ಸಬ್‌ದರ್, ಬಿರುದಾಂಗಿ, ಚೂರಿ, ಟಾಬರ್, ಭಾಗನಖ, ಗದ್ದಾರ, ಖಾಂಡ್ವ, ಅಬ್ಬಾಸಿ, ಸೈಪು, ಮದು, ಅಲೇಮನ್, ಸಿರಿಗೋತಿ, ಭರ್ಜಿ ಮುಂತಾದ ಆಯುಧಗಳಿವೆ. ೧೨೩ಕ್ಕೂ ಅನೇಕ ಹೆಸರುಗಳು ಪಾರ್ಸಿ ಭಾಷೆಯಲ್ಲಿವೆ. ಅನೇಕವು ರಾಜ್ಯದಲ್ಲಿ ದೊರೆಯುವ ಬಂದೂಕು ಮಾದರಿಯಲ್ಲಿವೆ. ಮುಮ್ಮಡಿ ಕೃಷ್ಣರಾಜ ಒಡೆಯರ್ ಎಂದು ಕೆತ್ತಲಾಗಿರುವ ಮೂರು ಆಯುಧಗಳು ಕ್ರಿ.ಶ. ೧೭೯೯ರಲ್ಲಿ ಅವರ ಪಟ್ಟಾಭಿಷೇಕ ಸಂದರ್ಭದಲ್ಲಿ ಸನ್ನದು ಮೂಲಕ ಬಂದಂತಹವು ಅವೇ ಅಲ್ಲದೆ ಹೈದರ್, ಟಿಪ್ಪು, ಪೂರ್ಣಯ್ಯ, ನಂಜರಾಜ, ದೇವರಾಜ, ಲ್ಯಾಲಿ ಮತ್ತು ಮೀರ್‌ಮೊಹಮ್ಮದ್ ಸಾಧಿಕ್ ಎಂಬ ಹೆಸರುಗಳನ್ನೂ ಕೆತ್ತಲಾಗಿದೆ. ಮತ್ತೊಂದು ತೋಪಿನ ಮೇಲೆ ಬಿಜಾಪುರದ ಮುಲ್ಕಿ ಮೈದಾನ ಎಂದು ಕತ್ತಲಾಗಿದ್ದು ಅದನ್ನು ಕ್ರಿ.ಶ. ೧೮೦೩ರಲ್ಲಿ ಆರ್ಥರ್ ವೆಲ್ಲೆಸ್ಲಿಯು ಬಿಜಾಪುರವನ್ನು ಆಕ್ರಮಿಸಿದಾಗ ನೀಡಲ್ಪಟ್ಟಿತ್ತು. ಇದೇ ರೀತಿ ಮತ್ತೆರಡು ಆಯುಧಗಳ ಮೇಲೆ ತೌರೀಸ್ ಎಂದು ಕೆತ್ತಲ್ಪಟ್ಟಿದ್ದು ಡಾಲ್‌ಹೌಸಿಯಿಂದ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಬಹುಮಾನವಾಗಿ ಬಂದಿದ್ದು.[೧೧೪] ಕರಿಕಲ್ಲು ತೊಟ್ಟಿಯಲ್ಲಿ ಬಗೆಬಗೆಯ ಶಸ್ತ್ರಾಸ್ತ್ರಗಳು ದಸರಾ ಮೆರವಣಿಗೆಯ ವಸ್ತುಗಳು ಮುಂತಾದವುಗಳಿವೆ.

ಕ್ರಿ.ಶ. ೧೭೫೦ರಲ್ಲಿನ ಕಾಲಘಟ್ಟದಲ್ಲಿ ನಾರಣಯ್ಯ ಎಂಬಾತನು ತನ್ನ ದಿನಚರಿಯಲ್ಲಿ ಮೈಸೂರು ಕೋಟೆಯೊಳಗಿರುವ ಶಸ್ತ್ರಾಸ್ತ್ರಗಳ ವಿವರಗಳನ್ನು ಹಸ್ತಪ್ರತಿಗಳಲ್ಲಿ ದಾಖಲಿಸಿದ್ದಾನೆ. 'ಶ್ರೀ ಶಾಲಿವಾಹನ ಶಕವರ್ಷ ೧೬೭೧ರ ಶುಕ್ಲ ಸಂವತ್ಸರದ ಮಾರ್ಗಶಿರ ೧೨ರ ಬುಧವಾರದಲ್ಲು ಶ್ರೀರಂಗಪಟ್ಟಣದ ಈಶಾನ್ಯ ಭಾಗದಲ್ಲಿ ಕಿರುವಂಗೂರ ನಾರಣಪ್ಪಯನವರ ಮೊಮ್ಮಗ ನಾರಣಯ್ಯನು ತನಗೆ ಸಂಗ್ರಹವಾಗಿ ಬರೆದು ಸಮಸ್ತ ಚರಿತ್ರೆ ಸಂಪೂರ್ಣ ಶ್ರೀಶ್ರೀಶ್ರೀ' ಪ್ರಾಯಶಃ ಈ ಮನೆತನದವರು ಚಿಕ್ಕದೇವರಾಯ ಒಡೆಯರ ಕಾಲದಲ್ಲಿ ಸ್ಥಾಪನೆಯಾಗಿದ್ದ ಸೀಮೆಯ ಕಂದಾದಾರದ ಚಾವಡಿಯ

ಅಧಿಕಾರಿಗಳಾಗಿದ್ದಿರಬಹುದು. ಆದ್ದರಿಂದ ಇವರು ಮೈಸೂರು ಕೋಟೆಯಲ್ಲಿದ್ದ ಫಿರಂಗಿ, ತುಪಾಕಿ, ಮದ್ದುಗುಂಡು ಮೊದಲಾದ ಶಸ್ತ್ರಾಸ್ತ್ರಗಳ ನಿಖರವಾದ ಲೆಕ್ಕವನ್ನು ಸಂಗ್ರಹಿಸಿಟ್ಟುಕೊಳ್ಳಲು ಸಾಧ್ಯವಾಗಿದೆ.[೧೧೫]

ಯುದ್ಧದಲ್ಲಿ ಫಿರಂಗಿಗಳ ದಾಳಿಯನ್ನು ಕಂಡು ಇದು ಶ್ರೀರಂಗಪಟ್ಟಣದ 'ಫಿರಂಗಿ ಪಟ್ಟಣ' ಎಂದು ಯುದ್ಧ ಮಾಡಲಾರದೆ ಮರಾಠರು ಓಡಿಹೋದರು. ಇದರಿಂದ ಶ್ರೀರಂಗಪಟ್ಟಣದಲ್ಲಿ ಆಧುನಿಕ ಯುದ್ಧನೀತಿಗಳು ಎಷ್ಟರ ಮಟ್ಟಿಗೆ ಉಪಯೋಗದಲ್ಲಿದ್ದವೆಂದು ಶತ್ರುಗಳ ಸೈನ್ಯಕ್ಕೆ ಹೋಲಿಸಿದರ ತಿಳಿದುಬರುತ್ತದೆ. ದಳವಾಯಿ ನಂಜರಾಜಯ್ಯನು ಕ್ರಿ.ಶ. ೧೭೫೮ರ ನಂತರ ಹೈದರನು ಪ್ರವರ್ಧಮಾನಕ್ಕೆ ಬಂದಾಗ ಅಂದರೆ ಇಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ತಾನು ಅಧಿಕಾರದ ಆಸೆಯಿಂದ ಶ್ರೀರಂಗಪಟ್ಟಣದ ಅರಮನೆಯ ಬಾಗಿಲಿಗೆ ೪ ಫಿರಂಗಿಗಳಿಂದ ಗುಂಡುಗಳನ್ನು ಹೊಡೆಸಿದನು. ಇದು ಆಂತರಿಕ ಕಲಹದಿಂದಾದ ಅಚಾತುರ್ಯವಾಗಿದ್ದು ಸ್ಥಳೀಯ ಅಧಿಕಾರಿಗಳೇ ರಾಜನ ವಿರುದ್ಧ ಫಿರಂಗಿಗಳಂತಹ ಮಾರಕ ಯುದ್ಧೋಪಕರಣಗಳನ್ನು ಬಳಸಲು ಸುಲಭವಾಗಿ ಅವಕಾಶ ನೀಡುವಂತಿತ್ತು.

ಹೈದರ್ ಅಲಿಯು ಕ್ರಿ.ಶ. ೧೭೮೦ರ ವೇಳೆಗೆ ೩೦೦ ತೋಪುಗಳನ್ನು ಮತ್ತು ಅದಕ್ಕೆ ಬೇಕಾದ ಮದ್ದುಗುಂಡುಗಳನ್ನು ಸೈನ್ಯದಲ್ಲಿ ಸಿದ್ಧಪಡಿಸಿದ್ದನು.[೧೧೬] ಟಿಪ್ಪು ಸುಲ್ತಾನನು ಮುಮ್ಮಡಿ ಕೃಷ್ಣರಾಜ ಒಡೆಯರು ಹುಟ್ಟಿದ ವಿಷಯವನ್ನು ತಿಳಿದು ಸಂಪ್ರದಾಯದ ಪ್ರಕಾರ ಫಿರಂಗಿಗಳನ್ನು ಹಾರಿಸುವಂತೆ ಆಜ್ಞೆ ಮಾಡಿದನು. ಕ್ರಿ.ಶ. ೧೭೯೧ರಲ್ಲಿ ಶ್ರೀರಂಗಪಟ್ಟಣದತ್ತ ಬ್ರಿಟಿಷ್ ಸೈನ್ಯವು ಆಕ್ರಮಣವನ್ನು ಕನಕಪುರ ಮಾರ್ಗವಾಗಿ ರಾಮನಗರ ತಲುಪುವ ವೇಳೆಗೆ ಕನಕಪುರದ ಇಕ್ಕಟ್ಟಾದ ಮಾರ್ಗದಲ್ಲಿ ಫಿರಂಗಿಗಳನ್ನು ಸಾಗಿಸುವುದು ಬ್ರಿಟಿಷರಿಗೆ ಅಸಾಧ್ಯವಾದ ಕಾರ್ಯವಾಗಿದ್ದರೂ ಸಹ ಅತ್ಯಂತ ನಿಧಾನವಾಗಿ ಸಾಗಿಸಿದರು. ಆದರೆ ಬ್ರಿಟಿಷರು. ರಾಮನಗರದ ರಾಮಗಿರಿದುರ್ಗಕ್ಕೆ ಮುತ್ತಿಗೆ ಹಾಕಿದಾಗ ಅಲ್ಲಿದ್ದ ಫಿರಂಗಿಗಳನ್ನು ಕಂಡು ಬ್ರಿಟಿಷ್ ಸೈನ್ಯಾಧಿಕಾರಿಯಾದ ಕಾರ್ನ್‌ವಾಲೀಸನನ್ನು ಆಶ್ಚರ್ಯಕ್ಕೆ ಎಡೆಮಾಡಿಕೊಟ್ಟಿತು. ಆನೆಕಲ್ಲು ಬೆಟ್ಟದಮೇಲೆ ಶತ್ರುವಿನ ಅಂದರೆ ಟಿಪ್ಪುವಿನ ಸೈನ್ಯವು ಬ್ರಿಟಿಷರ ಸೈನ್ಯದಿಂದ ಹಾರಿಸಲಾದ ಫಿರಂಗಿ ದಳದ ತೋಪುಗಳನ್ನು ಹಾರಿಸಲಾಗಿ ತಕ್ಷಣವೇ ಚದುರಿಹೋಯಿತು. ಅಲ್ಲದೆ ಬೆಂಗಳೂರಿನ ಕತ್ತಿಗೆರೆಪೇಟೆ ಎಂಬ ಹಳ್ಳಿಯ ಸಮೀಪದಲ್ಲಿ ಅದು ಬೀಡುಬಿಟ್ಟಿತು. ಈ ವೇಳೆಗೆ ೪,೦೦೦ ಸೈನ್ಯದ ಟಿಪ್ಪುವಿನ ಅಶ್ವದಳ ಹಲವಾರು ಗುಂಪುಗಳಲ್ಲಿ ಕಾಣಿಸಿಕೊಂಡರೂ ಮುಂಚೂಣಿಯಲ್ಲಿದ್ದ ಬ್ರಿಟಿಷರ ಲಘು ಫಿರಂಗಿಗಳಿಂದ ಕೆಲವು ಗುಂಡುಗಳು ಸಿಡಿಯುತ್ತಿದ್ದಂತೆ ಅದು ಬೆಂಗಳೂರಿನತ್ತ ಮುಖಮಾಡಿದವು. ಕಗ್ಗಲಿಪುರದ ಸಮೀಪ ಟಿಪ್ಪುವಿನ ಅಶ್ವಪಡೆಯು ತೋಪು ಉಡಾಯಿಸುವ ಬೆದರಿಕೆಯೊಡ್ಡಿದಾಗ ಜನರಲ್ ಫ್ಲಾಯ್ಡ್ ತನ್ನ ಕುದುರೆ ಪಡೆದು ೪ ತುಕಡಿಗಳು ಸ್ವಲ್ಪ ಪದಾತಿಸೇನೆ ಮತ್ತು ಫಿರಂಗಿಗಳ ಮೂಲಕ ಆಗಾಗ ಫಿರಂಗಿಗಳಿಂದ ಗುಂಡುಗಳನ್ನು ಹಾರಿಸಿ ಟಿಪ್ಪುವಿನ ಸೈನಿಕರು ಬಹುದೂರಕ್ಕೆ ಸರಿದರು.[೧೧೭] ಟಿಪ್ಪುವಿನ ಸೈನ್ಯವು ಅತಿವೇಗವಾಗಿ ಸಾಗುತ್ತಿದ್ದ ಸೈನ್ಯದ ಎದುರಿಗೆ ಬ್ರಿಟಿಷರ ಸೈನ್ಯದ ನಡೆಯು

ಮಂದಗತಿಯಾಗಿತ್ತು ಸಿಡಿಮದ್ದು ಗುಂಡು ಹಾಗೂ ಇತರೆ ಮಿಲಿಟರಿ ಸಜ್ಜುಗಳ ಹಾನಿ ಮುತ್ತಿಗೆಯ ಮೊದಲ ಘಟ್ಟದಲ್ಲೇ ಗಾಬರಿ ಹುಟ್ಟಿಸುವ ಮಟ್ಟಕ್ಕೆ ತಲುಪಿದವು.

ಗೋಲಂದಾಜು ಇಲಾಖೆಯ (ಸೈನಿಕಸಾಮಗ್ರಿ, ಶಸ್ತ್ರಗಳ ಖಾತೆ) ಕಡೆಯಿಂದಲೂ ಕೆಲವು ಅಹಿತಕರ ಘಟನೆಗಳು ಜರುಗಿದವು. ಸರಕುಸಾಗಣೆ ಗಾಡಿ ಮತ್ತು ಫಿರಂಗಿ ಸಾಗಣೆ ಗಾಡಿಗಳನ್ನು ಒದಗಿಸುವ ಕಾರ್ಯಭಾರಿಯಾಗಿದ್ದ ಮೇಜರ್ ಡಲ್ಲಾಸ ಈವರೆಗಿನ ಸೈನ್ಯದ ಪಥಕ್ರಮಣದ ಪ್ರಗತಿಗೆ ಉಂಟಾಗಿದ್ದ ಅಡಚಣೆಗಳನ್ನು ನಿವಾರಿಸುವ ಉದ್ದೇಶದಿಂದ ತಾನು ತೋಪು ಉಡಾವಣೆಯ ಫಿರಂಗಿ ಸಾಲು ವಿಭಾಗಕ್ಕೆ ಸೇರಿಕೊಂಡನು. ಬ್ರಿಟಿಷರ ಈ ರೀತಿಯಾದ ಸೈನ್ಯ ಸರಬರಾಜು ವ್ಯವಸ್ಥೆಗೆ ಹಲವಾರು ತುಕಡಿಗಳು ಒಗ್ಗೂಡಿದವು. ಇಡೀ ಸೈನ್ಯ ಬಾರ್‌ಸಿಪಾಯಿಗಳ ಫಿರಂಗಿ ಸಾಲುಗಳು ಸಹಿತವಾಗಿ ಕಾನಕಾನ ಹಳ್ಳಿಯಲ್ಲಿಯಲ್ಲಿ ವ್ಯೂಹ ರಚಿಸಿಕೊಂಡವು.[೧೧೭] ಅಚ್ಚಲು ಗ್ರಾಮದ ಬಳಿ ಬೇಹುಗಾರಿಕೆಯ ಮೂಲಕ ಟಿಪ್ಪುವಿನ ಸೈನ್ಯದ ಎರಡು ಫಿರಂಗಿಗಳಿದ್ದುದನ್ನು ತಿಳಿದುಕೊಂಡನು.

ಮಧ್ಯರಾತ್ರಿಯ ಸಮಯದಲ್ಲಿ ಕಾವಲು ರಾವುತರ ಎಚ್ಚರಿಕೆಯ ಗಂಟೆಯು ಅತಿ ವಿಷಮ ಪರಿಸ್ಥಿತಿಯಲ್ಲಿ ಸಹಾಯಕವಾಗುತ್ತಿತ್ತು. ಶತ್ರುಗಳು ಹಾಳುಗೆಪುವಲು ಆರಂಭಿಸಿದ್ದ ಫಿರಂಗಿಗಾಡಿಗಳಂತೂ ಸ್ವಾಧೀನಕ್ಕೆ ಬಂದವು. ಈ ಫಿರಂಗಿಗಾಡಿಗಳನ್ನು ಒಂದು ಬಯಲಿನಲ್ಲಿ ಅನುಕೂಲಕರವಾಗಿ ನಿಲ್ಲಿಸಲಾಗಿತ್ತು. ಜನರಲ್ ಹ್ಯಾರಿಸ್ ಸೈನ್ಯದ ಬಲಪಕ್ಕದ ದಳ ಮತ್ತು ಕುದುರೆಪಡೆಯ ೫ ರೆಜಿಮೆಂಟ್‌ಗಳ ಜೊತೆಯಲ್ಲಿ ಎಡಪಕ್ಕದ ದಳ ಮತ್ತು ಕುದುರೆದಳ ಫಿರಂಗಿ ಸಾಲಿನ ರಕ್ಷಣೆಗಾಗಿ ಕಾನಕಾನಹಳ್ಳಿಯಲ್ಲಿಯೇ ಉಳಿದುಕೊಂಡಿತು. ಮಾರನೆಯ ದಿನ ಸೈನ್ಯವು ಅಚಲಿನತ್ತ ಹೊರಟು ಅಲಗೂರಿನಲ್ಲಿ ಬಿಡಾರ ಹೂಡಿತು.

ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ನಡೆಯುತ್ತಿದ್ದ ದಸರಾ ಉತ್ಸವದಲ್ಲಿ (ಕ್ರಿ.ಶ. ೧೬೪೭)ನ ವಿಜಯದಶಮಿ ಸವಾರಿಯ ದಿನ ಅಲ್ಲಲ್ಲಿ ಬಾಣ ಬಿರುದು, ಸುರಹೊಗಲುಗಳು ಹರಡಿ ಆಕಾಶದಲ್ಲಿ ಹಬ್ಬವುಂಟುಮಾಡುತ್ತಿದ್ದವು. ಪಾಡ್ಯದ ಸಂಜೆಯಿಂದ ವಿಜಯ ದಶಮಿಯವರೆಗೆ ನಡೆಯುತ್ತಿದ್ದ ದರ್ಬಾರಿಗೆ ಮಹಾರಾಜರು ಸಂಪ್ರದಾಯದ ಪ್ರಕಾರ ಸಿಂಹಾಸನಾರೂಢರಾದಾಗ ೨೧ ಕುಶಲ ತೋಪುಗಳು ಹಾರುತ್ತಿದ್ದವು ಈ ಗುಂಡುಗಳ ಸದ್ದು ಇಡೀ ಊರಿಗೇ ಕೇಳಿಸುತ್ತುತ್ತು. ಅಂಬಾರಿ ಸಾಗಿದ ಮೇಲೆ ಮತ್ತೆ ಪೋಲೀಸಿನವರು ಕುದುರೆ ಸವಾರರು, ಪಟ್ಟದ ಆನೆ, ಪಟ್ಟದ ಕುದುರೆ, ಪಟ್ಟದ ಹಸು, ಅರಮನೆಗಾಡಿಗಳು, ಪಲ್ಲಕ್ಕಿ ಫಿರಂಗಿ ಗಾಡಿಗಳು ಇತ್ಯಾದಿಗಳು ಬರುತ್ತಿದ್ದವು. ಈ ಫಿರಂಗಿ ಗಾಡಿಗಳು ಎಲ್ಲಿದಕ್ಕಿಂತ ಹಿಂದೆ ಬರಲು ಕಾರಣವೆಂದರೆ ಅವುಗಳು ಸೈನ್ಯದಲ್ಲಿ ಪ್ರಮುಖವಾದ ಸ್ಥಾನವನ್ನು ಹೊಂದಿದ್ದವು ಎಂದುಹೇಳಬಹುದು.

ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ಬಿಜಾಪುರದ ಸೈನ್ಯವು ಆಕ್ರಮಣ ಮಾಡಿದಾಗ ಯುದ್ಧಭೂಮಿಯಲ್ಲಿ ಯುದ್ಧ ಪ್ರಾರಂಭವಾದದ್ದೇ ತಡ ಸೈನಿಕರು ಕೋಟೆಗಳ ಮೇಲೇರಿ ಪೆಟಲಗುಂಡುಗಳ ಮಳೆಗೆರೆದರು. ಯುದ್ಧದಲ್ಲಿ ಕರಿಗಳಿಗೆ ಎಂಟು, ಕಾಲಾಲಿಗಳಿಗೆ ಎರಡು, ಅಶ್ವಗಳಿಗೆ ನಾಲ್ಕು, ಫಿರಂಗಿ ಬಂಡಿಗಳಿಗೆ ಹತ್ತು, ದೀವಟಿಗೆಗಳನ್ನು ಒದಗಿಸುವ ವ್ಯವಸ್ಥೆಯಾಗಿತ್ತು.

ಅಂಬಿನ ತುದಿಗೇರಿಸಿದ ಪೊಟ್ಟಣದುಪು
ಲಿಂಬಾದ ಕಿಚ್ಚ ಕಾರಿಸುತ
ಕುಂಬಿನಿ ನಡುಗೆ ಬೊಬ್ಬಿಂದೆಚ್ಚು ಶರಗಳ
ತುಂಬಿದರೂರೊಳಗೆ[೧೧೭]

ಪ್ರತಿ ಬಾಣಗಳ ತುದಿಯಲ್ಲೂ ಮದ್ದಿನ ಪೊಟ್ಟಣಗಳನ್ನು ಅಂಟಿಸಿ ಅವುಗಳಿಗೆ ಬೆಂಕಿಯನ್ನು ಹೊತ್ತಿಸಿ ಶತ್ರುಗಳ ಮೇಲೆ ಹಾರಿಸಲಾಯಿತು. ಆನೆಯ ಮೇಲೆ ಜಬರುಜಂಗಿಗಳ ತಂದಾನಿಸಿ ಖಾನರು ಮುಂಬರಿದು ಗುಂಡಿನ ಸೋನೆಯ ಕರೆದರು. ಸುರುಸುರು ಬಾಣಗಳ ಉರಿ ಚೌದೆಸಿ ತುಂಬಿತು.[೧೧೮]

ಮುಸುಕಿದ ಬಾಣ ವುಪ್ಪಿನ ಪೊಟ್ಟಣಗಳ
ಮಸೆಯೆಂಬು ಪೆಟಲು ಗುಂಡುಗಳ
ಎಸೆವ ಪೆರ್ಮುಳೆಗರೆಯುತ ಬೊಬ್ಬಿರಿಸಿದಾಗ
ಳಸಮ ಸಾಹಸಿಗಳೇರಿದರು.[೧೧೯]

ಬಾಣಗಳ ದಾಳಿಯು ಆಕಾಶದಲ್ಲಿ ಮುಸುಕಿತು ಫಿರಂಗಿ ಗುಂಡುಗಳು ಎಸೆಯುವ ಬೆಂಕಿಯುಂಡೆಗಳಂತೆ ಪ್ರಯೋಗಿಸಲ್ಪಟ್ಟವು.[೧೨೦] ಎಂದು ತಿಳಿದು ಬರುತ್ತದೆ.

ವಿಜಯನಗರ ಕಾಲದಲ್ಲಿ ಯುದ್ಧಗಳಲ್ಲಿನ ವರ್ಣನೆಯನ್ನು ಕುರಿತು ರಷ್ಯಾದ ಪ್ರವಾಸಿ ನಿಕಿಟನ್ ಮನಮೋಹಕವಾಗಿ ಚಿತ್ರಿಸಿದ್ದಾನೆ. ಯುದ್ಧಗಳಲ್ಲಿ ಆನೆಗಳನ್ನು ಹೆಚ್ಚಾಗಿ ಅಲಂಕರಿಸಿದ ಉಕ್ಕಿನ ತಗಡುಗಳನ್ನು ಹೊದಿಸಿ ಅವುಗಳ ಸೊಂಡಿಲು ಮತ್ತು ಕೋರೆಗಳಿಗೆ ದೊಡ್ಡ ಕೋಲ್ಕತ್ತಿಗಳನ್ನು ಹೊಂದಿಸಿ ಬೆನ್ನಿಗೆ ಅಂಬಾರಿಗಳನ್ನು ಬಿಗಿದು ಅದರೊಳಗೆ ಬಂದೂಕುಗಳನ್ನು ಬಿಲ್ಲುಬಾಣಗಳನ್ನು ಹಿಡಿದು ರಕ್ಷಾಕವಚಗಳನ್ನು ಧರಿಸಿ ೧೨ ಜನರು ಇರುತ್ತಾರೆ. ಬಾರ್ಬೋಸಾ ಹೇಳುವಂತೆ ಯುದ್ಧಕ್ಕೆ ಹೋಗುವಾಗ ಅಂಬಾರಿಗಳನ್ನು ಆನೆಗಳ ಮೇಲೆ ಬಿಗಿದು ಶಸ್ತ್ರಾಸ್ತ್ರಗಳನ್ನು ಅವುಗಳಲ್ಲಿ ಸಿದ್ಧವಾಗಿರುವಂತೆ ನೋಡಿಕೊಂಡರು. ಮುಖ್ಯವಾಗಿ ಶ್ರೀರಂಗಪಟ್ಟಣದ ಒಳಕೋಟೆಯಲ್ಲಿ ಹನ್ನೊಂದು ಫಿರಂಗಿಗಳನ್ನು ಹೊರಕೋಟೆಯಲ್ಲಿ ಮುವ್ವತ್ತಮೂರು ಫಿರಂಗಿಗಳ ಸದಾ ಸಿದ್ಧಗೊಂಡಿರುತ್ತದ್ದವು.

ಒಳಕೋಟೆಯಲ್ಲಿನ ಫಿರಂಗಿಗಳು ಈ ರೀತಿಯಾಗಿವೆ ಹೊಸಕೇರಿಯ ಹನುಮಂತನ ಕೊತ್ತಳದಲ್ಲಿ ಒಂದು. ಮೂಲೆಯ ಕೊತ್ತಲದ ಬಳಿ ರಾಮ ಬಲರಾಮ ಕೊತ್ತಲಗಳಲ್ಲಿ ರಾಮ ಬಲರಾಮ ಎಂಬ ಹೆಸರಿನ ಎರಡು ಫಿರಂಗಿಗಳು ೩, ಹುಚ್ಚು ನಾರಸಿಂಹನ ಕೊತ್ತಲದಲ್ಲಿ ಎರಡು ಬೇಡಗೇರಿಯಲ್ಲಿ ವಿಷ್ಣುಚಕ್ರದ ಕೊತ್ತಲದಲ್ಲಿ ಒಂದು ದೊಡ್ಡ ಫಿರಂಗಿ ಮರದಕೇರಿಯ ಭೂತನಾಥನ ಕೊತ್ತಲದಲ್ಲಿ ಒಂದು ಹುಲ್ಲು ಮೆದೆಯ ಬಳಿಯಲ್ಲಿನ ಚಾಮುಂಡಿ ಕೊತ್ತಲದಲ್ಲಿ ಒಂದು. ಸಿಡಿಲುಮಲ್ಲನ ಕೊತ್ತಲದಲ್ಲಿ ಒಂದು ಬ್ರಹ್ಮಪುರ ಬಾಗಿಲಿನ ನಾಗರಮರಿ ಕೊತ್ತಲದಲ್ಲಿ ಒಂದು

ಬಸವನಗುಡಿಯ ಬಳಿ ಸಿಡಿಲಮರಿ ಕೊತ್ತಲದಲ್ಲಿ ಒಂದು ಈ ರೀತಿಯಾಗಿ ಒಟ್ಟು ಹನ್ನೊಂದು ಫಿರಂಗಿಗಳನ್ನಿಡಿಸಿದರು.[೧೨೧]

ಆದರೆ ರಕ್ಷಣಾ ದೃಷ್ಟಿಯಿಂದ ಹೊರಕೋಟೆಯಲ್ಲಿ ಮಾತ್ರ ಹೆಚ್ಚು ಫಿರಂಗಿಗಳನ್ನಿಡಿಸಿದರು. ಏಕೆಂದರೆ ಹೊರಕೋಟೆಯಲ್ಲಿರುವ ಫಿರಂಗಿಗಳು ಶತ್ರುಗಳ ಆಕ್ರಮಣವನ್ನು ತಡೆಯುವಂತೆ ಅನುಕೂಲಕರವಾಗಿದ್ದವು. ಆಕಸ್ಮಿಕವಾಗಿ ಶತ್ರುಗಳು ತಪ್ಪಿಸಿಕೊಂಡು ಒಳಕೋಟೆಯ ಬಳಿ ಕಾಣಿಸಿಕೊಂಡಾಗ ಮಾತ್ರ ಒಳಕೋಟೆಯಲ್ಲಿನ ಫಿರಂಗಿಗಳನ್ನು ಬಳಸುಲಾಗುತ್ತಿತ್ತು. ಈ ವಿಫಲತೆಯ ಉಪಯುಕ್ತತೆಯು ಎರಡನೇ ಹಂತದ ರಕ್ಷಣಾ ಕ್ರಮಗಳಾಗಿದ್ದವು. ಹೊರಕೋಟೆಯಲ್ಲಿನ ಫಿರಂಗಿಗಳು ಈ ರೀತಿಯಾಗಿವೆ ಅವುಗಳನ್ನು ಈ ರೀತಿಯಾಗಿ ತಿಳಿಸಿಬಹುದಾಗಿದೆ.

| **ಕೊತ್ತಲಗಳು** | **ಫಿರಂಗಿಗಳ ಸಂಖ್ಯೆ** |
|---|---|
| ದೊಡ್ಡಕೊಳದ ರಾಮಲಿಂಗ ಕೊತ್ತಲ | ೧ |
| ಕೃಷ್ಣದಿಡ್ಡಿ ಬಳಿಯ ಗೋಪಾಲಕೃಷ್ಣ ಕೊತ್ತಲ | ೧ |
| ಚಿಕ್ಕರಸಿನವರ ಕೊತ್ತಲದಲ್ಲಿನ ಚೂರಿಖಾನನ ಕೊತ್ತಲ | ೧ |
| ಬಾಬೋಜಿ ದಿಡ್ಡಿಯ ಬಳಿ ಚೆಲುವರಾಯ ಕೋತ್ತಲ | ೨ |
| ರಣಭೀಮಿ ಕೊತ್ತಲದಲ್ಲಿ ರಣಶೂರ ರಣಭೀಮ | ೨ |
| ಮೂಡಲ ಬಾಗಿಲ ಬಡಗಚಾರಿ ವೆಂಕಟಾಚಲನ ಕೊತ್ತಲ | ೧ |
| ತೆಂಕಚಾರಿಯಲ್ಲಿನ ಚಾಮುಂಡಿ ಕೊತ್ತಲ | ೧ |
| ಬೇಟೆರಾಯನ ಕೊತ್ತ | ೧ |
| ಮೂಲೆಯ ಪ್ರಶಯರದ್ರ ಪ್ರಳಯಕಾಲ ಭೈರವ ಕೊತ್ತಲ | ೨ |
| ಕೋಟೆನಲ್ಲೂರಿನ ಮನೆಯ ಬಳಿಯಧನಂಜಯ ಕೊತ್ತಲದಲ್ಲಿ | ೧ |
| ಚಿಕ್ಕ ಅರಸಿನ ಕಣಜದ ಬಳಿ ಮುದ್ದುಕೃಷ್ಣನ ಕೊತ್ತ | ೧ |
| ಕೋಟೆಯಗಾರೆಹಟ್ಟಿ ಬಳಿ ಚಲುವರಾಯನ ಕೊತ್ತಲ | ೧ |
| ಮೈಸೂರು ಬಾಗಿಲು ಜಯವಿಜಯ ಕೊತ್ತಲದಲ್ಲಿ | ೨ |
| ಚಿಕ್ಕರಾಮ ಬಾಣ ಕೊತ್ತಲದಲ್ಲಿ | ೧ |
| ಸೇತುವೆ ಬಾಗಿಲ ಬಳಿ | ೧ |
| ಇವುಗಳಲ್ಲದೆ ಇತರೆ ಫಿರಂಗಿಗಳು | ೧೪ |
| **ಒಟ್ಟು ಫಿರಂಗಿಗಳು** | **೩೪** |

ಈ ರೀತಿಯಾಗಿ ಫಿರಂಗಿಗಳನ್ನು ಶ್ರೀರಂಗಪಟ್ಟಣದ ಕೋಟೆಯಲ್ಲಿಡಿಸಿ ರಕ್ಷಣೆಯನ್ನು ಒದಗಿಸಿದರು.[೧೩೧]

ಕಂಠೀರವ ನರಸರಾಜ ಒಡೆಯರ ಕಾಲದಲ್ಲಿದ್ದ ಆಯುಧಾಗಾರವನ್ನು ವಿಸ್ತರಿಸಿ ನವರಾತ್ರಿ ಉತ್ಸವಗಳಿಗೆ ಅವಶ್ಯಕವಾಗಿದ್ದಂತಹ ಕೆಲವು ಆಯುಧಗಳನ್ನು ಜಾನಸಾಲೆಯಲ್ಲಿ ತಯಾರಿಸಲು ಪ್ರೋತ್ಸಾಹ ನೀಡಲಾಯಿತು. ಹಗಲುಬತ್ತಿ, ಹೂಬಾಣ, ಆಕಾಶಕೊಳವಿ, ಚಕ್ರಬಾಣ, ನಕ್ಷತ್ರಬಾಣ ಮತ್ತು ನಾನಾವಿಧವಾದ ವೃಕ್ಷ ಪಕ್ಷಗಳಾಕಾರದ ಬಾಣಗಳನ್ನು ಮಾಡಿಸಿ ನವರಾತ್ರಿ ಉತ್ಸವದಲ್ಲಿ

ಬಳಸುವಂತೆ ಆಜ್ಞಾಪಿಸಲಾಯಿತು.[೧೨] ಮುಂದೆ ಇವುಗಳನ್ನು ಮಾರ್ಪಾಡು ಮಾಡಿ ಹೈದರನ ಕಾಲದಲ್ಲಿ ಕ್ಷಿಪಣಿಗಳ ಅನ್ವೇಷಣೆಗೆ ಅವಕಾಶವನ್ನು ಒದಗಿಸಲಾಯಿತು. ಅಲ್ಲದೆ ಶ್ರೀರಂಗ ಪಟ್ಟಣದ ಕೋಟೆಗೆ ಹೆಚ್ಚಿನ ರಕ್ಷಣೆಯನ್ನು ಒದಗಿಸಿ ಉಗ್ರಾಣ ಮತ್ತು ಮದ್ದಿನ ಮನೆಗಳಿಗೆ ರಕ್ಷಣೆಯನ್ನು ನೀಡುವಂತೆ ನೋಡಿಕೊಳ್ಳಲಾಯಿತು.

ಕ್ರಿ.ಶ. ೧೭೨೪ರಲ್ಲಿ ದೊಡ್ಡಕೃಷ್ಣರಾಜ ಒಡೆಯರ ಆಳ್ವಿಕೆಯ ಕಾಲದಲ್ಲಿ ಆರ್ಕಾಟಿನ ಸಾದುಲ್ಲಾಖಾನನ ದಿವಾನನಾಗಿದ್ದ ಸಾಹುಲ್ಲಾಖಾನನ ಕಡೆಯ ದಿವಾನ ಶಿದ್ಧೋಜಿ ಘೋರ್ಪಡೆಯು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಮೈಸೂರಿನ ಸೈನ್ಯ ಫಿರಂಗಿಗಳಿಂದ ದಾಳಿ ಮಾಡಿತು. ಈ ಫಿರಂಗಿ ಗುಂಡುಗಳ ಹೊಡೆತವನ್ನು ತಾಳಲಾರದೆ ಶತ್ರುಸೈನ್ಯ ಓಡಿಹೋಯಿತು. ಅದೇ ವರ್ಷದಲ್ಲಿ ಮರಾಠರ ಬಾಜಿರಾಯನು. ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಶ್ರೀರಂಗಪಟ್ಟಣದ ಸೈನಿಕರು ಕೋಟೆಯ ಮೇಲಿಂದ ಫಿರಂಗಿ ಗುಂಡುಗಳನ್ನು ಹೊಡೆಯುತ್ತಿರಲು ಬಾಜಿರಾಯನು 'ನಾವು ಕತ್ತಿಯಿಂದ ಯುದ್ಧ ಮಾಡಿದರೆ ಇವರು ಫಿರಂಗಿಗಳಿಂದ ಯುದ್ಧ ಮಾಡುವರು ಎಂದು ಓಡಿಹೋದನು.[೧೨] ಹೀಗೆ ಮೈಸೂರಿನ ವಿವಿಧ ಅರಸರು ಯುದ್ಧಗಳಲ್ಲಿ ಯುದ್ಧನೀತಿ ಮತ್ತು ಆಯುಧೋಪಕರಣಗಳನ್ನು ಬಳಸಿಕೊಂಡಿದ್ದಾರೆ.

**ಕ್ಷಿಪಣಿಗಳು**

ಮೈಸೂರು ಸೈನ್ಯದಲ್ಲಿ ಪ್ರಮುಖವಾದ ಯುದ್ಧೋಪಕರಣಗಳೆಂದರೆ ಕ್ಷಿಪಣಿಗಳು. ಕ್ಷಿಪಣಿಗಳೆಂದರೆ ನಿರ್ದಿಷ್ಟ ಪ್ರದೇಶದ ಮೇಲೆ ನಿರ್ದಿಷ್ಟವಾದ ಗುರಿಯನ್ನು ಹೊಂದಿದ ಸಿಡಿತಲೆಗಳನ್ನು ಹೊತ್ತೊಯ್ಯಬಲ್ಲ ವಾಹನಗಳೇ ಕ್ಷಿಪಣಿಗಳೆಂದು ಸಾಮಾನ್ಯವಾಗಿ ಅರ್ಥೈಸಬಹುದಾಗಿದೆ.

ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ನವರಾತ್ರಿ ಉತ್ಸವಕ್ಕೆ ಅವಶ್ಯವಾಗಿದ್ದಂತಹ ಆಯುಧಗಳನ್ನು ತಯಾರಿಸುವ ಜವಾಬ್ಧಾರಿಯನ್ನು ಜಾನಸಾಲೆಗೆ ವಹಿಸಲಾಗಿತ್ತು. ಅವುಗಳಲ್ಲಿ ಪ್ರಮುಖವಾಗಿ ಹಗಲುಬತ್ತಿ, ಹುಂಬಾಣ, ಆಕಾಶಕೊಳವಿಗಳು ಪ್ರಮುಖವಾಗಿ ತಯಾರಾಗುತ್ತಿದ್ದವು. ಮುಂದೆ ಈ ಹೂಬಾಣ ಆಕಾಶಕೊಳವಿಗಳೇ ಕ್ಷಿಪಣಿ ತಂತ್ರಜ್ಞಾನದಲ್ಲಿನ ಪ್ರಮುಖ ಮೈಲುಗಲ್ಲಾಯಿತು. ಎಕೆಂದರೆ ಇವುಗಳನ್ನು ಅಭಿವೃದ್ಧಿ ಪಡಿಸಿದವನು. ಹೈದರ್ ಅಲಿಯು ಕರ್ನಾಟಕ ಪ್ರದೇಶದಲ್ಲಿದ್ದಾಗ ಆಕಾಶಕೊಳವಿಗಳ ತಂತ್ರಜ್ಞಾನವನ್ನು ಬಳಸಿ ಕ್ಷಿಪಣಿಗಳನ್ನು ತಯಾರಿಸುವ ಕಾರ್ಯಗಳನ್ನು ಮಾಡಿದನು. ಅದರ ಪ್ರಕಾರ ಮೂರರಿಂದ ನಾಲ್ಕು ಅಡಿ ಉದ್ದದ ಬಿದಿರಿನ ಕೊಳವೆಗಳಿಗೆ ಮದ್ದನ್ನು ತುಂಬಿ ಅವುಗಳ ಕೆಳ ತುದಿಯಲ್ಲಿ ಬೆಂಕಿಯನ್ನು ಹೊತ್ತಿಸಲು ಬತ್ತಿಗಳನ್ನು ಇಟ್ಟು ಮುಂಭಾಗದಲ್ಲಿನ ಬಾಗವನ್ನು ಮುಚ್ಚಲು ಸಿಲಿಂಡರಾಕೃತಿಯ ವೃತ್ತಾಕಾರದ ಬಿರುಡೆಯನ್ನು ಮುಚ್ಚಲಾಗುತ್ತಿತ್ತು. ಇವುಗಳನ್ನು ಅಂಟಿಸಿ ಭದ್ರಪಡಿಸಲಾಗುತ್ತಿತ್ತು. ಈ ಬಿದಿರಿನ ಕೊಳವೆಗಳಿಗೆ ೫ ರಿಂದ ೬ ಅಡಿ ಉದ್ದದ ಕೋಲುಗಳನ್ನು ಭದ್ರವಾಗಿ ಕಟ್ಟಿ ಬೆಂಕಿಹೊತ್ತಿಸಿ ಶತ್ರುಸೈನ್ಯದ ಮೇಲೆ ಹಾರಿಸಲಾಗುತ್ತಿತ್ತು. ನಿರ್ದಿಷ್ಟ ಗುರಿಯನ್ನು ತಲುಪಿದ ಈ ಕ್ಷಿಪಣಿಗಳು ಸ್ಫೋಟಗೊಂಡು

ಹಲವಾರು ಜನರು ಸಾವನ್ನಪ್ಪುತ್ತಿದ್ದರು. ಈ ರೀತಿಯಾದ ಕ್ಷಿಪಣಿಗಳ ಬಳಕೆಯನ್ನು ೧೭೮೦ರ ಪೊಲಿಲೂರು ಕದನದ ಚಿತ್ರಗಳನ್ನು ಶ್ರೀರಂಗಪಟ್ಟಣದ ದರಿಯಾದೌಲತ್‌ನ ಪಶ್ಚಿಮ ದಿಕ್ಕಿನ ಗೋಡೆಯಲ್ಲಿರುವ ಭಿತ್ತಿಚಿತ್ರಗಳನ್ನು ಕಾಣಬಹುದಾಗಿದೆ.

ಮುಂದೆ ಹೈದರ್ ಅಲಿಯ ಮರಣಾನಂತರ ಟಿಪ್ಪು ಸುಲ್ತಾನನು ಫ್ರೆಂಚ್ ತಂತ್ರಜ್ಞಾನದ ನೆರವಿನಿಂದ ಹಲವಾರು ರೀತಿಯ ಮಾರ್ಪಾಡುಗಳನ್ನು ಮಾಡಿ ಸೈನ್ಯದಲ್ಲಿ ಕ್ಷಿಪಣಿಗಳನ್ನು ಬಳಸಿಕೊಳ್ಳುವಂತಹ ಕಾರ್ಯಕ್ಕೆ ಕೈಹಾಕಿದನು. ಫಿರಂಗಿದಳದಂತೆ ಕ್ಷಿಪಣಿ ದಳವನ್ನು ಪ್ರತ್ಯೇಕವಾಗಿ ಟಿಪ್ಪುಸುಲ್ತಾನನು ನಿಯೋಜಿಸಿದನು. ಈತನ ಕಾಲದಲ್ಲಿ ಕ್ಷಿಪಣಿಗಳನ್ನು ಬಿದಿರಿನ ಕೊಳವೆಯ ಬದಲಿಗೆ ಕಬ್ಬಿಣದ ಕೊಳವೆಗಳನ್ನು ನಿರ್ಮಿಸಿ ಅವುಗಳಿಗೆ ಸುತ್ತಲೂ ಚಿಕ್ಕಚಿಕ್ಕ ಕೊಳುವೆಗಳನ್ನು ಜೋಡಿಸಿ ಪ್ರತಿಯೊಂದಕ್ಕೂ ಸಿಡಿಮದ್ದನ್ನು ತುಂಬಿ ಯಥಾಪ್ರಕಾರ ಪ್ರತಿಯೊಂದು ಕೊಳವೆಗಳಿಗೂ ಸಿಲಿಂಡರಾಕೃತಿಯ ಮುಚ್ಚಳದಿಂದ ಭದ್ರಪಡಿಸಿ ಬತ್ತಿಗಳನ್ನು ಜೋಡಿಸಲಾಗುತ್ತಿತ್ತು. ಶತ್ರುಸೈನ್ಯದ ಮೇಲೆ ಈ ಕ್ಷಿಪಣಿಗಳನ್ನು ಉಡಾಯಿಸಿದಾಗ ಅವು ನಿರ್ಧಿಷ್ಠ ಗುರಿಯನ್ನು ತಲುಪಿದ ಕೂಡಲೇ ಸಿಡಿಯುತ್ತಿದ್ದರಿಂದ ಶತ್ರುಸೈನ್ಯವು ಕ್ಷಿಪಣಿಗಳ ದಾಳಿಗೆ ಸುಲಭವಾಗಿ ತುತ್ತಾಗುತ್ತಿತ್ತು. ಈಗಲೂ ಶ್ರೀರಂಗಪಟ್ಟಣದ ಕೋಟೆಯಲ್ಲಿ ಕ್ಷಿಪಣಿ ಉಡಾಯಿಸುತ್ತಿದ್ದ ಟಿಪ್ಪುವಿನ ಕಾಲದ ವೇಧಿಕೆಯು ನಮಗೆ ಕಂಡುಬರುತ್ತದೆ.

## ಅಡಿ ಟಿಪ್ಪಣಿಗಳು

೧. ಸೋಮಶೇಖರ ಎಸ್.ವೈ., ೨೦೦೯., ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿ., ಪು.೧೦೭.

೨. ರಾಮಕೃಷ್ಣರಾವ್ ಬಿ., ೧೯೧೬., ಶ್ರೀಮನ್ಮಹಾರಾಜರ ವಂಶಾವಳಿ ಭಾಗ-೧., ಪು.೬.

೩. ಅದೇ., ಪು.೬.

೪. ಅದೇ., ಪು.೯

೫. ಅದೇ., ಪು.೧೦.

೬. ಅದೇ., ಪು.೧೬.

೭. ಸೋಮಶೇಖರ್ ಎಸ್.ವೈ., ೨೦೦೯., ಪೂರ್ವೋಕ್ತ., ಪು.೧೦೮.

೮. ರಾಮಕೃಷ್ಣರಾವ್ ಬಿ., ೧೯೧೬, ಪೂರ್ವೋಕ್ತ ಪು. ಸಂಖ್ಯೆ-೪೩

೯. ಅದೇ., ಪು.೪೪.

೧೦. ಅದೇ., ಪು.೪೫.

೧೧. Krishnaswamy Aiyangar S., 1991, South India and Her Muhammadan Invaders.,page no ೫೧.

೧೨. ಅದೇ., ಪು.೫೧.

೧೩. ಅದೇ., ಪು.೫೨.

೧೪. Kulkarni G.T., 1983, The Mughal – Maratha Relations Twenty Five Fateful Years (1682-1707), page no.153

೧೫. ಅದೇ., ಪು.೧೬೬.

೧೬. ಅದೇ., ಪು.೧೬೭.

೧೭. Sathyanarayana A., 1996., Histary of the wodeyars of the mysore page No-42.

೧೮. Satheyanarayana A, 1996 Ibid page No-42.

೧೯. Ibid page No-43.

೨೦. ಶರ್ಮಾ ತಿ.ತಾ. ೧೯೭೪, ಕಂಠೀರವ ನರಸರಾಜ ವಿಜಯ ಪುಟ-೧೧

೨೧. ಶಾಮಾಶಾಸ್ತ್ರೀ. ಆರ್., ೧೯೭೧., ಗೋವಿಂದ ವೈದ್ಯಕೃತ ಕಂಠೀರವ ನರಸರಾಜ ವಿಜಯಂ., ಪು.೨೨.

೨೨. ಸೋಮಶೇಖರ್ ಎಸ್.ವೈ., ೨೦೦೯, ಪೂರ್ವೋಕ್ತ., ಪು.೧೧೯

೨೩. ಲಕ್ಷ್ಮಣ ತೆಲಗಾವಿ., ೨೦೧೧., ರಾಮಾಜಿ ತಿರುಮಲ ಹರಿಕಾರೆಯ ರಾಮರಾಜನ ಬಖೈರು., ಪು.೬೧.

೨೪. ಕೆಳದಿ ಗುಂಡಾ ಜೋಯಿಸ್., ೧೯೯೯., ಲಿಂಗಣ್ಣ ಕವಿಯ ಕೆಳದಿ ನೃಪವಿಜಯ., ಪು.೩೫.

೨೫. ಸುಂದರ ರಾವ್ ಬಿ.ನ., ೨೦೧೧., ಬೆಂಗಳೂರಿನ ಇತಿಹಾಸ., ಪು.೬೬.

೨೬. ಬೆಟಗೇರಿ ಕೃಷ್ಣಶರ್ಮ., ೧೯೮೩., ಕರ್ನಾಟಕ ಜನಜೀವನ., ಪು.೧೩೧, ೧೩೩.

೨೭. ಭೋಯಿ. ಮ.ಬಾ., ೧೯೯೯., ತಿರುಮಲಾರ್ಯ ವಿರಚಿತ ಚಿಕ್ಕದೇವರಾಯ ವಂಶಾವಳಿ., ಪು.೧೩-೧೪.

೨೮. ರಾಮಕೃಷ್ಣರಾವ್ ಬಿ., ೧೯೧೬., ಪೂರ್ವೋಕ್ತ., ಪು.೧೧೧.

೨೯. ಅದೇ., ಪು.೧೧೪.

೩೦. ಅದೇ., ಪು.೧೨೮.

೩೧. Talwar, 1994, Arms and Armoury of the Mysore Palace, 120.

೩೨. Ibd. Page no 126

೩೩.Ibd. Page no .೧೩೦

೩೪. Meadows Taylor, 2001, Tippu Sultan – A Tale of the Mysore war, page no 119.

೩೫. ಅದೇ., ಪು.೧೨೭.

೩೬. ಷೇಕ್ ಅಲಿ ಬಿ., ೧೯೯೭, ಕರ್ನಾಟಕ ಚರಿತ್ರೆ ಸಂಪುಟ-೫, ಪುಟ-೪೯-೫೦.

೩೭. ಅದೇ., ಪು.೫೪.

೩೮. ಅದೇ., ಪು.೫೮

೩೯.Macmunn G.F., 1911., Armouries of India., p.n.59

೪೦.ಅದೇ., ಪು.೬೧.

೪೧. ಅದೇ., ಪು.೬೮.

೪೨. ಪುಟ್ಟಣ್ಣ ಎಂ.ಎಸ್., ೧೯೯೭, ಚಿತ್ರದುರ್ಗದ ಪಾಳೆಯಗಾರರು, ಪುಟ-೯೦-೯೧.

೪೩. ಅದೇ., ಪು.೯೧-೯೨.

೪೪.Sydenham., 1914., India and the War., page no.125

೪೫. Ibd. Page no 193

೪೬. ಮೈಸೂರು ರಾಜ್ಯಸರ್ಕಾರ., ೧೯೭೦., ಕರ್ನಾಟಕ ಪರಂಪರೆ ಸಂಪುಟ ೨., ಪು.೧೯೬.

೪೭. ತಿರುಮಲೆ ತಾತಾಚಾರ್ಯಶರ್ಮ., ೨೦೦೬., ಮೈಸೂರಿನ ಇತಿಹಾಸದ ಹಳೆಯ ಪುಟಗಳು., ಪು.೧೮-೧೯.

೪೮. ಷೇಕ್ ಅಲಿ ಬಿ., ೧೯೯೭., ಕರ್ನಾಟಕ ಚರಿತ್ರೆ ಸಂಪುಟ-೫., ಪು.೧೨೮.

೪೯. ಅದೇ., ಪು.೧೩೦

೫೦. ಅದೇ., ಪು.೧೩೧.

೫೧. ಅದೇ., ಪು.೧೩೫.

೫೨. ಅದೇ., ಪು.೧೩೬

೫೩. ಅದೇ., ಪು.೧೩೬.

೫೪. ಅದೇ., ಪು.೧೩೭

೫೫. ಅದೇ., ಪು.೧೩೮

೫೬. ಅದೇ., ಪು.೧೪೧.

೫೭. ಅದೇ., ಪು.೧೫೨.

೫೮. ಮುಂಬೈ ಕೋರ್ಟ್ ರೆಕಾರ್ಡ್., ೩೦ ಅಕ್ಟೋಬರ್ ೧೭೭೧., ಹೋಮ್‌ಮಿಸಲೇನಿಯಸ್ ಸಂ-೧೦೬., ಪು.೧೦-೧೧.

೫೯.Irfan Habib, 2001, Resistance and Modernization under Hyder ali and Tippu Sultan, page no 226

೬೦. Ibd. Page no೨೨೭.

೬೧. Ibd. Page no೨೩೧.

೬೨. Irwin H.C., 2011, The Garden of India or Chapter on the Oudh History and affairs.,page no 355

೬೩. Krishnaswamy Aiyangar S., 1991, South India and Her Muhammadan Invaders page no.245-246

೬೪. Ibd. Page no೨೫೬.

೬೫. ಷೇಕ್ ಅಲಿ ಬಿ., ೨೦೧೦(ಪು.ಮು)., ಟಿಪ್ಪುಸುಲ್ತಾನ್., ಪು.೩೦.

೬೬. ಅದೇ., ಪು.೩೭

೬೭. ಅದೇ., ಪು.೩೮.

೬೮. ಅದೇ., ಪು.೩೮-೩೯.

೬೯. Hayavadan rao C., 1943., History of Mysore (1399-1799)., page no 456

೭೦. Ibd. Page no 466

೭೧. ಷೇರ್ ಅಲಿ ಬಿ., ೧೯೯೭., ಕರ್ನಾಟಕ ಚರಿತ್ರೆ ಸಂಪುಟ-೫., ಪು.೩೪೩.

೭೨. ಅದೇ., ಪು.೩೪೪.

೭೩. ಅದೇ., ಪು.೩೪೬.

೭೪. ಅದೇ., ಪು.೩೪೬.

೭೫. ಅದೇ., ಪು.೩೪೭.

೭೬. ಅದೇ., ಪು.೩೪೮.

೭೭. ಅದೇ., ಪು.೪೦೫.

೭೮. ಗೋವಿಂದರಾಜು ಸಿ.ಆರ್.,(ಸಂ). ಸೋಮಶೇಖರ್ ಎಸ್.ವೈ. (ಲೇಖಕರು)., ೨೦೧೨., ಚರಿತ್ರೆ ಅಧ್ಯಯನ ಸಂಪುಟ-೬ ಪು.೧೦೨-೧೦೪.

೭೯. ರಾಮಕೃಷ್ಣರಾವ್ ಬಿ., ಪೂರ್ವೋಕ್ತ., ಪುಟ-೪೩

೮೦. ಅದೇ., ಪು.೬೬

೮೧. ಶರ್ಮಾ ತಿ.ತಾ., ೧೯೭೪, ಕಂಠೀರವ ನರಸರಾಜವಿಜಯಂ ಪುಟ-೧೭

೮೨. ಅದೇ., ಪು.೧೮.

೮೩.ಅದೇ., ಪು.೧೮.

೮೪. ಅದೇ., ಪು.೨೮.

೮೫. ಅದೇ., ಪು.೨೯.

೮೬.ಅದೇ., ಪು.೩೦.

೮೭. ಬೋಯಿ ಮ.ಬಾ.,೧೯೯೯.,ತಿರುಮಲಾರ್ಯವಿರಚಿತ ಚಿಕ್ಕದೇವರಾಯ ವಂಶಾವಳಿ,ಪು.೨-೩.

೮೮. ರಾಮಕೃಷ್ಣರಾವ್ ಬಿ., ೧೯೧೬., ಪೂರ್ವೋಕ್ತ., ಪು೭೫-೭೬.

೮೯. ಅದೇ., ಪು.೭೯.

೯೦. ಅದೇ., ಪು.೧೬೦.

೯೧. ಅದೇ., ಪು.೧೭೦.

೯೨. ಚನ್ನಬಸಪ್ಪ ಎಸ್.ಪಾಟೀಲ್ ೧೯೯೯. ಕರ್ನಾಟಕ ಕೋಟೆಗಳು, ಪುಟ-೧೭೦-೧೭೬.

೯೩. ಅದೇ., ಪು.೧೮೨.

೯೪. ಅದೇ., ಪು.೧೮೫.

೯೫. ಜಮುನಾ ಎಂ. (ಪ್ರ.ಸಂ.), ಅರುಣಿ ಎಸ್.ಕೆ.(ಲೇ)., ೨೦೦೭., ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ., ಪು೭೪.

೯೬. ಅದೇ., ಪು.೭೫.

೯೭. ರಾಮಕೃಷ್ಣರಾವ್ ಬಿ., ೧೯೧೬, ಪೂರ್ವೋಕ್ತ., ಪು.೧೧೦.

೯೮. ಜಮುನಾ ಎಂ. (ಪ್ರ.ಸಂ.)., ಪೂರ್ವೋಕ್ತ., ಪು.೯೮.

೯೯. ಅದೇ., ಪು.೧೦೯.

೧೦೦. ಅದೇ., ಪು.೧೨೮.

೧೦೧. ಅದೇ., ಪು.೨೦೭.

೧೦೨. ಅದೇ., ಪು.೨೩೪.

೧೦೩. ಅದೇ., ಪು.೨೩೭.

೧೦೪. ಅದೇ., ಪು.೨೪೮-೨೪೯.

೧೦೫. ಅದೇ., ಪು.೨೭೩.

೧೦೬. ಅದೇ., ಪು.೨೭೯.

೧೦೭. ಅದೇ., ಪು.೨೮೧.

೧೦೮.ಅದೇ., ಪು.೨೮೫.

೧೦೯. ಅದೇ., ಪು.೨೮೮

೧೧೦. ಅದೇ., ಪು.೨೯೮.

೧೧೧. ಅದೇ., ಪು.೨೯೭.

೧೧೨. ಚನ್ನಬಸಪ್ಪ ಎಸ್. ಪಾಟೀಲ್, ೧೯೯೯, ಕರ್ನಾಟಕದ ಕೋಟೆಗಳು., ಪು.೨೪೨.
೧೧೩. ಸೋಮಶೇಖರ್ ಎಸ್.ವೈ., ಪೂರ್ವೋಕ್ತ, ಪು.೬೪.
೧೧೪. ಅದೇ., ಪು.೬೪.
೧೧೫. ಅದೇ., ಪು.೭೯.
೧೧೬. ರಾಮಕೃಷ್ಣರಾವ್., ಪೂರ್ವೋಕ್ತ ಭಾಗ-೧., ಪು.೧೨೮.
೧೧೭. ಅದೇ., ಪು.೧೭೯.
೧೧೮. ಅದೇ., ಪು.೨೨೮.
೧೧೯. ಶರ್ಮಾ ತಿ.ತಾ., ೧೯೭೪., ಪೂರ್ವೋಕ್ತ, ಪು.೧೩.
೧೨೦. ರಾಮಕೃಷ್ಣರಾವ್., ಪೂರ್ವೋಕ್ತ ಭಾಗ-೧., ಪು.೧೧೫.
೧೨೧. ಹಯವದನ್‌ರಾವ್ ಸಿ., ಹಿಸ್ಟರಿ ಆಫ್ ಮೈಸೂರು-ಸಂ.೧., ಪು.೬೯.
೧೨೨. ರಾಮಕೃಷ್ಣರಾವ್ ಬಿ., ಪೂರ್ವೋಕ್ತ., ಪು.೪೭.

ಅಧ್ಯಾಯ : ಐದು

# ಯುದ್ಧನೀತಿ ಮತ್ತು ಪರಿಣಾಮಗಳು

೫.೧. ಯುದ್ಧನೀತಿ
೫.೨. ಯುದ್ಧದ ಪರಿಣಾಮಗಳು

## ಅಧ್ಯಾಯ : ಐದು

# ಯುದ್ಧನೀತಿ ಮತ್ತು ಪರಿಣಾಮಗಳು

### ೫.೧. ಯುದ್ಧನೀತಿ

ಪ್ರಾಚೀನ ಕಾಲದಿಂದಲೂ ಸಹ ಯಾವುದೇ ಸಾಮ್ರಾಜ್ಯವು ಸ್ಥಾಪನೆಯಾಗಿ ಅದು ತನ್ನ ಗಡಿಗಳನ್ನು ವಿಸ್ತರಿಸಲು ಹಿಂಸೆಯ ಪ್ರಕಟರೂಪವು ಅವಶ್ಯಕವಾಗಿದ್ದಿತು. ಅದೇ ಯುದ್ಧವೆಂಬ ಭಯಾನಕ ದೃಶ್ಯ ಯುದ್ಧವು ಕದನ, ಕಾಳಗ, ದಾಳಿ, ಆಕ್ರಮಣ ಮುಂತಾದ ಹೆಸರುಗಳಿಂದ ಕರೆಯಲ್ಪಡುವಂತಹ ಕ್ರೌರ್ಯದ ಮತ್ತೊಂದು ಮುಖವಾಗಿದೆ. ರಾಜ್ಯರಕ್ಷಣೆಯ ಕರ್ತವ್ಯವು ಒಂದು ಕಡೆಯಾದರೆ ರಾಜ್ಯರಕ್ಷಣೆಗಾಗಿ ಅಮಾಯಕರು ಹಿಂಸೆ, ಕ್ರೌರ್ಯ, ದ್ವೇಷ, ಕೊಲೆ, ಸುಲಿಗೆ, ದರೋಡೆ, ಪ್ರತಿಕಾರಗಳಿಗೆ ಒಳಗಾಗುವುದು ಕೂಡ ಸಹಜವೇ ಆಗಿದೆ. ಕೇವಲ ಇಬ್ಬರು ವ್ಯಕ್ತಿಗಳಿಂದ ಪ್ರಾರಂಭವಾಗುವ ಇದು ರಾಜ್ಯ ರಾಜ್ಯಗಳ ಅಮಾಯಕ ಪ್ರಜೆಗಳು ಕೂಡ ಪರಸ್ಪರ ದ್ವೇಷ ಅಸೂಯೆಗಳಿಂದ ಬದುಕುವಂತೆ ಮಾಡುವ ರಾಷ್ಟ್ರಾಭಿಮಾನವನ್ನು ಜಗಳಗಂಟಿತನ, ಗರ್ವ, ಯಜಮಾನ್ಯರ ಆಸೆಗಳ ಪ್ರತಿರೂಪವಾಗಿದೆ.[೧] ಪರಸ್ಪರ ನಿರ್ಮೂಲನೆ ಮಾಡುವುದೇ ಇದರ ಗುರಿಯಾಗಿಲ್ಲ. ಬದಲಾಗಿ ಒಬ್ಬರು ಇನ್ನೊಬ್ಬರ ಮೇಲೆ ದಬ್ಬಾಳಿಕೆಯನ್ನು ಹೇರುವ, ಅಧಿಕಾರವನ್ನು ಪಡೆಯಲು ಶಾಶ್ವತವಾಗಿ ಪ್ರಯತ್ನ ಪಡುವುದೇ ಆಗಿದೆ. ಏಕೆಂದರೆ ಗೆದ್ದವರು ಸೋತವರ ಮೇಲೆ, ಬಲಾಢ್ಯರು ಬಲಹೀನರ ಮೇಲೆ ದಬ್ಬಾಳಿಕೆ ಮಾಡುವುದು ಪ್ರಕೃತಿ ನಿಯಮವಾಗಿದೆ. ಯುದ್ಧವು ಸತ್ಯ, ಧರ್ಮ, ಅರ್ಥ, ಜಾತಿ-ಜನಾಂಗಗಳು ಮೂಲಭೂತ ಅವಶ್ಯಕತೆಗಳಿಗೆ ಮತ್ತು ಸ್ವರಕ್ಷಣೆಗಾಗಿಯೂ ಕೂಡ ಯುದ್ಧದ ಅನಿವಾರ್ಯತೆಯಿದೆ. ಆದರೆ ಅದರ ಪ್ರಕಾರಗಳು ಬೇರೆ-ಬೇರೆಯಾಗಿವೆ. ಧರ್ಮಯುದ್ಧ, ಕುಟಿಲಯುದ್ಧಗಳೆಂಬ ಹಲವಾರು ಪ್ರಕಾರಗಳು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದು ಸರ್ವಕಾಲಕ್ಕೂ ಕೂಡ ಇವು ಬಳಕೆಯಲ್ಲಿವೆ.

ಯುದ್ಧವು ತನ್ನದೇ ಆದ ಚೌಕಟ್ಟನ್ನು ಪ್ರಾಚೀನ ಕಾಲದಿಂದಲೂ ಹೊಂದಿದೆ. ಅದಕ್ಕೆ ದೇಶ, ಭಾಷೆ, ಜಾತಿ-ಜನಾಂಗಗಳ ಹಂಗಿಲ್ಲ. ಯುದ್ಧದ ನೀತಿ ನಿಯಮಗಳು ಹಿಂದಿನ

ಕಾಲದಿಂದಲೂ ಕೂಡ ಪ್ರಚಲಿತದಲ್ಲಿವೆ. ಅಂದರೆ ಭಾರತದ ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳು; ಅಲ್ಲದೆ ಶೃತಿಗಳಾದ ವೇದಗಳಲ್ಲಿಯೂ ಕೂಡ ಯುದ್ಧನೀತಿಗಳ ಬಗ್ಗೆ ಮಾಹಿತಿಯನ್ನು ಕಾಣಬಹುದಾಗಿದೆ. ಯುದ್ಧದ ನೀತಿನಿಯಮಗಳು ಕಾಲ, ಭೂ ಪ್ರದೇಶ ಮತ್ತು ಅಗತ್ಯತೆಗಳಿಗೆ ತಕ್ಕಂತೆ ಬದಲಾಗುತ್ತಾ ಹೋದವು. ಯುದ್ಧದ ಸಮಯದಲ್ಲಿ ಯಾರು ಯಾರೊಂದಿಗೆ ಯುದ್ಧಮಾಡಬೇಕು. ಯಾರೊಂದಿಗೆ ಯುದ್ಧಮಾಡಬಾರದೆಂಬ ಅಂಶಗಳು ಸಹ ನಮಗೆ ಆಯಾಮ ಕಾಲಘಟ್ಟಗಳಲ್ಲಿ ರಚನೆಯಾದ ಕಾವ್ಯಗಳು ಮತ್ತು ಗ್ರಂಥಗಳು ತಿಳಿಸುತ್ತವೆ. ಯುದ್ಧ ಸಂದರ್ಭದಲ್ಲಿ ಯಾರನ್ನು ಕೊಲ್ಲಬೇಕು? ಯಾರನ್ನು ಕೊಲ್ಲಬಾರದು? ಎಂಬ ನಿಯಮಗಳನ್ನು ಎರಡೂ ಪಕ್ಷದವರು ಅನುಸರಿಸಬೇಕಿತ್ತು. ಪ್ರಾಚೀನ ಕಾಲದಲ್ಲಿ ಯುದ್ಧಗಳು ನಡೆಯುತ್ತಿದ್ದುದು ಎರಡೂ ಕಡೆಯ ರಾಜರು ಮತ್ತು ಅವರ ಸೈನ್ಯಗಳ ನಡುವೆಯೇ ಹೊರತು ಸಮಾಜದ ಜೊತೆಯಲ್ಲಿಲ್ಲ. ಅಂದರೆ ಇದು ಮಧ್ಯಯುಗ ಮತ್ತು ಆಧುನಿಕ ಕಾಲಘಟ್ಟಗಳಲ್ಲಿ ಅರಸರು ಮತ್ತು ಪ್ರಜೆಗಳ ನಡುವೆ ಯುದ್ಧಗಳು ನಡೆಯುತ್ತಾ ಹೋದವು. ಅಂದರೆ ಗಡಿಯುದ್ಧಗಳಲ್ಲಿ ಜನ ಸಾಮಾನ್ಯರು ಮತ್ತು ಅವರ ಆಸ್ತಿಪಾಸ್ತಿಗಳೇ ಹೆಚ್ಚು ಹಾನಿಯಾಗುತ್ತಿದ್ದವು.[೨] ಯುದ್ಧಗಳು ವೀರನಿಗೆ ಹಬ್ಬವಾದರೆ ಹೇಡಿಗಳಿಗೆ ಅದೊಂದು ಕ್ರೌರ್ಯ ಹಿಂಸೆಯೇ ಸರಿ. ಶೂರತ್ವದ ಪ್ರತೀಕವಾದ ಅಂದಿನ ಯುದ್ಧಗಳು ಎರಡೂ ಕಡೆಯಲ್ಲೂ ಸಮಾಸಮ ಬಲಗಳೊಂದಿಗೆ ನಡೆಯುತ್ತಿದ್ದವು. ಪ್ರಾಚೀನ ಕಾಲದ ಧರ್ಮಯುದ್ಧದ ಪ್ರಕಾರ ಕೆಲವು ಆಯುಧಗಳನ್ನು ಯುದ್ಧದಿಂದ ಬಹಿಷ್ಕರಿಸಲಾಗಿತ್ತು. ಅವುಗಳಲ್ಲಿ ವಿಷಪೂರಿತವಾದ ಬಾಣಗಳು ಮತ್ತು ಶೂಲಗಳಿರುತ್ತಿದ್ದವು.

ಧರ್ಮಶಾಸ್ತ್ರ, ಶುಕ್ರನೀತಿಸಾರ, ಮತ್ತಿತರ ಸಾಹಿತ್ಯ ಕೃತಿಗಳಿಂದ ರಣರಂಗದಲ್ಲಿ ಯುದ್ಧ ಮಾಡುತ್ತಿರುವಾಗ ಯೋಧರು ಹೇಗೆ ನಡೆದುಕೊಳ್ಳಬೇಕೆಂಬುದನ್ನು ತಿಳಿಸುತ್ತವೆ. ಇವುಗಳ ಪ್ರಕಾರ ಕೆಳಗಿನವರನ್ನು ಕೊಲ್ಲಬಾರದೆಂಬುದು ಯುದ್ಧದ ಆಯಮವಾಗಿತ್ತು. ವಿವಿಧ ಮೂಲಗಳಿಂದ ತಿಳಿದುಬರುವಂತೆ ವೀರರಲ್ಲದವರು, ಪಲಾಯನ ಪಠಿಸುವವರು, ಗಾಯಗೊಂಡವರು, ವಯಸ್ಸಾದ ವೃದ್ಧರು, ಮಕ್ಕಳು ರಣರಂಗದಲ್ಲಿ ಹುಲ್ಲು ಕಚ್ಚಿದವರು, ಕೆದರಿದ ತಲೆಯವರು, ಭೀತರು, ನೀರನ್ನು ಹೊಕ್ಕವರು, ಶಿವಲಿಂಗವನ್ನು ಅಪ್ಪಿದವರು, ಹುತ್ತವನ್ನು ಏರಿದವರು, ನಿರಾಯುಧರು, ಬರಿಮೈಯ್ಯಲ್ಲಿರುವವರು, ಬೆನ್ನು ತೋರಿಸುವವರು, ನಾನು ನಿಮ್ಮವನೆನ್ನುವವರು ನೀರು ಕುಡಿಯುವವರು, ಊಟ ಮಾಡುತ್ತಿರುವವರು, ನರ್ತಕರು, ಹಾಡುಗಾರರು, ಸಂಗೀತಗಾರರು, ಸನ್ಯಾಸಿಗಳು ಮತ್ತಿತರರು.[೩]

ಶತ್ರುಗಳಿಗೆ ಮಣ್ಣುಮುಕ್ಕಿಸುವುದು ಒಂದೆಡೆಯಾದರೆ, ಮತ್ತೊಂದೆಡೆಯಲ್ಲಿ ತಮ್ಮ ಆಶ್ರಯಬಯಸಿದವರಿಗೆ ರಕ್ಷಣೆಯನ್ನು ಒದಗಿಸುವುದು ಕೂಡ ಯುದ್ಧದ ನಿಯಮವಾಗಿತ್ತು. ಆದರೆ ವಿಜಯನಗರ ಸಾಮ್ರಾಜ್ಯದಲ್ಲಿ ಶತ್ರುಸಾಮ್ರಾಜ್ಯದ ಮೇಲೆ ದಂಡೆತ್ತಿ ಹೋದಾಗ ಯುದ್ಧದಲ್ಲಿ ಸೆರೆಸಿಕ್ಕವರನ್ನು ಗೌರವದಿಂದ ಕಾಣುವ ಕ್ರಮವು ಕೃಷ್ಣಕದೇವರಾಯನಿಂದ ತಿಳಿದುಬರುತ್ತದೆ.

ಅವನು ತನ್ನ ಅಮುಕ್ತಮಾಲ್ಯದ ಗ್ರಂಥದಲ್ಲಿ ಸೋತ ಶತ್ರುವಿನ ಅಂತಃಪುರ ಒಂದು ಪಕ್ಷ ನಿಮ್ಮ ವಶವಾದರೆ ಆಗ ನೀವು ಆ ಹೆಂಗಸರು ತಾವು ತಮ್ಮ ತಂದೆತಾಯಿಗಳ ರಕ್ಷಣೆಯಲ್ಲಿ ಇದ್ದೇವೆಂವ ಭಾವನೆಯನ್ನು ಉಂಟುಮಾಡಬೇಕು ಎಂದಿದ್ದಾನೆ.[೪] ಕೃಷ್ಣದೇವರಾಯನು ಸ್ವತಃ ಅದನ್ನು ಕಾರ್ಯಗತಗೊಳಿಸಿದ್ದನು. ಅವನು ಕೈಗೊಂಡ ಉದಯಗಿರಿ ದಂಡಯಾತ್ರೆಯಲ್ಲಿ ಸೆರೆಸಿಕ್ಕ ಒರಿಸ್ಸಾದ ಗಜಪತಿಯ ಚಿಕ್ಕಮ್ಮಗಳನ್ನು ಗೌರವಯುತವಾಗಿ ನೋಡಿಕೊಂಡನೆಂದು ನ್ಯೂನಿಜ್ ಹೇಳುತ್ತಾನೆ. ಕೊಂಡವೀಡನ್ನು ವಶಪಡಿಸಿಕೊಂಡಾಗಲೂ ಅನೇಕ ಉನ್ನತ ದರ್ಜೆಯ ಅಧಿಕಾರಿಗಳು ಮತ್ತು ರಾಜನ ಪತ್ನಿ-ಪುತ್ರರನ್ನು ವಿಜಯನಗರಕ್ಕೆ ಸಾಗಿಸಿ ಅನಂತರ ಕರಾರಿನ ಮೇಲೆ ಅವರನ್ನು ಬಿಡುಗಡೆ ಮಾಡಿದನೆಂಬುದೂ ನ್ಯೂನಿಜ್‌ನಿಂದ ವ್ಯಕ್ತವಾಗುತ್ತದೆ. ಹಾಗೆಯೇ ರಾಯಚೂರು ಯುದ್ಧದಲ್ಲಿ ಸೆರೆಸಿಕ್ಕ ವಿವರವನ್ನು ನೀಡುತ್ತಾ ಸಿಕ್ಕಿದ ಸಣ್ಣಪುಟ್ಟ ಕುದುರೆಗಳು ಎತ್ತು-ಕತ್ತೆಗಳು ಹೆಣ್ಣು-ಗಂಡುಗಳು, ಮಕ್ಕಳು ಮರಿಗಳು ಎಷ್ಟೋ, ಸೆರೆಸಿಕ್ಕ ಹೆಂಗಸರನ್ನು ಬಿಟ್ಟು ಬಿಡುವಂತೆ ರಾಜನು ಆಜ್ಞಾಪಿಸಿದನು ಎಂದಿದ್ದಾನೆ.[೫]

ಮಧ್ಯಯುಗದ ಅವಧಿಯಲ್ಲಿ ಯುದ್ಧಗಳು ನಡೆದ ಬಳಿಕ ಸೋತ ಸೇನೆಯು ಹಾಗೂ ರಾಜ್ಯದ ಆಸ್ತಿಪಾಸ್ತಿಗಳನ್ನು ಲೂಟಿಮಾಡುವುದು ಮತ್ತು ಹಿಂಸಾಕೃತ್ಯವನ್ನು ಎಸಗುವುದು ಸರ್ವೇಸಾಮಾನ್ಯವಾಗಿತ್ತು. ಪ್ರಾಚೀನಕಾಲದ ಯುದ್ಧನೀತಿಯಲ್ಲಿ ಹೇಳಲಾದ ಯುದ್ಧ ಸ್ಥಿತಿಯಲ್ಲಿಲ್ಲದ ವ್ಯಕ್ತಿಯನ್ನು ಕೊಲ್ಲಕೂಡದೆಂಬ ತತ್ವ ಬಹಳಷ್ಟು ಹಿಂದೆ ಸರಿದಿತ್ತು. ಇದನ್ನು ವಿಜಯನಗರ ಮತ್ತು ಬಹುಮನಿ ಸುಲ್ತಾನರೂ ಸಹ ಮುಂದುವರೆಸಿದರು. ವಿಜಯನಗರದ ಒಂದನೆಯ ಬುಕ್ಕರಾಯನು ಕೈಗೊಂಡ ಯುದ್ಧದಲ್ಲಿ ಬಹಮನಿಯವರಿಂದ ಮುದಗಲ್ ಕೋಟೆಯು ವಶವಾಗಲು ಅಲ್ಲಿಯ ಸೈನ್ಯವು ಪರಿವಾರ ಸಮೇತವಾಗಿ ಖಡ್ಗಕ್ಕೆ ಆಹುತಿಯಾಯಿತೆಂದು ಹೇಳಲಾಗಿದೆ. ಇದಕ್ಕೆ ಉತ್ತರವಾಗಿ ಎರಡನೆಯ ಮಹಮದ್ದನು ಕ್ರಿ.ಶ.೧೩೬೭ರಲ್ಲಿ ಒಂದು ಲಕ್ಷ ವಿಜಯನಗರದ ಜನಸಾಮಾನ್ಯರನ್ನು ಕೊಲೆ ಮಾಡಿದನೆಂದೂ ಪರಿಸ್ತಾನು ತಿಳಿಸುತ್ತಾನೆ.[೬] ಇನ್ನು ಮರಾಠರ ಶಿವಾಜಿಯ ಕಾಲದಲ್ಲಿನ ಯುದ್ಧನೀತಿಯು ಅತ್ಯಂತ ವ್ಯವಸ್ಥಿತವಾದ ಶಿಸ್ತನ್ನು ಹೊಂದಿತ್ತು. ಅದಕ್ಕೆ ಕಾರಣವೆಂದರೆ ಯುದ್ಧ ಸಂದರ್ಭದಲ್ಲಿ ಮರಾಠರ ಸೈನ್ಯದಲ್ಲಿ ಯಾವುದೇ ಸ್ತ್ರೀಯು ಸೈನ್ಯದಲ್ಲಿ ಚಾಕರಿಗಾಗಿ ಅಲ್ಲದೆ ವೇಶ್ಯೆಯಾಗಿಯೂ ಕೂಡ ಸೈನಿಕರೊಂದಿಗೆ ಹೊರಡುವಂತಿರಲಿಲ್ಲ. ಹಾಗೇನಾದರೂ ಒಂದು ವೇಳೆ ಸೈನಿಕರ ಜೊತೆ ಹೊರಟರೆ ಸೈನಿಕರ ತಲೆಯನ್ನು ಕಡಿಯಲಾಗುತ್ತಿತ್ತು. ಮಳೆಗಾಲದಲ್ಲಿ ಸೈನ್ಯವು ಸ್ವದೇಶಕ್ಕೆ ಮರಳಬೇಕು. ಅಲ್ಲಿ ಧಾನ್ಯಗಳು, ಮೇವು, ಔಷಧಿಗಳು, ವಸತಿಗಾಗಿ ಮನೆಗಳು ಕುದುರೆಗಳಿಗಾಗಿ ಹುಲ್ಲು ಹೊದಿಸಿದ ಲಾಯಗಳು ಸಿದ್ಧವಾಗಿರಬೇಕು. ದಸರಾ ಮುಗಿದ ಕೂಡಲೇ ಅವರು ಅಲ್ಲಿಂದ ಹೊರಡಲೇಬೇಕು. ಹೀಗೆ ಹೊರಡುವಾಗ ದೊಡ್ಡವರಿರಲಿ, ಚಿಕ್ಕವರಿರಲಿ ಪ್ರತಿಯೊಬ್ಬರ ವಸ್ತುಗಳನ್ನು ಶೋಧಿಸತಕ್ಕದ್ದು. ಆ ಮೇಲೆ ಅವರು ದಂಡಯಾತ್ರೆ ಹೊರಡತಕ್ಕದ್ದು ಎಂಟು ತಿಂಗಳುಗಳ ಕಾಲ ಸೈನ್ಯವು ಹೊರನಾಡುಗಳಲ್ಲಿ ಯುದ್ಧದಲ್ಲಿ

ಉಳಿದ ವಸ್ತುಗಳ ಆಧಾರದಿಂದ ಜೀವಿಸಬೇಕು. ಕಪ್ಪಕಾಣಿಕೆ ವಿಧಿಸಬಹುದು. ಸೈನ್ಯದಲ್ಲಿ ಹೆಂಗಸರು ಇರಕೂಡದು, ಚಾಕರಿಯಲ್ಲೂ ಸ್ತ್ರೀಯರು ಇರಕೂಡದು. ನರ್ತಕಿಯರೂ ಇರಬಾರದು ಶತ್ರುದೇಶಗಳಲ್ಲಿ ಹೆಂಗಸರು ಮತ್ತು ಮಕ್ಕಳನ್ನು ಸೆರೆಹಿಡಿಯಕೂಡದು. ಗಂಡಸರು, ಕಣ್ಣಿಗೆ ಬಿದ್ದರೆ, ಸೆರೆಹಿಡಿಯಬೇಕು. ಹಸುಗಳನ್ನು ಹಿಡಿಯಬಾರದು ಎತ್ತುಗಳನ್ನು ಸಾಮಾನು ಸರಂಜಾಮುಗಳನ್ನು ಸಾಗಿಸುವುದಕ್ಕಾಗಿ ಮಾತ್ರ ತೆಗೆದುಕೊಳ್ಳಬೇಕು.[೬] ಬ್ರಾಹ್ಮಣರನ್ನು ಹಿಂಸಿಸಕೂಡದು. ಕಪ್ಪವನ್ನು ವಿಧಿಸಿರುವ ಸ್ಥಳದಲ್ಲಿ ಬ್ರಾಹ್ಮಣನನ್ನು ಜಂಟಿ ಭರವಸೆಯಾಗಿ ತೆಗೆದುಕೊಳ್ಳಕೂಡದು. ಯಾರೂ ಆಹಾರವನ್ನು ಕಲಬೆರಕೆ ಮಾಡಕೂಡದು. ಎಂಟು ತಿಂಗಳುಗಳ ಕಾಲ ಅವರು ಹೀಗೆ ಹೊರನಾಡುಗಳಲ್ಲಿ ದಂಡಯಾತ್ರೆ ಮಾಡುತ್ತಿರಬೇಕು. ವೈಶಾಖ ಮಾಸ ಬರುತ್ತಿದ್ದಂತೆ ತಮ್ಮ ನೆಲಸು ತಾಣಗಳಿಗೆ ಹಿಂದಿರುಗುವಾಗ ನಾಡಗಡಿಗಳಲ್ಲಿ ಅವರ ಸಾಮಾಗ್ರಿಗಳನ್ನು ಶೋಧಿಸಬೇಕು. ಅವರ ಬಳಿಯಿದ್ದ ಪದಾರ್ಥಗಳ ಪಟ್ಟಿಯನ್ನು ಹೊರಗೆ ಹೋಗುವಾಗ ತಯಾರಿಸಿದ್ದನ್ನು ತೆಗೆದು ಈಗಿರುವ ಪದಾರ್ಥಗಳೊಂದಿಗೆ ತಾಳೆನೋಡಿ, ಏನು ಹೆಚ್ಚಾಗಿದೆಯೋ ಅದೆಲ್ಲದರ ಬೆಲೆಯನ್ನು ಅಂದಾಜು ಮಾಡಿ ಅವರ ವೇತನದಿಂದ ಮುರಿದುಕೊಳ್ಳಬೇಕು. ಹೆಚ್ಚು ಬೆಲೆಬಾಳುವಂಥದ್ದು ಏನಾದರೂ ಇದ್ದರೆ ಅದನ್ನು ಒಡನೆಯೇ ಅರಸನ ಬಂಡಾರಕ್ಕೆ ಕಳುಹಿಸಬೇಕು. ಯಾರಾದರೂ ರಹಸ್ಯವಾಗಿ ಉಳಿಸಿಕೊಂಡಿದ್ದೇ ಆದರೆ, ಸರದಾರನಿಗೆ ಅದು ಗೊತ್ತಾದರೆ ತಕ್ಷಣವೇ ಸರದಾರನು ಅವನನ್ನು ಶಿಕ್ಷಿಸುತ್ತಿದ್ದನು. ಸೈನ್ಯವು ಶಿಬಿರಕ್ಕೆ ಹಿಂದಿರುಗಿದರೆ ಮೇಲೆ ಲೆಕ್ಕಾಚಾರ ಮುಗಿಸಿ ಯಾದಿ ತಯಾರಿಸಬೇಕು. ಸರದಾರರೆಲ್ಲರೂ ಚಿನ್ನ, ರತ್ನಾಭರಣಗಳು ಬಟ್ಟೆ ಮುಂತಾದ ವಸ್ತುಸಾಮಾಗ್ರಿಗಳನ್ನು ತೆಗೆದುಕೊಂಡು ಮಹಾರಾಜನನ್ನು ಹೋಗಿ ನೋಡಬೇಕು. ಎಲ್ಲಾ ಲೆಕ್ಕಗಳನ್ನೂ ವಿವರಿಸಿ ಮಹಾರಾಜನಿಗೆ ಒಪ್ಪಿಸಬೇಕಿತ್ತು. ಏನಾದರೂ ಹೆಚ್ಚುವರಿ ಕಂಡುಬಂದರೆ ಅದರ ಬೆಲೆಯನ್ನು ನಗದಾಗಿ ಮಹಾರಾಜನಿಂದ ಕೇಳಬೇಕು. ಆ ಮೇಲೆ ಅವರು ಶಿಬಿರಗಳಿಗೆ ಹಿಂದಿರುಗಬೇಕು. ಹಿಂದಿನ ವಿಜಯ ಯಾತ್ರೆಯಲ್ಲಿ ತುಂಬಾ ಕಷ್ಟಪಟ್ಟು ದುಡಿದಿರುವವರಿಗೆ ಸರಂಜಾಮುಗಳನ್ನು ನೀಡಬೇಕು. ಯಾರಾದರೂ ಕಾನೂನು ಮುರಿದರೆ ಹೇಡಿಯಾಗಿ ವರ್ತಿಸಿದ್ದರೆ ಅವನ ಬಗ್ಗೆ ವಿಚಾರಣೆಯನ್ನು ನಡೆಸಿ ಸತ್ಯಾಂಶವನ್ನು ತಿಳಿದುಕೊಳ್ಳಬೇಕು. ನಾಲ್ಕು ತಿಂಗಳುಗಳ ಕಾಲ ಅವರು ಪಾಳೆಯದಲ್ಲಿದ್ದು ದಸರಾ ದಿನದಂದು ರಾಜನ ಸಭೆಯಲ್ಲಿ ಭಾಗವಹಿಸಬೇಕು. ಆಮೇಲೆ ಅವರು ರಾಜನಿಂದ ಆಯ್ಕೆಯಾಗಿ ಮತ್ತೊಂದು ದಂಡಯಾತ್ರೆಗೆ ಹೊರಡಬೇಕು. ರಾಜನ ಆಜ್ಞಾನುಸಾರ ಸೈನ್ಯದ ಕಟ್ಟಳೆಗಳು ರೂಪುಗೊಂಡಿದ್ದವು.[೭]

ಮೈಸೂರು ಒಡೆಯರು ತಮ್ಮ ಪ್ರಾರಂಭದ ಆಳ್ವಿಕೆಯ ಕಾಲಾವಧಿಯಲ್ಲಿ ವಿಜಯನಗರ ಮಾದರಿಯ ಯುದ್ಧನೀತಿಗಳನ್ನೇ ಅನುಸರಿಸುತ್ತಿದ್ದರು. ಏಕೆಂದರೆ ಮೈಸೂರು ಒಡೆಯರು ವಿಜಯನಗರ ಸಾಮ್ರಾಜ್ಯದ ಸಾಮಂತ ಅರಸರಾಗಿದ್ದರು. ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಮೈಸೂರಿನ ಭೌಗೋಳಿಕ ಪರಿಸರ ಮತ್ತು ಬದಲಾದ ಕಾಲಮಾನ ಹಾಗೂ

ಆಯುಧೋಪಕರಣಗಳಲ್ಲಿ ಉಂಟಾದ ಬದಲಾವಣೆಗಳು ಸಹ ಮೈಸೂರು ಅರಸರ ಯುದ್ಧನೀತಿಗಳನ್ನು ಬದಲಾಯಿಸಿದವು. ವಿಜಯನಗರದ ಅರಸರಂತೆ ಇಲ್ಲಿಯೂ ರಾಜನೇ ಪ್ರಧಾನ ದಂಡಾಧಿಕಾರಿಯಾಗಿದ್ದನು. ಆದರೆ ದಳವಾಯಿಯು ಮಂತ್ರಿಮಂಡಲ ಮತ್ತು ಸೈನ್ಯದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದನು. ಕ್ರಿ.ಶ.೧೫೭೮ರಲ್ಲಿ ರಾಜಒಡೆಯರು ಮೈಸೂರಿನ ಸಿಂಹಾಸನವನ್ನು ಅಲಂಕರಿಸುವ ಮುಂಚೆ ನಮಗೆ ಸೈನ್ಯ, ಯುದ್ಧ ಮತ್ತು ಯುದ್ಧನೀತಿಗಳನ್ನು ಕುರಿತು ಯಾವುದೇ ಮಾಹಿತಿಗಳು ತಿಳಿದುಬರುವುದಿಲ್ಲ. ತಮ್ಮ ಸುತ್ತಮುತ್ತಲಿನ ಪ್ರದೇಶಗಳನ್ನು ವಶಪಡಿಸಿಕೊಂಡು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರು. ಶ್ರೀರಂಗಪಟ್ಟಣದಲ್ಲಿ ಆಳ್ವಿಕೆ ಮಾಡುತ್ತಿದ್ದ ವಿಜಯನಗರದ ಅರಸರನ್ನು ಕೊನೆಯ ಅರಸರನ್ನು ಅವರ ಕೊನೆಗಾಲದಲ್ಲಿ ಸಿಂಹಾಸನದಿಂದ ಕೆಳಗಿಳಿಸಿ ತಾವೇ ಮೈಸೂರಿನ ಸ್ವತಂತ್ರ ಅರಸರೆಂದು ಘೋಷಿಸಿಕೊಂಡರು. ಇದರ ತರುವಾಯವೇ ಮೈಸೂರಿನ ಇತಿಹಾಸದಲ್ಲಿ ಒಡೆಯರ ಯುದ್ಧನೀತಿಗಳನ್ನು ತಿಳಿಯಲು ಮಾಹಿತಿಗಳು ದೊರೆಯುತ್ತವೆ.

ರಣಧೀರ ಕಂಠೀರವ ನರಸರಾಜ ಒಡೆಯರು ಕ್ರಿ.ಶ.೧೬೩೮ರಲ್ಲಿ ಅಧಿಕಾರಕ್ಕೆ ಬಂದಾಗ ಮೈಸೂರಿನ ರಾಜಕೀಯ ಪರಿಸ್ಥಿತಿಯು ತುಂಬಾ ಹದಗೆಟ್ಟಿತು. ಸುತ್ತಮುತ್ತಲಿನ ಪಾಳೆಯಗಾರರು ಮೈಸೂರನ್ನು ಗೆದ್ದುಕೊಳ್ಳಲು ಹವಣಿಸುತ್ತಿದ್ದರು. ಆದರೆ ಅದೇ ಕಾಲಕ್ಕೆ ಬಸವಾಪಟ್ಟಣದ ಹನುಮಪ್ಪ ನಾಯಕನು ಕೆಳದಿಯ ಅರಸನೊಂದಿಗಿನ ದ್ವೇಷದಿಂದ ಬಿಜಾಪುರದ ಸುಲ್ತಾನನಾದ ಎರಡನೆಯ ಮಹಮದ್ ಆದಿಲ್‌ಷಾನ ಸಹಾಯವನ್ನು ಕೋರಿ, ಬಿಜಾಪುರದ ಸೈನ್ಯವು ದಕ್ಷಿಣ ಕರ್ನಾಟಕದ ಮೇಲೆ ದಾಳಿ ಮಾಡುವಂತೆ ಆಹ್ವಾನವನ್ನು ನೀಡಿದನು.[೮] ಈ ಆಹ್ವಾನವೇ ಅಂದಿನ ರಾಜಕೀಯ ಪರಿಸ್ಥಿತಿಯನ್ನು ಬುಡಮೇಲು ಮಾಡಿತು.

ರಣದುಲ್ಲಾಖಾನನು ಶ್ರೀರಂಗಪಟ್ಟಣದ ಮೇಲೆ ದಾಳಿ ಮಾಡಿದಾಗ ಬಿಜಾಪುರದ ದಂಡನಾಯಕನು ಒಪ್ಪಂದವನ್ನು ಮಾಡಿಕೊಳ್ಳಲು ಮುಂದಾದಾಗ ಕಂಠೀರವ ನರಸರಾಜ ಒಡೆಯರು ಅದನ್ನು ತಿರಸ್ಕರಿಸಿ ಅವರನ್ನು ಯುದ್ಧಕ್ಕೆ ಆಹ್ವಾನಿಸಿದರು. ಮೈಸೂರಿನ ಸೈನಿಕರು ಯುದ್ಧದಲ್ಲಿ ಬಿಲ್ಲು, ಬಾಣ, ಖಡ್ಗ, ಭಲ್ಲೆ, ಕಠಾರಿಗಳಂತಹ ಸಾಂಪ್ರದಾಯಿಕ ಆಯುಧಗಳಿಂದ ಶತ್ರುಸೈನ್ಯದ ಮೇಲೆ ದಾಳಿ ಮಾಡಿದರು. ಕೋಟೆಯ ಮೇಲಿನಿಂದ ಮೈಸೂರಿನ ಸೈನಿಕರು ಬಿಸಿಯಾದ ಮರಳು, ಕಾದಎಣ್ಣೆ, ಅಂಬಲಿ, ಕಲ್ಲುಗುಂಡುಗಳು[೯] ಮೊದಲಾದ ವಸ್ತುಗಳನ್ನು ಬಳಸಿದ್ದರೆಂದು ಗೋವಿಂದ ವೈದ್ಯನು ತನ್ನ ಕಂಠೀರವ ನರಸರಾಜ ವಿಜಯಂ ಕಾವ್ಯದಲ್ಲಿ ತಿಳಿಸಿದ್ದಾನೆ. ಇದೇ ಮಾದರಿಯ ಯುದ್ಧನೀತಿಯನ್ನು ಹೈದರ್ ಅಲಿಯು ನಿಜಗಲ್ಲು ಕೋಟೆಗೆ ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಬಳಕೆಯಾಯಿತು. ಆದರೆ ಹೈದರನು ಈ ಕಾಳಗದಲ್ಲಿ ಉಡಗಳನ್ನು ಬಳಸಿಕೊಂಡು ನಿಜಗಲ್ಲುಬೆಟ್ಟದ ಕಡಿದಾದ ಭಾಗದಿಂದ ಕೋಟೆಯನ್ನು ಲಗ್ಗೆಯೇರಿ ನಿಜಗಲ್ಲುದುರ್ಗವನ್ನು ವಶಪಡಿಸಿಕೊಂಡನು.

ಕಂಠೀರವ ನರಸರಾಜ ಒಡೆಯರು ತಮ್ಮ ಸೈನಿಕರಿಗೆ ಶತ್ರುಗಳ ಕಿವಿ, ಮೂಗುಗಳನ್ನು ಕತ್ತರಿಸುವಂತೆ ಆಜ್ಞೆಮಾಡಿದರು. ಮೈಸೂರಿನ ಸೈನಿಕರು ಅರಕೆರೆ, ಹೊಳಲು, ಮೇಲುಕೋಟೆ,

ಚಾಮುಂಡಿಬೆಟ್ಟ, ಚೆನ್ನಪಟ್ಟಣ, ಮದ್ದೂರು, ನಾಗಮಂಗಲ, ಚನ್ನರಾಯಪಟ್ಟಣ, ಕಿಕ್ಕೇರಿ, ಬೂಕನಕೆರೆ ಮೊದಲಾದ ಪಟ್ಟಣಗಳಲ್ಲಿ ಬೀಡುಬಿಟ್ಟಿದ್ದ ತುರುಕರ ಸೈನ್ಯವನ್ನು ಬೆನ್ನಟ್ಟಿ ಸಟ್ಟುಗ, ಚೂರು, ಚಾಕುಗಳಿಂದ ಶತ್ರುಗಳ ಮೂಗುಗಳನ್ನು ಅರಿದರು.[೧೦] ಎರಡನೆಯ ಬಾರಿ ಬಿಜಾಪುರದ ಸೈನ್ಯವು ಹಲವಾರು ಸೈನ್ಯದ ಸರದಾರರನ್ನು ಯುದ್ದಕ್ಕೆ ಕರೆತಂದು ಯುದ್ಧಕ್ಕೆ ನಿಂತಾಗ ಮೈಸೂರಿನ ಸೈನಿಕರು ಯುದ್ಧ ಮಾಡಿದರು. ಶತ್ರುಗಳಿಗೆ ವಿಶ್ರಾಂತಿಯನ್ನು ಪಡೆಯಲು ಅವಕಾಶವನ್ನು ನೀಡಲಿಲ್ಲ. ಶತ್ರು ಸೈನಿಕರು ಯುದ್ಧರಂಗದಲ್ಲಾದ ಗಾಯಗಳ ನೋವನ್ನು ಮರೆಯಲು ಸುರೆಯನ್ನು ಸೇವಿಸಿ ಮೈಮರೆತು ವಿಶ್ರಮಿಸುವಾಗ ಮತ್ತು ರಾತ್ರಿಯ ವೇಳೆಯಲ್ಲಿ ನಿದ್ರೆಮಾಡಲೂ ಬಿಡದಂತೆ ಅನಿರೀಕ್ಷಿತ ದಾಳಿಗಳನ್ನು ಮಾಡಿದರು.

ಕಂಠೀರವ ನರಸರಾಜ ಒಡೆಯರ ಕಾಲದ ದಳವಾಯಿಯಾಗಿದ್ದ ನಂಜರಾಜಯ್ಯನು ಪಿರಿಯಾಪಟ್ಟಣದ ವೀರರಾಜಯ್ಯನ ಮೇಲೆ ದಾಳಿಮಾಡಲು ಕಾರಣ ವೀರರಾಜಯ್ಯನ ನೀವು ಗಂಡಸರಾಗಿದ್ದರೆ ಯುದ್ದಕ್ಕೆ ಬನ್ನಿ ಎಂಬ ಸವಾಲು. ಇಲ್ಲವಾದರೆ ಈ ಬಳೆ ಮತ್ತು ಸೀರೆಯನ್ನು ತೊಟ್ಟುಕೊಂಡು ಮನೆಯಲ್ಲಿರಿ ಎಂಬಂತಹ ಮಾತುಗಳೇ ಮೈಸೂರು ಪಿರಿಯಾಪಟ್ಟಣದ ಮೇಲೆ ದಾಳಿಮಾಡಲು ಕಾರಣವಾಯಿತು. ಈ ಯುದ್ಧದಲ್ಲಿ ಸೋತುಹೋಗುತ್ತೇನೆಂಬ ಭಯದಿಂದ ವೀರರಾಜಯ್ಯನು ತನ್ನ ಏಳುಜನ ಹೆಂಡತಿಯರನ್ನು ಹಾಗೂ ಏಳು ತಿಂಗಳುಗಳ ಹಸುಗೂಸನ್ನು ಕೊಲೆಮಾಡಿ ಯುದ್ಧಕ್ಕೆ ಹೋದನು. ಮೈಸೂರು ಮತ್ತು ಪಿರಿಯಪಟ್ಟಣದ ಸೈನ್ಯಗಳಲ್ಲಿ ಫಿರಂಗಿಗಳನ್ನು ಬಳಸಿ ಯುದ್ಧಮಾಡಿದರು. ವೀರರಾಜಯ್ಯನನ್ನು ಯುದ್ಧದಲ್ಲಿ ಸೋಲಿಸಿ ಪಿರಿಯಾಪಟ್ಟಣದ ಕೋಟೆಯನ್ನು ವಶಮಾಡಿಕೊಂಡ ದಳವಾಯಿಯು ಕೋಟೆಗೋಡೆಯನ್ನು ಕೆಡುವಿ ಹರಳನ್ನು ಭಿತ್ತಿಸಿದನು.

ಕೆಳದಿಯ ಶಿವಪ್ಪ ನಾಯಕನು ಮೈಸೂರಿನ ಮೇಲೆ ಹಲವಾರು ಬಾರಿ ದಾಳಿ ಮಾಡಿದರೂ ಒಮ್ಮೆ ಶಿವಪ್ಪ ನಾಯಕನು ಮತ್ತೆ ಕೆಲವೊಮ್ಮೆ ಮೈಸೂರಿನವರು ಸೋಲುತ್ತಿದ್ದರು. ಆದರೆ ಚಿಕ್ಕದೇವರಾಜ ಒಡೆಯರಿಂದ ಶಿವಪ್ಪನಾಯಕನು ಒಪ್ಪಂದದ ಮೂಲಕ ವಸ್ತಾರೆಯನ್ನು ಮರಳಿ ಪಡೆದನು. ಐಗೂರಿನ ಕೃಷ್ಣಪ್ಪ ನಾಯಕನು ಸಹ ಇದೇ ಮಾದರಿಯಲ್ಲಿ ಒಪ್ಪಂದವನ್ನು ಮಾಡಿಕೊಂಡು ಐಗೂರು ಮತ್ತು ಸಕಲೇಶಪುರಗಳನ್ನು ಪಡೆದುಕೊಂಡನು. ಆದರೆ ಚಿಕ್ಕದೇವರಾಜ ಒಡೆಯರು ಮೊಘಲರ ಔರಂಗಜೇಬನ ಸೈನ್ಯವು ಖಾಸಿಂಖಾನನ ನೇತೃತ್ವದಲ್ಲಿ ಕ್ರೂರವಾದ ದಾಳಿಗಳನ್ನು ಮಾಡುವುದೆಂಬ ಭಯದಿಂದ ಅವರೊಂದಿಗೆ ಯುದ್ಧ ಮಾಡದೆ ಒಪ್ಪಂದವನ್ನು ಮಾಡಿಕೊಂಡರು. ಕರಣಿಕ ಲಿಂಗಣ್ಣನು ಈ ಒಪ್ಪಂದಕ್ಕೆ ಕಪ್ಪಕಾಣಿಕೆಗಳೊಂದಿಗೆ ದೆಹಲಿಗೆ ಹೋದನು. ಚಿಕ್ಕದೇವರಾಜ ಒಡೆಯರ ಈ ಒಪ್ಪಂದದಿಂದ ಔರಂಗಜೇಬನು 'ರಾಜಾ ಜಗದೇವ' ಎಂಬ ಬಿರುದನ್ನು ನೀಡಿದನು.

ಮರಾಠರು ಶಾಹುವಿನ ಜಯಾಜಿಘಾಟ್ ಮತ್ತು ನಿಂಬಾಜಿಘಾಟ್ ಎಂಬ ಸರದಾರರ ನೇತೃತ್ವದಲ್ಲಿ ಅರವತ್ತು ಸಾವಿರ ಸೈನ್ಯದೊಂದಿಗೆ ಮೈಸೂರಿನ ಮೇಲೆ ಆಕಸ್ಮಿಕ ದಾಳಿಗಳನ್ನು

ಮಾಡಿದರು. ಆದರೆ ಚಿಕ್ಕದೇವರಾಜ ಒಡೆಯರು ದಳವಾಯಿ ದೊಡ್ಡಯ್ಯನ ನೇತೃತ್ವದಲ್ಲಿ ಸೈನ್ಯದಲ್ಲಿದ್ದ ಮೂರುಸಾವಿರ ಆವಿನ ದನಗಳ ಕೊಂಬಿಗೆ ಪಂಜಿಗಳನ್ನು ಕಟ್ಟಿಸಿ, ಅವುಗಳನ್ನು ಶತ್ರುಸೈನ್ಯದ ಮೇಲೆ ಮೂರು ದಿಕ್ಕುಗಳಿಂದಲೂ ದಾಳಿಮಾಡಿಸಿದರು. ಪಂಜುಗಳ ಅಗಾಧವಾದ ಬೆಳಕಿಗೆ ದಿಕ್ಕು ಕಾಣದೆ ಭ್ರಾಂತರಾಗಿ ಯುದ್ಧ ಮಾಡದೆ ಹಿಮ್ಮೆಟ್ಟಿದಾಗ ದೊಡ್ಡಯ್ಯನು ಸೈನ್ಯದ ಸಹಾಯದಿಂದ ಶತ್ರುಗಳ ಮೇಲೆ ಬಿದ್ದನು. ಶತ್ರುಗಳು ಭಯಭೀತರಾಗಿ ಹಿಮ್ಮೆಟ್ಟಿ ಓಡಿಹೋಗುವ ಸಂದರ್ಭದಲ್ಲಿ ಶತ್ರುಗಳನ್ನು ಬೆನ್ನಟ್ಟಿ ಕಿವಿಮೂಗುಗಳನ್ನು ಕತ್ತರಿಸಲಾಯಿತು. ಇದು ಚಿಕ್ಕದೇವರಾಜ ಒಡೆಯರ ಯುದ್ಧನೀತಿಯಾಗಿತ್ತು.

ಕ್ರಿ.ಶ. ೧೭೨೪ರಲ್ಲಿ ಮರಾಠರ ಸರದಾರ ಶಿದ್ಧೋಜಿ ಘೋರ್ಪಡೆ ಮತ್ತು ಆರ್ಕಾಟಿನ ನವಾಬನಾದ ಸಾದುಲ್ಲಾಖಾನನ ಒಕ್ಕೂಟ ಸೈನ್ಯವು ಶ್ರೀರಂಗಪಟ್ಟಣದ ಮೇಲೆ ದಾಳಿಮಾಡಿದಾಗ ಮೈಸೂರಿನ ಸೈನ್ಯವು ಫಿರಂಗಿ ಮತ್ತು ಬಂದೂಕುಗಳಿಂದ ದಾಳಿಮಾಡಿತು. ಈ ಒಕ್ಕೂಟ ಸೋತು ಓಡಿಹೋಗುವ ಸಂದರ್ಭದಲ್ಲಿ ದೊಡ್ಡದೇವರಾಜ ಒಡೆಯರ ಆಜ್ಞೆಯಂತೆ ಮೈಸೂರು ಸೈನ್ಯವು ಶತ್ರುಗಳ ಒಕ್ಕೂಟ ಸೈನ್ಯವನ್ನು ಹಿಂಬಾಲಿಸಿ ಅವರಲ್ಲಿ ಕೆಲವರನ್ನು ಹಿಡಿದು ಕಿವಿ, ಮೂಗುಗಳನ್ನು ಕತ್ತರಿಸಿತು. ಅವರಲ್ಲಿ ಹತ್ತುಮಂದಿ ಪಠಾಣರು ಹೈದರನು ಉಳಿದುಕೊಂಡಿದ್ದ ಡೇರೆಯನ್ನು ಪತ್ತೆಹಚ್ಚಿ ಸುತ್ತುಗಟ್ಟಿದಾಗ ಉಪಾಯದಿಂದ ಪಾರಾದ ಹೈದರ್ ಅವರನ್ನು ತನ್ನ ಸೈನಿಕರಿಂದ ಸುತ್ತುವರೆದು ಅವರನ್ನು ಬಂಧಿಸಿ ಶ್ರೀರಂಗಪಟ್ಟಣಕ್ಕೆ ಬರುವ ಮಾರ್ಗದಲ್ಲಿ ಅವರ ಕೈಕಾಲುಗಳನ್ನು ಕತ್ತರಿಸಿ ಮರಳಿನಲ್ಲಿ ಹೂಳಿಸಿದನು.[೧೧] ಹೈದರನು ಬ್ರಿಟೀಷರೊಂದಿಗೆ ನಡೆದ ೨ ಆಂಗ್ಲೋ-ಮೈಸೂರು ಯುದ್ಧಗಳಿಗೆ ಫ್ರೆಂಚ್ ಮಾದರಿಯ ತರಭೇತಿಯನ್ನು ಕೊಡಿಸಿದನು. ಅದಕ್ಕೆ ಕಾರಣವೇನೆಂದರೆ ಫ್ರೆಂಚರು ಕೂಡ ಬ್ರಿಟೀಷರಂತಗೆ ಯೂರೋಪಿಯನ್ನರೇ ಆಗಿದ್ದರು. ಆದ್ದರಿಂದ ಮದ್ರಾಸನ್ನು ಹೈದರಾಲಿಯು ವಶಪಡಿಸಿಕೊಂಡಾಗ ಫ್ರೆಂಚರ ಸೈನ್ಯದ ಯುರೋಪಿಯನ್ ಯುದ್ಧನೀತಿಗಳು ತರಬೇತಿ ಮತ್ತು ಅವರ ಹೋರಾಟದ ಮನೋಭಾವಗಳಿಗೆ ಹೈದರನು ಮಾರುಹೋಗಿದ್ದನು. ಅಂತೆಯೇ ಬ್ರಿಟಿಷರ ವಿರುದ್ಧವಾಗಿ ನಡೆದ ಈ ಆಂಗ್ಲೋ-ಮೈಸೂರು ಯುದ್ಧಗಳಲ್ಲಿ ಫ್ರೆಂಚ್ ಸೇನಾಧಿಕಾರಿಗಳನ್ನೇ ಮುಂದಾಳತ್ವ ವಹಿಸಿಕೊಳ್ಳುವಂತೆ ಮಾಡಿದ್ದರಿಂದ ಬ್ರಿಟಿಷರ ಯುದ್ಧದ ಸ್ಥಿತಿಗತಿಗಳು ಹಾಗೂ ಅವರ ಆಕ್ರಮಣದ ಯೋಜನೆಗಳನ್ನು ಅರಿಯುವಲ್ಲಿ ಸಹಾಯಕವಾಯಿತು. ಬ್ರಿಟಿಷರು ಜಲಮಾರ್ಗದ ನೌಕಾದಳದಲ್ಲಿ ಹೆಚ್ಚು ಚಾಣಾಕ್ಷರಾಗಿದ್ದು ಅವರಿಗೆ ಸಾಗರಯಾನದ ಮೂಲಕ ಸುಲಭವಾಗಿ ಸೈನ್ಯ ಮತ್ತು ಸರಕುಗಳನ್ನು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವೇಗವಾಗಿ ಸಾಗಿಸಲು ಸಹಾಯಕವಾಗಿದ್ದರಿಂದ ನೌಕಾಬಲವನ್ನು ಹೆಚ್ಚುಬಳಸಿಕೊಳ್ಳುತ್ತಿದ್ದರು. ಹೈದರನು ಫ್ರೆಂಚರ ಅಳಿದುಳಿದ ಸೇನೆಯನ್ನು ಒಗ್ಗೂಡಿಸಿ ಅವರ ಮಾದರಿಯಲ್ಲೇ ಕೋಟೆಕೊತ್ತಲಗಳನ್ನು ನಿರ್ಮಾಣಮಾಡಿ ಹಾಳಾಗಿದ್ದ ಕೆಲವು ಕೋಟೆಕೊತ್ತಲಗಳನ್ನು ಜೀರ್ಣೋದ್ಧಾರ ಮಾಡಿಸಿದನು. ಇಮ್ಮಡಿ ಕೃಷ್ಣರಾಜ ಒಡೆಯರು ಹೈದರನಿಗೆ ಎಲ್ಲಾ ರೀತಿಯಿಂದಲೂ

ಸ್ವತಂತ್ರವನ್ನು ನೀಡಿದ್ದರಿಂದ ಹೈದರನು ನೌಕಾಬಲ, ಅಶ್ವದಳ ಮತ್ತು ಫಿರಂಗಿದಳಗಳನ್ನು ಹೊಸ ನಿಯಮಗಳಿಗೆ ಒಳಪಡುವಂತೆ ಮಾಡಿದನು. ಶ್ರೀರಂಗಪಟ್ಟಣದ ದರಿಯಾದೌಲತ್‌ನಲ್ಲಿರುವ ಪೊಲಿಲೂರು ಕದನದ ಚಿತ್ರಗಳಿಂದ ಹೈದರನು ರಾಕೆಟ್‌ಗಳನ್ನು ಮೊದಲ ಬಾರಿಗೆ ಪ್ರಯೋಗಿಸುವುದನ್ನು ಕಾರ್ಯಗತಗೊಳಿಸಿದನು ಎಂದು ತಿಳಿದುಬರುತ್ತದೆ. ಹೈದರನು ಇಂಗ್ಲಿಷರೊಂದಿಗೆ ಇಟ್ಟುಕೊಂಡಿದ್ದ ಸಂಬಂಧಗಳು ಜಟಿಲವೂ ಮತ್ತು ಗೊಂದಲಮಯವೂ ಆಗಿದ್ದವು. ಅಂದರೆ ಅದು ಎರಡು ಭಿನ್ನವಾದ ಮತಗಳ ಸಾಮರ್ಥ್ಯವಾಗಿದ್ದಿತು. ಆದರೆ ಅದು ಎರಡು ಭಿನ್ನಮತಗಳ ಸಂಘರ್ಷವಾಗಿದ್ದಿತು. ಇದರಲ್ಲಿ ಒಂದು ಭಾರತೀಯ ಮತ್ತೊಂದು ಯೂರೋಪಿಯನ್ ಬಣಗಳು ಮುಖ್ಯವಾಗಿದ್ದವು. ಒಂದು ದೇಸೀಯ ಕ್ಷೀಣಿಸಿದ ಶಕ್ತಿಗಳ ನಡುವಿನಿಂದ ಎದ್ದುಬಂದಂತಹ ಅವಶೇಷವಾದರೆ, ಮತ್ತೊಂದು ಸಮುದ್ರದಾಚೆಯಿಂದ ಬಂದ ಬಲವಾದ, ಸುಧಾರಿತ ಯುದ್ಧ ವಿಧಾನ, ರಾಜಕಾರಣ ಜಾಣತನದ ಒತಂತ್ರಗಾರಿಕೆಗಳಿದ್ದ, ಒಂದು ಸುಧಾರಿತ ಸಮಾಜದ ಮಧ್ಯದಿಂದ ಹರಿದುಬಂದದ್ದು ಇದರಿಂದ ಹೈದರನು ಇಂಗ್ಲೀಷರೊಂದಿಗೆ ವಿರಸಹೊಂದಲು ಇದ್ದ ಕಾರಣಗಳಲ್ಲಿ ಹಲವು ತೆರನಾದವು. ಅವುಗಳಲ್ಲಿ ಮುಖ್ಯವಾದವುಗಳಿವು; ಮೈಸೂರು ಸಂಪದ್ಭರಿತವಾದ ಆಯಕಟ್ಟಿನ ಸ್ಥಳ. ದಕ್ಷಿಣದಲ್ಲಿ ಮರಾಠರು ವಿಸ್ತರಿಸಿಕೊಳ್ಳುತ್ತಿದ್ದುದು; ಕರ್ನಾಟಿಕ ನವಾಬನ ದುರಾಸೆ, ಮೈಸೂರಿಗೂ ಮತ್ತು ಮದ್ರಾಸಿಗೂ ನಡುವೆಯಿಂದ್ದ ಗಡಿವಿವಾದಗಳು: ಹೈದರನು ಫ್ರೆಂಚರೊಂದಿಗೆ ಹೊಂದಿದ ಮಧುರವಾದ ಸಂಬಂಧಗಳು ಮತ್ತು ಅವನದೇ ವಿಶಿಷ್ಟ ಸಾಮರ್ಥ್ಯಗಳು ಮತ್ತು ಅವುಗಳು ಇತರರಿಂದ ಅವನನ್ನು ಬೇರೆಯೇ ಆಗುವಂತೆ ಮಾಡಿದ್ದವು. ಮೈಸೂರಿನ ಮೇಲೆ ಇಂಗ್ಲಿಷರು, ಮರಾಠರು ಮತ್ತು ಹೈದರಾಬಾದಿನ ನಿಜಾಮರು ಪ್ರಭುತ್ವವನ್ನು ಸಾಧಿಸಲು ಹಾತೊರೆಯುತ್ತಿದ್ದರು. ಅದರಲ್ಲೂ ವಿಶೇಷವಾಗಿ ಮರಾಠರು ಮೈಸೂರಿನ ಮೇಲೆ ಪದೇಪದೇ ಆಕ್ರಮಣಗಳನ್ನು ಮಾಡುತ್ತಿದ್ದರು. ಮರಾಠರ ದಾಳಿಗಳು ಷಾಹಜಿ ಮತ್ತು ಶಿವಾಜಿಯ ಕಾಲದಿಂದಲೂ ಜರ್ಜರಿತಗೊಳಿಸಿದ್ದವು. ಆದ್ದರಿಂದ ಕುಟಿಲತೆ ಮತ್ತು ಸಂಪತ್ತನ್ನು ದೋಚುವ ಇವರ ಯೋಜನೆಗಳಿಗೆ ಇಂಗ್ಲಿಷರ ಸೈನ್ಯದ ಪ್ರಭಾವದ ಬಗೆ ಇದ್ದ ಗ್ರಹಿಕೆಗಳು ಹಾಗೂ ಹೈದರನು ರಾಜಕಾರಣದ ತಂತ್ರಗಾರಿಕೆಯಲ್ಲಿನ ಕುಟಿಲತೆಗಳೇ ಅದಕ್ಕೆ ಪ್ರಮುಖ ಕಾರಣಗಳೆಂದು ಹೇಳಬಹುದು. ಅಲ್ಲದೆ ಹೈದರನ ಮಲಬಾರ್ ತೀರಪ್ರದೇಶಗಳಲ್ಲಿ ಬ್ರಿಟಿಷರ ಆಶ್ರಿತ ಸಂಸ್ಥಾನಗಳ ಮೇಲೆ ಪದೇಪದೇ ಮಾಡಿದ ದಾಳಿಗಳೇ ಬ್ರಿಟಿಷರು ಮತ್ತು ಹೈದರನ ನಡುವೆ ಯುದ್ಧಗಳಾಗಲು ಕಾರಣಗಳಾಗಿವೆ. ಇದರಿಂದ ಇಂಗ್ಲಿಷರ ವಸಾಹತು ನೆಲೆಗಳ ವಿಸ್ತರಣೆಗೆ ದಕ್ಕೆಯಾಯಿತು. ಫ್ರೆಂಚರೊಂದಿಗೆ ಹೈದರನು ಮೈತ್ರಿಯಿಂದ ವ್ಯವಹರಿಸುವ ಮೊದಲು ಸೇನಾತುಕಡಿಗಳು ಮಾಯವಾಗುವುದು, ದನಕರುಗಳನ್ನು ಅಪಹರಿಸುವುದು, ಗಡಿಪ್ರದೇಶಗಳ ಮೇಲಿನದಾಳಿ, ಪಾಳೆಯಗಾರರ ಕಿರುಕುಳ ಮೊದಲಾದ ಅಂಶಗಳನ್ನು ಹೈದರಾಬಾದಿನ ನವಾಬನು ಆಂಗ್ಲರಿಗೆ ಮನವರಿಕೆ ಮಾಡಿಕೊಡುವುದು ಮೊದಲಾದ

ಅಂಶಗಳಿಂದ ನವಾಬನು ಇಂಗ್ಲೀಷರನ್ನು ಹೈದರನ ಮೇಲೆ ಎತ್ತಿಕಟ್ಟುತ್ತಿದ್ದನು. ಅಲ್ಲದೆ ಫ್ರೆಂಚರೊಂದಿಗೆ ಹೈದರನು ಹೊಂದಿದ್ದ ಮಿತ್ರತ್ವದಿಂದ ಇಂಗ್ಲೀಷರು ಕೂಡ ಸ್ವಾಭಾವಿಕವಾಗಿಯೇ ಹೈದರನೊಂದಿಗೆ ವೈರತ್ವ ಬೆಳೆಸಲು ನೇರವಾದ ಕಾರಣವನ್ನು ಒದಗಿಸಿದವು. ಏಕೆಂದರೆ ಫ್ರೆಂಚರು ಮತ್ತು ಇಂಗ್ಲಿಷರು ಯೂರೋಪಿನಲ್ಲೂ ಕಡುವೈರಿಗಳಾಗಿದ್ದರು. ಅಂತೆಯೇ ಇದೇ ನೀತಿ ಮೈಸೂರಿನಲ್ಲಿಯೂ ಮುಂದುವರೆಯಿತು. ಫ್ರೆಂಚರ ಮಿತ್ರರು ಆಂಗ್ಲರಿಗೆ ಶತ್ರುಗಳು: ಆಂಗ್ಲರ ಮಿತ್ರರು ಫ್ರೆಂಚರಿಗೆ ಶತ್ರುಗಳಂತೆ ಕಂಡರು. ಆದರೆ ಈ ಅಂಶವು ಭಾರತೀಯರನ್ನು ರಾಜಕೀಯದಲ್ಲಿ ಒಡೆದುಆಳುವ ನೀತಿಯನ್ನು ಜಾರಿಗೆ ತರುವಂತೆ ಮಾಡಿತು.

ಹೈದರನು ಫ್ರೆಂಚರೊಂದಿಗೆ ಹೊಂದಿದ್ದ ಮೈತ್ರಿಗಳಿಂದ ಇಂಗ್ಲಿಷರು ವಿಮುಖರಾಗಿದ್ದರು. ಅದಕ್ಕೆ ಕಾರಣವೇನೆಂದರೆ ಹೈದರನು ಫ್ರೆಂಚರಿಂದ ಯುದ್ಧಸಾಮಗ್ರಿಗಳನ್ನು ತರಿಸಿಕೊಳ್ಳುತ್ತಿದ್ದನು. ಅಲ್ಲದೆ ಭಾರತೀಯ ಸಂಸ್ಥಾನ ಅಥವಾ ಪಾಳೆಯಪಟ್ಟುಗಳಲ್ಲಿ ಮೈಸೂರು ಸೈನ್ಯದಲ್ಲಿದಂತಹ ಫ್ರೆಂಚರ ಪಡೆಯು ಭಾರತದ ಇತರೆ ಯಾವ ಸಂಸ್ಥಾನಗಳಲ್ಲಿ ಸೈನ್ಯದಲ್ಲಿಯೂ ಇರಲಿಲ್ಲ.[೧೨] ಅಲ್ಲದೆ ಉನ್ನತ ಅಧಿಕಾರವು ಶೇಕಡಾ ೭೫%ರಷ್ಟು ಫ್ರೆಂಚ್ಅಧಿಕಾರಿಗಳ ಹಿಡಿತದಲ್ಲಿತ್ತು. ಬ್ರಿಟಿಷರ ವಸಾಹತುಶಾಹಿಯ ವಿರುದ್ಧ ಕ್ರಿ.ಶ.೧೭೫೪ರಲ್ಲೇ ಮೊದಲ ವಿಜಯಗಳಿಸಿದ್ದು ಬ್ರಿಟಿಷರಿಗೆ ನುಂಗಲಾರದ ತುತ್ತಾಯಿತು.

ಮೊದಲನೆ ಆಂಗ್ಲೋ-ಮೈಸೂರು ಯುದ್ಧದ ಸಂದರ್ಭದಲ್ಲಿ ಮರಾಠರು ಮತ್ತು ಹೈದರಾಬಾದಿನ ನಿಜಾಮನು ಮಾಡಿಕೊಂಡ ರಹಸ್ಯ ಒಪ್ಪಂದಗಳು ಹಾಗೂ ಹೈದರನು ಬಿದನೂರು ಮತ್ತು ಮಲಬಾರನ್ನು ಗೆದ್ದದ್ದು ಪರಸ್ಪರ ಅಪನಂಬಿಕೆಯಿಂದ ಕೂಡಿದ್ದವು. ರಾತ್ರಿಕಳೆದು ಬೆಳಗಾಗುವಷ್ಟರಲ್ಲಿ ಸ್ನೇಹಿತರು ಶತ್ರುಗಳಾದರು, ಶತ್ರುಗಳು ಮಿತ್ರರಾದರು. ಈ ಸಂದರ್ಭದಲ್ಲಿ, ನಡೆದ ಒಪ್ಪಂದಗಳು, ಕರಾರುಗಳು ಮೈತ್ರಿಗಳು ಕೇವಲ ಕಾಗದದಲ್ಲಿ ಬರೆದಿಟ್ಟ ಸರಕುಗಳಾದವು. ಅವುಗಳಿಗೆ ಯಾವುದೇ ಬೆಲೆಯಿಲ್ಲದಂತಾಯಿತು. ಎಚ್ಚರಿಕೆಯಿಂದ ಹಾಕಿಕೊಂಡ ಯೋಜನೆಗಳು ಅಥವಾ ಹುನ್ನಾರಗಳು ಪೂರ್ತಿಯಾಗಿ ದೋಷಯುಕ್ತವೆಂದು ಸಾಬೀತಾದವು. ಅಜೇಯರಾಗುಳಿದ್ದವರು ಹೀನಾಯವಾಗಿ ಸೋತು ಶಾಂತಿ ಒಪ್ಪಂದಗಳಿಗೆ ಸಹಿಹಾಕಬೇಕಾಯಿತು.[೧೩] ದಕ್ಷಿಣದ ಪ್ರಬಲ ಒಕ್ಕೂಟವಾದ ಮರಾಠರು, ಹೈದರಾಬಾದಿನ ನಿಜಾಮ ಮತ್ತು ಬ್ರಿಟಿಷರು ಹೈದರನ್ನು ಏಕಾಂಗಿಯಾಗಿಸಿ ದಿಕ್ಕುಗೆಡಿಸಿದರು. ಮೊದಲಿಗೆ ಹೈದರನ ಪರವಾಗಿದ್ದ ಮರಾಠರು ಮತ್ತು ಹೈದರಾಬಾದಿನ ನವಾಬರು ಕೊನೆಗೆ ಪಕ್ಷ ಬದಲಿಸುವಂತಹ ಕಾರ್ಯಗಳಿಗೆ ಮುಂದಾದರು. ಎರಡನೆಯ ಆಂಗ್ಲೋ-ಮೈಸೂರು ಯುದ್ಧದ ಸಂದರ್ಭಕ್ಕೆ ನೇರವಾದ ಕಾರಣವೆಂದರೆ ಈ ಹಿಂದೆ ಅಂದರೆ ಮೊದಲನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಬ್ರಿಟೀಷರು ಮತ್ತು ಹೈದರನ ಮಧ್ಯೆ ಆಗಿದ್ದಂತಹ ಮದ್ರಾಸ್ ಒಪ್ಪಂದದ ಉಲ್ಲಂಘನೆಯಾದದ್ದು. ಈ ಒಪ್ಪಂದವಾದ ಕೆಲವೇ ದಿನಗಳಲ್ಲಿ ಮರಾಠರು ಮೈಸೂರಿನ ಮೇಲೆ ದಾಳಿಮಾಡಿದರು. ಇದಕ್ಕೆ ಕಾರಣವೆಂದರೆ ಹೈದರನ ಪ್ರಚೋದಕನೀತಿ ಮತ್ತು ಮರಾಠರ ಮಾಧವರಾಯನ ದುರಾಸೆಗಳೇ ಪ್ರಮುಖವಾಗಿದ್ದವು.

ಹೈದರನು ಯುದ್ಧಗಳಲ್ಲಿ ಗಳಿಸಿದ ಪ್ರತಿಷ್ಠೆಯು ಮರಾಠರಲ್ಲಿ ಮಾತ್ಸರ್ಯವನ್ನು ಹುಟ್ಟುಹಾಕಿತು. ಕ್ರಿ.ಶ.೧೭೬೯ರಲ್ಲಿ ಮರಾಠರು ಮತ್ತು ಹೈದರಾಬಾದಿನ ನಿಜಾಮನ ನಡುವೆ ಒಂದು ಒಪ್ಪಂದವಾಯಿತು. ಈ ಒಪ್ಪಂದದ ಪ್ರಕಾರ ಈ ಒಕ್ಕೂಟ ಸೈನ್ಯವು ಮೈಸೂರಿನ ಮೇಲೆ ದಾಳಿಮಾಡಿದಾಗ ಬ್ರಿಟಿಷರು ಮದ್ರಾಸ್ ಒಪ್ಪಂದದ ಪ್ರಕಾರ ಹೈದರನ ಸಹಾಯಕ್ಕೆ ಬರಬೇಕಾಗಿತ್ತು. ಆದರೆ ಅವರು ಹಾಗೆ ಮಾಡದೆ ಅದರಿಂದ ಹಿಂದೆ ಸರಿದರು. ಅದಕ್ಕೆ ಕಾರಣವೆಂದರೆ ಅವರು ಮರಾಠರು ಮತ್ತು ನಿಜಾಮನೊಂದಿಗೆ ಉತ್ತಮವಾದ ಬಾಂಧವ್ಯವನ್ನು ಹೊಂದಿದ್ದರು. ಆದ್ದರಿಂದ ಬ್ರಿಟಿಷರ ಈ ನೀತಿಯು ಹೈದರನನ್ನು ಬ್ರಿಟಿಷರ ಮೇಲೆ ಯುದ್ಧಮಾಡಲು ಪ್ರೇರೇಪಿಸಿತು. ಆದರೆ ಈ ವೇಳೆಗಾಗಲೇ ಮರಾಠರು ಮೈಸೂರಿನ ಮೇಲೆ ಆಕ್ರಮಣ ಮಾಡಿದರು. ಆದರೆ ಬ್ರಿಟೀಷರು ಒಂದು ಸಣ್ಣ ತುಕಡಿಯನ್ನು ಕಳುಹಿಸಿದ್ದರೂ ಕೂಡ ಮರಾಠರನ್ನು ಹಿಂದಕ್ಕೆ ಅಟ್ಟಬಹುದಾಗಿತ್ತು.[೧೪] ಆದರೆ ಬಿಟಿಷರು ಯಾವುದೇ ಸಹಾಯವನ್ನು ನೀಡದೆ ಹಿಂದೆಸರಿದರು. ಇದರಿಂದ ಸಹಜವಾಗಿಯೇ ಹೈದರನು ಬ್ರಿಟಿಷರ ವಿರುದ್ಧವಾಗಿ ದ್ವೇಷ ಭಾವನೆಯನ್ನು ಹೊಂದುವಂತಾಯಿತು. ಒಟ್ಟಾರೆಯಾಗಿ ಹೈದರನ ಕಾಲದಲ್ಲಿ ನಡೆದ ಈ ಎರಡು ಯುದ್ಧಗಳಲ್ಲಿ ಪರಸ್ಪರ ದ್ವೇಷ, ಅಸೂಯೆ, ಅಸಮಧಾನಗಳು ಭುಗಿಲೆದ್ದವು.

ಟಿಪ್ಪುವು ಹೈದರನ ಕಾಲದಲ್ಲೇ ಮೈಸೂರು ರಾಜ್ಯದ ರಾಜ್ಯಪಾಲನಾಗಿ ಕಾರ್ಯನಿರ್ವಹಿಸಿ ಅನುಭವವನ್ನು ಪಡೆದಿದ್ದನು. ಇವನು ತನ್ನ ಆಡಳಿತಾವಧಿಯಲ್ಲಿ ಮೂರು ಮತ್ತು ನಾಲ್ಕನೇ ಆಂಗ್ಲೋ-ಮೈಸೂರು ಯುದ್ಧಗಳನ್ನು ಮುಂದುವರೆಸಿದನು. ಟಿಪ್ಪು ಕರಾವಳಿಯಲ್ಲಿ ಮೂರನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಹೋರಾಡಬೇಕಾದರೆ ಬ್ರಿಟಿಷರ್ ಅಧಿಕಾರಿಯಾದ ಜನರಲ್ 'ಮ್ಯಾಥ್ಯೂಸ್‌ನು ಟಿಪ್ಪುವಿನ ಗಮನವನ್ನು ಕರ್ನಾಟಕದಿಂದ ಬೇರೆಡೆಗೆ ಸೆಳೆಯಲು ಪ್ರಯತ್ನಿಸಿದನು. ಅದರಲ್ಲೂ ಪ್ರಮುಖವಾಗಿ ಮುಂಬಯಿ ಸೇನೆಯು ಪಶ್ಚಿಮ ಕರಾವಳಿಯಲ್ಲಿ ಅತ್ಯಂತ ಚುರುಕ್ಕಾಗಿ ಕಾರ್ಯೋನ್ಮುಖವಾಯಿತು. ಆದರೆ ಮುಂಬಯಿ ಸರ್ಕಾರವು ವಶಪಡಿಸಿಕೊಂಡಿದ್ದ ಪ್ರದೇಶವಾದ ಬಿದನೂರನ್ನು ಕ್ರಿ.ಶ.೧೭೮೩ರಲ್ಲಿ ಪುನಃ ವಶಪಡಿಸಿಕೊಂಡನು. ಇದು ಆಂಗ್ಲರಿಗೆ ಸಹಿಸಲಾರದ ಅಪಮಾನವಾಗಿತ್ತು. ಇದರಿಂದ ಟಿಪ್ಪುವಿನ ಸೈನ್ಯವನ್ನು ಸದಾಶಿವಗಢದಲ್ಲಿರಲು ಅವಕಾಶವನ್ನು ಒದಗಿಸಿತು. ಆದರೆ ಟಿಪ್ಪುವಿನ ಸೈನ್ಯವು ಆಂಗ್ಲರಿಗೆ ಆಹಾರವನ್ನು ಒದಗಿಸುವುದರ ಜೊತೆಗೆ ಗಾಯಾಳುಗಳಿಗೆ ವಾಹನದ ಸೌಕರ್ಯವನ್ನು ಒದಗಿಸುವಂತೆ ಒಪ್ಪಂದವನ್ನು ಮಾಡಿಕೊಳ್ಳಲಾಯಿತು. ಆಯುಧಗಳನ್ನು ಟಿಪ್ಪುವಿಗೆ ಒಪ್ಪಿಸುವಂತೆ ಷರತ್ತುಗಳನ್ನು ವಿಧಿಸಲಾಯಿತು. ಆದರೆ ಆಂಗ್ಲರು ಚಿನ್ನಾಭರಣ ಮತ್ತು ಹಣವನ್ನು ಕದ್ದೊಯ್ಯುವಂತೆ ಮಾಡಿದ ಪ್ರಯತ್ನವನ್ನು ಟಿಪ್ಪು ವಿರೋಧಿಸಿದ. ಅಲ್ಲದೆ ಅವರನ್ನು ಪರೀಕ್ಷೆಗೊಳಪಡಿಸಿ ೪೦,೦೦೦ ಪಗೋಡಗಳನ್ನು ವಶಮಾಡಿಕೊಂಡನು. ಬ್ರಿಟಿಷರು ಈ ವೇಳೆಗಾಗಲೇ ಸಾರ್ವಜನಿಕ ಉಗ್ರಾಣವನ್ನು ಲೂಟಿ ಮಾಡಿದ್ದರು. ಸರಕಾರಿ ದಾಖಲೆಪತ್ರಗಳನ್ನು ಸುಟ್ಟುಹಾಕಿದ್ದರು. ಸೆರೆಯಾಳುಗಳನ್ನು ಬಿಡುಗಡೆ ಮಾಡಲು ನಿರಾಕರಿಸಿದರು.

ಈ ವಿಶ್ವಾಸ ದ್ರೋಹದಿಂದ ಟಿಪ್ಪು ಅವರನ್ನು ಬಂಧಿಸಿ ಸೆರೆಯಲ್ಲಿಟ್ಟನು.[೧೫] ಟಿಪ್ಪುಸುಲ್ತಾನನ್ನು ಬಿದನೂರಿನಿಂದ ಮಂಗಳೂರಿನ ಕಡೆ ತನ್ನ ದಂಡಯಾತ್ರೆಗೆ ತನ್ನ ಸೈನ್ಯದೊಡನೆ ಮುಂದುವರೆದಾಗ ಕ್ರಿ.ಶ.೧೭೮೩ರಲ್ಲಿ ಮಂಗಳೂರಿನ ಕೋಟೆಗೆ ಮುತ್ತಿಗೆ ಹಾಕಿದನು. ಈ ಕೋಟೆಯು ಇನ್ನೇನು ಕೈವಶವಾಗುತ್ತದೆ ಎನ್ನುವ ವೇಳೆಗಾಗಲೇ ಬ್ರಿಟಿಷರ ವಿರುದ್ಧ ಟಿಪ್ಪುವಿಗೆ ಸಹಕರಿಸುತ್ತಿದ್ದ ಫ್ರೆಂಚರು ಯೂರೋಪಿನಲ್ಲಿ ಫ್ರೆಂಚರಿಗೂ ಮತ್ತು ಇಂಗ್ಲಿಷರಿಗೂ ಒಪ್ಪಂದವಾಗಿದೆ ಎಂಬ ನೆಪವೊಡ್ಡಿ ಟಿಪ್ಪುವನ್ನು ತೊರೆದು ಹೋದರು. ಈ ವೇಳೆಗಾಗಲೇ ಫ್ರೆಂಚರು ಬಹುಕಾಲ ಕಾಯಿಸಿ ಕೊನೆಗೆ ಬುಸ್ಸಿ ಎಂಬ ಫ್ರೆಂಚರ ಅಡ್ಮಿರಲ್ಸ್ ನೇತೃತ್ವದಲ್ಲಿ ೨೭ ಹಡಗುಗಳಲ್ಲಿ ೫,೦೦೦ ಯೋಧರ ಪಡೆಯನ್ನು ಭಾರತದ ತಿರುವಾಂಕೂರಿಗೆ ಕಳುಹಿಸಲಾಗಿತ್ತು. ಫ್ರೆಂಚ್ ಅಡ್ಮಿರಲ್ ಸಫ್ರೆಸ್ ಅತಿಸಮರ್ಥವಾಗಿದ್ದ ಅಡ್ಮಿರಲ್ ಆಗಿದ್ದನು. ಈತ ನೌಕಾಬಲದ ಸಹಾಯದಿಂದ ಬಂಗಾಳದಿಂದ ಸಮುದ್ರ ಮಾರ್ಗವಾಗಿ ಮದ್ರಾಸಿಗೆ ಬರುತ್ತಿದ್ದ ಎಲ್ಲ ಪೂರೈಕೆಗಳನ್ನು ಬ್ರಿಟೀಷರ ಕೈಸೇರದಂತೆ ತಡೆ ಹಿಡಿದಿದ್ದನು. ಈ ಸಂದಿಗ್ಧ ಪರಿಸ್ಥಿತಿಯು ಟಿಪ್ಪುವಿಗೆ ಬಹಳ ಅನುಕೂಲಕರವಾಗಿತ್ತು. ಆದರೆ ಈ ಹಂತದಲ್ಲಿ ಯುದ್ಧವು ಕೊನೆಯ ಘಟ್ಟವನ್ನು ತಲುಪಿದ್ದಿತು. ಹೀಗೆ ಫ್ರೆಂಚರ ಏಕಪಕ್ಷೀಯ ನಡೆಯಿಂದ ಟಿಪ್ಪುವಿಗೆ ಹಿನ್ನಡೆಯಾಯಿತು. ಆದ್ದರಿಂದ ಟಿಪ್ಪುಸುಲ್ತಾನನು ಬ್ರಿಟಿಷರ ಜನರಲ್ ಕ್ಯಾಂಪ್ ಬೆಲ್‌ನೊಂದಿಗೆ ಯುದ್ಧವಿರಾಮವನ್ನು ಒಪ್ಪಿಕೊಂಡನು. ಮುಂದೆ ಅದು ಮಂಗಳೂರು ಒಪ್ಪಂದ ಎಂಬ ಹೆಸರಿನಿಂದ ಯುದ್ಧವನ್ನೇ ನಿಲ್ಲಿಸಲಾಯಿತು.[೧೬]

ಕ್ರಿ.ಶ.೧೭೮೩ರಲ್ಲಿ ಪುಲ್ಲರ್‌ಟನ್ ಕೋಯಮತ್ತೂರನ್ನು ಲೂಟಿ ಮಾಡಿ ಆಹಾರ ಸಾಮಾಗ್ರಿಗಳು, ಶಸ್ತ್ರಾಸ್ತ್ರಗಳು, ಮದ್ದುಗುಂಡುಗಳು ಮತ್ತು ನಗದನ್ನೂ ಹೊತ್ತೊಯ್ದು ಟಿಪ್ಪುವಿಗೆ ಗಮನಾರ್ಹವಾದ ಹಾನಿಯುಂಟು ಮಾಡಿದನು. ಕೋಟೆಗಳನ್ನು ಟಿಪ್ಪುವಿನ ಕಡೆಯ ಅಧಿಕಾರಿಗಳ ವಶಕ್ಕೆ ಕೊಡುವುದನ್ನು ಬಿಟ್ಟು ಟಿಪ್ಪುವಿನ ವಿರುದ್ಧ ಒಳಸಂಚು ಮಾಡಿದ ಆರೋಪವಿದ್ದ ಮೈಸೂರು ಮಹಾರಾಣಿಯ ಏಜೆಂಟರ ವಶಕ್ಕೆ ವಹಿಸಿಕೊಟ್ಟನು. ಇದರಿಂದ ಇಂಗ್ಲಿಷರು ಪದೇಪದೇ ಯುದ್ಧ ವಿರಾಮವನ್ನು ಉಲ್ಲಂಘಿಸಿದರು. ಅದಕ್ಕೆ ಕಾರಣಗಳೆಂದರೆ ಇಂಗ್ಲಿಷರ ಅನೇಕ ಕೋಟೆಗಳು ಟಿಪ್ಪುವಿನ ಬಳಿಯಿದ್ದು ಟಿಪ್ಪುವಿನ ಕೆಲವು ಕೋಟೆಗಳು ಆಂಗ್ಲರ ಬಳಿಯಿದ್ದುದೇ ಅಲ್ಲದೆ; ಅವುಗಳಲ್ಲಿ ಕೆಲವನ್ನು ಮರಳಿ ತನ್ನ ವಶಕ್ಕೆ ತೆಗೆದುಕೊಂಡಿದ್ದನು. ಇದರಿಂದ ಮದ್ರಾಸ್ ಸರ್ಕಾರವು ವಿಶ್ವಾಸ ದ್ರೋಹದಿಂದಾದರೂ ಅಷ್ಟನ್ನಾದರೂ ಉಳಿಸಿಕೊಳ್ಳಬೇಕೆಂಬ ಮಹದಾಸೆ. ಅಲ್ಲದೆ ಹಣ, ಆಹಾರ, ಯುದ್ಧ ಸಾಮಾಗ್ರಿಗಳನ್ನು ಪೂರೈಸುವಂತಹ ಸ್ಥಳಗಳು ಟಿಪ್ಪುವಿನ ವಶವಾಗಿದ್ದು ಕೂಡ ಒಂದು ಕಾರಣವಾಗಿತ್ತು. ಆದರೆ ಮೈಸೂರು ಮಹಾರಾಣಿಯು ಬ್ರಿಟಿಷ್ ಅಧಿಕಾರಿಯಾದ ಸಲ್ಲಿವಾನ್‌ನ ಬಳಿ ಕೊಯಮತ್ತೂರಿನ ಪತನದ ನಂತರ ಬ್ರಿಟಿಷರಿಗೆ ಮೂರುಲಕ್ಷ ಪಗೋಡಗಳನ್ನು ನೀಡುತ್ತೇನೆಂದು ಒಪ್ಪಿಕೊಂಡಿದ್ದಳು. ಈ ಮೂರು ಲಕ್ಷ ಪಗೋಡಗಳ ಹಣದಾಸೆಯಿಂದ ಬ್ರಿಟಿಷರು ಯುದ್ಧ ವಿರಾಮವನ್ನು ಮುರಿದರು. ಅಲ್ಲದೆ ಜನರಲ್ ಮೆಕ್ಲಿಯಾಡನೂ ಕೂಡ ವಿಶ್ವಾಸದ್ರೋಹವನ್ನು

ಎಸಗಿದನು. ಈತನ ಉದ್ದೇಶ ಮುಂಬಯಿ ಸರ್ಕಾರದ ವಶಕ್ಕೆ ಮಂಗಳೂರನ್ನು ಒಳಪಡಿಸಿಕೊಳ್ಳುವುದು. ಆದರೆ ಈ ಸಂದರ್ಭದಲ್ಲಿ ಯುದ್ಧ ವಿರಾಮವು ಜಾರಿಯಾಗಿದ್ದರಿಂದ ಜಲಮಾರ್ಗದಲ್ಲಿ ಆಹಾರ ಮತ್ತು ಯುದ್ಧ ಸಾಮಾಗ್ರಿಗಳ ಪೂರೈಕೆಯನ್ನು ಟಿಪ್ಪು ಸುಲ್ತಾನನು ನಿಷೇಧಿಸಿದ್ದನು. ಆದರೆ ನೆಲಮಾರ್ಗದಲ್ಲಿ ಮಾತ್ರ ಅವಕಾಶವನ್ನು ಒದಗಿಸಲಾಗಿತ್ತು. ಉಳಿದುಕೊಳ್ಳಲು ನಗರಗಳ ವ್ಯವಸ್ಥೆಯನ್ನೂ ಮಾಡಿದ್ದನು. ಆದರೆ ಇದನ್ನು ವಿರೋಧಿಸಿ ಮೆಕ್ಲಿಯಾಡನು ಎರಡು ಬಾರಿ ಆಹಾರ ಸಾಮಾಗ್ರಿಗಳನ್ನು ಸಮುದ್ರ ಮಾರ್ಗದ ಮೂಲಕ ಸಾಗಿಸುವ ಪ್ರಯತ್ನವನ್ನು ಮಾಡಿದನು. ಆದರೂ ಕೂಡ ಸಾಂಕ್ರಾಮಿಕ ರೋಗಗಳು ಬ್ರಿಟಿಷರ ಸೈನ್ಯವನ್ನು ಕಾಡಿದ್ದರಿಂದ ಮಂಗಳೂರು ಟಿಪ್ಪುವಿನ ವಶವಾಯಿತು.

ಈ ವೇಳೆಗಾಗಲೇ ಮಂಗಳೂರು ಒಪ್ಪಂದದ ನಂತರ ಮರಾಠರು ಅಸಮಾಧಾನವನ್ನು ಹೊರಹಾಕಲು ಪ್ರಯತ್ನಿಸಿದರು. ಇದರಿಂದ ಹೈದರಾಬಾದಿನ ನಿಜಾಮನು ಮರಾಠರ ಪಕ್ಷವನ್ನು ಸೇರಿದನು. ಇದಕ್ಕೆ ಕಾರಣ ಅವನು ತನ್ನ ಸಮಯ ಸಾಧಕತನವನ್ನು ಸಾಧಿಸಲು ಮುಂದಾಗಿದ್ದನು. ಆಧರೆ ಮರಾಠರು ಕ್ರಿ.ಶ.೧೭೮೦ರ ಸಾಲ್ಬಾಯ್ ಒಪ್ಪಂದದ ಪ್ರಕಾರ ನಮಗೆ ಯಾವುದೇ ಒಳಿತಾಗಲಿಲ್ಲ ಎಂಬ ಕೊರಗು ಕಾರಣವೆಂದು ಹೇಳಬಹುದು. ಮರಾಠರ ನಾನಾ ಪಡ್ನವೀಸನು ನಿಜಾಮನೊಂದಿಗೆ ಸೇರಿ ಮರಾಠರ ನೆಲೆಗಳನ್ನು ಮರುವಶಕ್ಕೆ ಪಡೆಯುವುದು ಹಾಗೂ ಸಿಂಧಿಯಾನು ಪ್ರವರ್ಧಮಾನಕ್ಕೆ ಬರುವುದನ್ನು ತಡೆಯುವುದು. ಅಲ್ಲದೆ ಟಿಪ್ಪುವಿನ ವಿರೋಧದ ಕಾರ್ಯಾಚರಣೆಯಲ್ಲಿ ತಾನು ಸಹಕರಿಸಲು ಬಿಜಾಪುರ ಮತ್ತು ಅಹಮದ್ ನಗರಗಳನ್ನು ಬಿಟ್ಟುಕೊಟ್ಟರೆ ಮಾತ್ರ ಎಂದು ನಿಜಾಮ ಮತ್ತು ಮರಾಠರ ನಡುವೆ ಒಪ್ಪಂದಗಳಾದವು. ನರಗುಂದದ ದೇಸಾಯಿಯ ಬಂಡಾಯವು ಮರಾಠರು ಮತ್ತು ನಿಜಾಮನನ್ನು ಮೈಸೂರಿನ ವಿರುದ್ಧವಾಗಿ ಯುದ್ಧಮಾಡುವಂತೆ ಪ್ರೇರೇಪಿಸಿದವು. ನರಗುಂದದ ದೇಸಾಯಿಯು ಮರಾಠರ ಒಕ್ಕೂಟದೊಂದಿಗೆ ಸೇರಿ ಮೈಸೂರಿನ ಮೇಲೆ ದಾಳಿ ಮಾಡಲು ಮುಂಬೈ ಸರ್ಕಾರದ ನೆರವನ್ನು ಕೋರಿದರು. ಆದರೆ ಬ್ರಿಟಿಷರು ಈ ನೀತಿಯನ್ನು ಒಪ್ಪದಿದ್ದರಿಂದ ದೇಸಾಯಿಯು ಜಮೀನ್ದಾರರನ್ನು ದಂಗೆಯೇಳುವಂತೆ ಪ್ರಚೋದಿಸಿದನು. ಅದರಲ್ಲಿ ಪುಂಗನೂರು, ಮದನಪಲ್ಲಿ, ಪಾಳೆಯಗಾರರು ಟಿಪ್ಪವಿಗೆ ನಿಷ್ಠೆತೋರಿಸದಂತೆ ಪತ್ರವ್ಯವಹಾರಗಳನ್ನು ನಡೆಸಿದರು. ನರಗುಂದದ ದೇಸಾಯಿ ಎರಡುವರ್ಷ ಕಪ್ಪವನ್ನು ಕೊಡದೆ ಸತಾಯಿಸಿದನು. ಇದನ್ನು ಪುಣೆ ಸರ್ಕಾರವೂ ಕೂಡ ಬೆಂಬಲಿಸಿತು. ಆದ್ದರಿಂದ ಬ್ರಿಟಿಷರು ಕೂಡ ದೇಸಾಯಿಯನ್ನು ಬೆಂಬಲಿಸಿದರು. ಇದರಿಂದ ಟಿಪ್ಪುವು ಬೇರೆಬೇರೆ ಎರಡು ಸೇನಾತುಕಡಿಗಳನ್ನು ಕಳುಹಿಸಿ ಶರಣಾಗುವಂತೆ ಹೇಳಿದರೂ ದೇಸಾಯಿಯು ಮರಾಠರ ಆಗಮನದ ನಿರೀಕ್ಷೆಯಿಂದ ಕಾದುಕುಳಿತನು. ಯಾವುದೇ ದುಡುಕಿನ ಕ್ರಮವನ್ನು ಕೈಗೊಳ್ಳದೆ ಟಿಪ್ಪುವಿನ ರಾಜಿಮಾಡಿಕೊಳ್ಳುವ ಸ್ಥಿತಿಯಲ್ಲಿದ್ದರೂ ಸಹ ನಾನಾ ಪಡ್ನವೀಸನ ಸೈನ್ಯವು ಟಿಪ್ಪುವಿನ ಸೈನ್ಯದ ಮೇಲೆ ಆಕ್ರಮಣ ಮಾಡಿತು. ಅಂದರೆ ಈ ಸಮಯದಲ್ಲಿ ಟಿಪ್ಪು

ಸುಲ್ತಾನನು ಶಾಂತಿಯನ್ನು ಬಯಸಿದರೆ, ಶತ್ರುಗಳು ಅವನ ಮೇಲೆ ಯುದ್ಧ ಮತ್ತು ಆಕ್ರಮಣಗಳನ್ನು ಬಯಸಿದರು. ಇದು ಟಿಪ್ಪುವಿಗೆ ಅತ್ಯಂತ ವಿಷಮವಾದ ಸಮಯವಾಗಿದ್ದಿತು. ಪರಶುರಾಮ ಬಾವು ಕೂಡ ಈ ಪಿತೂರಿಯಲ್ಲಿ ಸೇರಿದ್ದನು. ನಾನಾ ಪಡ್ನವೀಸ್ ಮತ್ತು ಟಿಪ್ಪುವಿನ ನಡುವೆ ಶಾಂತಿ ಒಪ್ಪಂದವಾಗಬೇಕಾದರೆ ಟಿಪ್ಪುವು ಪೊಗದಿ ಹಣದಿಂದ ಯುದ್ಧಸಿದ್ದತೆಗಾಗಿ ಪೊಗದಿ ಹಣವನ್ನು ದುರ್ಬಳಕೆ ಮಾಡಿಕೊಳ್ಳುತ್ತಾನೆಂಬ ಅನುಮಾನವು ವ್ಯಕ್ತವಾಯಿತು. ಆದರೆ ಪರಶುರಾಮ ಭಾವು ಟಿಪ್ಪುವಿನ ಮೇಲೆ ನಡೆಸಿದ ಅಪ್ರಚೋದಿತ ದಾಳಿಯು ಮತ್ತೆ ಹೋರಾಟದ ಬಿರುಸನ್ನು ತ್ವರಿತಗೊಳಿಸಿತು. ಟಿಪ್ಪುವು ನರಗುಂದದ ಮೇಲಿನ ಯುದ್ಧದ ಕಾರ್ಯಾಚರಣೆಯನ್ನು ಮತ್ತೆ ಪ್ರಾರಂಭಿಸಿ ಮುತ್ತಿಗೆ ಹಾಕಿದನು. ಕೋಟೆಯನ್ನು ವಶಮಾಡಿಕೊಂಡು ಅದರಲ್ಲಿದ್ದ ೧,೬೫೦ ಸೈನಿಕರನ್ನು ವಿಸರ್ಜಿಸಿದನು. ದೇಸಾಯಿ ಮತ್ತವನ ಕುಟುಂಬವನ್ನು ಕಬ್ಬಾಳುದುರ್ಗಕ್ಕೆ ಕಳುಹಿಸಲಾಯಿತು. ಆದರೆ ನಾನಾ ಪಡ್ನವೀಸನು ಫ್ರೆಂಚ್‌ರ ಮೊರೆಹೋಗಲು ಪ್ರಯತ್ನಿಸಿದನು. ಇದರಿಂದ ಫ್ರೆಂಚರು ನಾನಾಪಡ್ನವೀಸನಿಗೆ ಸಹಾಯ ಮಾಡಲು ಕಾತರಿಸುತ್ತಿದ್ದರೂ ಸಹ ನಾನಾ ಫ್ರೆಂಚರ ಸಹಾಯವನ್ನು ಪಡೆದುಕೊಳ್ಳಲಿಲ್ಲ. ಒಂದು ಹಂತದಲ್ಲಿ ಫ್ರೆಂಚರ ಪ್ರಭಾವ ಎಷ್ಟಾಯಿತೆಂದರೆ ನಾನಾ ಮೈಸೂರನ್ನು ಗೆದ್ದಮೇಲೆ ಅದರಲ್ಲಿ ಒಂದುಪಾಲು ಮತ್ತು ಮುಂಬಯಿ ಬಳಿಯ ರೇವದಂಡ ಎಂಬ ಕೋಟೆಯನ್ನು ಫ್ರೆಂಚರಿಗೆ ಕೊಡುವುದಾಗಿ ಆಲೋಚನೆ ಮಾಡಿದನು. ಆದರೆ ಬ್ರಿಟಿಷರ ಮಾಲೆಟ್ ಎಂಬಾತನು ಫ್ರೆಂಚರನ್ನು ಟಿಪ್ಪುವಿನ ಸ್ನೇಹದಿಂದ ತಟಸ್ಥರಾಗಿರುವಂತೆ ಮಾಡಲು ಮುಂದಾಗಿ ಅದರಲ್ಲಿ ಯಶಸ್ವಿಯೂ ಆದನು.[೧೭] ಇದರಲ್ಲಿ ಫ್ರೆಂಚರು ಮತ್ತು ಇಂಗ್ಲಿಷರೊಂದಿಗಿನ ಸಂಬಂಧಗಳು ನಾನಾಪಡ್ನವೀಸ್‌ನ ಕುತಂತ್ರಗಳು ಅತ್ಯಂತ ಮೋಸದ ಕುಠಿಲತೆಗಳಿಂದ ಕೂಡಿದ್ದವು.

ಕೊಡಗಿಗೂ ಮತ್ತು ಟಿಪ್ಪು ಸುಲ್ತಾನನಿಗೂ ದ್ವೇಷ ಹೊಸದಾಗಿ ಹುಟ್ಟಿಕೊಳ್ಳಲಿಲ್ಲ. ಅದು ಕ್ರಿ.ಶ.೧೭೭೦ರ ಸಂದರ್ಭದಲ್ಲಿ ಬೆಟ್ಟದ ಚಾಮರಾಜ ಒಡೆಯರ ಆಳ್ವಿಕೆಯಲ್ಲಿ ಹೈದರಾಲಿಯು ಹುಟ್ಟಿಹಾಕಿದ್ದು. ಅದಕ್ಕೆ ಕಾರಣವೇನೆಂದರೆ ಮರಾಠರ ತ್ರಯಂಬಕರಾಯನು ಮೈಸೂರಿನ ಸುತ್ತಮುತ್ತಲ ಪ್ರದೇಶಗಳನ್ನು ಲೂಟಿಗಳನ್ನು ಮಾಡಿ ಮೈಸೂರಿನ ಗಡಿಪ್ರದೇಶಗಳನ್ನೂ ಕೂಡ ತನ್ನ ಲೂಟಿಗೆ ಬಳಸಿಕೊಂಡನು. ಅದರಲ್ಲಿ ಮೈಸೂರು ರಾಜ್ಯದ ಪಕ್ಕದ ಕೊಡಗು, ಕೂಡ ಒಂದಾಗಿತ್ತು. ಅಂದು ಮಳೆಗಾಲ ಸರಿಯಾಗಿ ಆಗದೆ ಇದ್ದುದರಿಂದ ಕ್ಷಾಮ ಎದುರಾಯಿತು. ಆಗ ನವಾಬನು ಕೊಡಗು ಐಗೂರು ಮೊದಲಾದ ಪಾಳೆಯಗಾರರ ಬಳಿಗೆ ಅಕ್ಕಿ, ತುಪ್ಪ ಮುಂತಾದ ವಸ್ತುಗಳನ್ನು ಕುಮಕಿ(ಕಳುಹಿಸಿ)ಮಾಡಿಕೊಡಬೇಕೆಂದು ಪ್ರಧಾನಿ ವೆಂಕಪ್ಪಯ್ಯನನ್ನು ಕಳುಹಿಸಿದನು. ಆದರೆ ಐಗೂರು ಪಾಳೆಯಗಾರನು ವಸ್ತುಗಳನ್ನು ಕಳುಹಿಸಿಕೊಟ್ಟನು ಆದರೆ ಕೊಡಗಿನ ಪಾಳೆಯಗಾರ ಕಳಿಸಲು ವಸ್ತುಗಳನ್ನು ಸಾಧ್ಯವಾಗಲಿಲ್ಲ. ಅದಕ್ಕೆ ಕಾರಣವೆಂದರೆ ರಾಜ್ಯದಾದ್ಯಂತ ಮಳೆಯಾಗದೆ ಇದ್ದು, ಬರಗಾಲ ಆವರಿಸಿತ್ತು. ಆದರೆ ಮೈಸೂರಿನವರು ಕೊಡಗಿನ ಮೇಲೆ ದ್ವೇಷಭಾವನೆ ತಳೆಯುವಂತೆ ಕ್ಷಾಮವು ನೇರಕಾರಣವಾಯಿತು. ಕೊಡಗಿನ ಜನ ಹೈದರನ ವಿರುದ್ಧ ದಂಗೆಯೆದ್ದರು.

ಆದರೆ ಟಿಪ್ಪು ಈ ದಂಗೆಯನ್ನು ಅಡಗಿಸಲು ಪ್ರಯತ್ನಿಸಿ ಸಫಲನಾದನು.[೧೮] ಕ್ರಿ.ಶ.೧೭೮೦ರಲ್ಲಿ ಅವನು ತನ್ನ ಬಂಟನಾದ 'ಬದ್ರುಜ್ ಜುಮಾನ್ ಖಾನ್‌ಗೆ' ಬರೆದ ಪತ್ರದಲ್ಲಿ ಇತ್ತೀಚೆಗೆ ನಾನು ಮಲಬಾರಿನಲ್ಲಿ ಮಹತ್ತರ ವಿಜಯ ಸಾಧಿಸಿದರ ಬಗ್ಗೆ ನಿನಗೆ ಗೊತ್ತೆ? ಅಲ್ಲಿ ನಾಲ್ಕುಲಕ್ಷಕ್ಕೂ ಹೆಚ್ಚು ಕಾಫಿರರನ್ನು ಮತಾಂತರಗೊಳಿಸಿದೆ. ಈಗ ನಾನು ಆಶಾಪಗ್ರಸ್ಥನಾದ ರಾಮನ್‌ನಾಯರ್ ವಿರುದ್ಧ ಹೋರಾಟ ಮಾಡಬೇಕೆಂಬ ಸಂಕಲ್ಪ ಮಾಡಿದ್ದೇನೆ. ಅವನನ್ನೂ ಅವನ ಪ್ರಜೆಗಳನ್ನು ಇಸ್ಲಾಂಗೆ ಮತಾಂತರ ಮಾಡುವುದು ನನಗೆ ಖಾತ್ರಿಯಾಗಿದೆ.[೧೯] ಇದು ಟಿಪ್ಪು ಬರೆದ ಪತ್ರದ ಸಾರಾಂಶ. ಮೂರನೆಯ ಆಂಗ್ಲೋ–ಮೈಸೂರು ಯುದ್ಧದ ನಂತರ 'ತಿತಿಮತಿ'ಯ ಬಳಿಯಿರುವ ಮಾವುಕಲ್ ಬೆಟ್ಟದ ಹಿಂದೂ ದೇವಾಲಯವನ್ನು ನಾಶಮಾಡಿ ಸಾವಿರಾರು ಕೊಡವರನ್ನು ಬಂಧಿಸಿ ಶ್ರೀರಂಗಪಟ್ಟಣಕ್ಕೆ ಕರೆತಂದು ಇಸ್ಲಾಂಗೆ ಮತಾಂತರ ಮಾಡಿದನು. ಈ ರೀತಿಯಾಗಿ ಮತಾಂತರಗೊಂಡ ಮುಸ್ಲಿಂರಲ್ಲಿ ಕೆಲವರು ತಮ್ಮ ಸ್ವಂತ ಊರುಗಳಿಗೆ ವಾಪಸ್ಸು ಓಡಿಬಂದರು. ಅಂಥವರಿಗೆ ವೀರರಾಜೇಂದ್ರನು ಕೊಡಗಿನಲ್ಲಿದ್ದ ಪಾಳುಭೂಮಿಯನ್ನು ಕೊಟ್ಟು ಗುಂಪುಗುಂಪಾಗಿ ನೆಲೆಗೊಳಿಸಿದನು. ಈ ರೀತಿಯಾಗಿ ಸುಮಾರು ೧೨,೦೦೦ ಜನರು ಹಿಂತಿರುಗಿ ಬಂದರೆಂದು 'ರಾಜೇಂದ್ರ ನಾಮೆ'ಯಲ್ಲಿ ಹೇಳಲಾಗಿದೆ.[೨೦] ಕೊಡಗಿನಲ್ಲಿ ಸ್ಥಳೀಯರ ಸಂಪತ್ತನ್ನು ಕೊಳ್ಳೆಹೊಡೆಯಲು ಟಿಪ್ಪು ಆಪ್ತನಾದ ಪಠಾಣನೊಬ್ಬನನ್ನು ನೇಮಿಸಿದ್ದ. ಈತ ತನ್ನ ಸೈನ್ಯದ ನೆರವಿನಿಂದ ಸಂಪತ್ತನ್ನು ಕೊಳ್ಳೆಹೊಡೆಯುತ್ತಿದ್ದ. ಈತನ ದೌರ್ಜನ್ಯಕ್ಕೆ ಬೇಸತ್ತಂತಹ ಜನ ಟಿಪ್ಪುವಿನ ಸೈನಿಕರನ್ನು ಪಾಲಿಬೆಟ್ಟ ಗ್ರಾಮದ ಸಮೀಪ ಕೊಲೆಗೈದರು.

ಟಿಪ್ಪು ಸುಲ್ತಾನನು ಸವಣೂರಿಗೆ ಮುತ್ತಿಗೆ ಹಾಕಿದನು. ಅದಕ್ಕೆ ಪ್ರಮುಖವಾದ ಕಾರಣವೆಂದರೆ ಟಿಪ್ಪು ಹೇರಿದ್ದ ಅತಿಯಾದ ದಂಡಗಳು ಮತ್ತು ತೆರಿಗೆಗಳನ್ನು ಭರಿಸಲಾರದೆ ನವಾಬನು ಮರಾಠರು ನೆರವನ್ನು ಪಡೆದನು. ಆ ಸಂದರ್ಭದಲ್ಲಿ ತುಂಗಭದ್ರಾ ನದಿಯಲ್ಲಿ ಪ್ರವಾಹವಿದ್ದಿತು. ಟಿಪ್ಪು ನದಿಯನ್ನು ದಾಟಿ ಬರಲಾರನೆಂದು ಸವಣೂರು ನವಾಬನ ಕಡೆಯವರು ಉದಾಸೀನರಾಗಿದ್ದರು. ಆದರೆ ಟಿಪ್ಪೂ ದೋಣಿಗಳ ಸಹಾಯದಿಂದ ನದಿಯನ್ನು ದಾಟಿ ಸವಣೂರನ್ನು ತಲುಪಿದನು. ಘೋರವಾದ ಯುದ್ಧನಡೆದು ಸವಣೂರು ಟಿಪ್ಪುವಿನ ವಶವಾಯಿತು. ಅನಂತರ ಕೊಪ್ಪಳದ ಮೇಲೆ ದಾಳಿ ಮಾಡಿದಾಗ ಅಪಾರವಾದ ಹೆಂಗಸರು ಸುಲ್ತಾನನ ಸೈನ್ಯಕ್ಕೆ ಹೆದರಿ ತಮ್ಮ ಮಾನರಕ್ಷಣೆಗೋಸ್ಕರ ನದಿಯಲ್ಲಿ ಬಿದ್ದು ಪ್ರಾಣಬಿಟ್ಟರು.[೨೧]

ನಾಲ್ಕನೇಯ ಆಂಗ್ಲೋ–ಮೈಸೂರು ಯುದ್ಧಕ್ಕೂ ಮೊದಲು ಕ್ರಿ.ಶ. ೧೭೯೧ರಲ್ಲಿ ಬೆಂಗಳೂರು ಕೋಟೆಯ ಪತನವು ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ಹಲಸೂರು ಬಳಿ ಆಂಗ್ಲ ಸೈನ್ಯವು ಬೀಡುಬಿಟ್ಟಿತ್ತು. ಅದರ ಮುಖಂಡತ್ವವನ್ನು ಕಾರ್ನವಾಲೀಸ್ ಮತ್ತು ಜನರಲ್ ಮೆಡೋಸರು ವಹಿಸಿದ್ದರು. ರಾತ್ರಿವೇಳೆಯಲ್ಲಿ ಇವರಿಬ್ಬರೂ ಬೆಂಗಳೂರು ಕೋಟೆಯ ಮುತ್ತಿಗೆಯ ಬಗ್ಗೆ ಚರ್ಚಿಸುತ್ತಿದ್ದಾಗ ಟಿಪ್ಪುವಿನ ಕಡೆಯ ವಕೀಲನೊಬ್ಬನು ಬಂದು ನಾನು ನಿಮಗೆ ಸಹಾಯ ಮಾಡಲು

ಬಂದಿದ್ದೇನೆ ಆದರೆ ನಮ್ಮದು ಒಂದು ಷರತ್ತು. ಹೆಂಗಸರು ಮಕ್ಕಳಿಗೆ ಆಸ್ತಿಪಾಸ್ತಿಗಳಿಗೆ ಯಾವುದೇ ತೊಂದರೆಯಾಗದಿದ್ದರೆ ನಾನು ಸಹಾಯ ಮಾಡುತ್ತೇನೆ ಎಂದು ಸಂಚನ್ನು ರೂಪಿಸಿದನು. ಆಂಗ್ಲ ಸೈನಿಕರು ಮುಸ್ಲಿಂರಂತೆ ವೇಷಧರಿಸಿ ಧರ್ಮಾಂಬುದಿ ಕೆರೆಯ ಬಳಿ ಕುರುಚಲು ಗಿಡಗಳನ್ನು ಹಾದು ಕಂದಕದ ಆಳವಿಲ್ಲದ ಭಾಗದಿಂದ ಹಾದು ಬರುವಂತೆ ಸ್ಥಳೀಯರೇ ಸಹಾಯ ಮಾಡಿದರು. ಕಂದಕದ ಅಂಚಿನಲ್ಲಿದ್ದ ಮನೆಗಳನ್ನು ರಾತ್ರೋರಾತ್ರಿಯೇ ಖಾಲಿಮಾಡಿಸಿದರು. ಯುದ್ಧ ಆರಂಭವಾದಾಗ ಕಮ್ರುದ್ದೀನ್ ಖಾನನ ಕಡೆಯ ಸೈನಿಕರು ಕಾವಲಿನಲ್ಲಿ ಆಸಕ್ತಿಯನ್ನು ಕಳೆದುಕೊಂಡು ಯುದ್ಧ ಮಾಡತೊಡಗಿದರು. ಅಲ್ಲದೆ ಉದಾಸೀನ ಮನೋಭಾವ ತೋರಿದರು. ಎರಡೂ ಕಡೆಯ ಸೈನಿಕರು ರಾತ್ರಿಯೆಲ್ಲಾ ಎಚ್ಚರವಾಗಿದ್ದರು. ಕಮ್ರುದ್ದೀನ್ ಖಾನನ ಸೈನಿಕರು ಬೆಳಗಿನ ಜಾವ ತೂಕಡಿಸಲು ಪ್ರಾರಂಭಿಸಿದರು. ಇನ್ನು ಕೆಲವರು ಫಿರಂಗಿಗಳ ಕಾವಲು ಕೆಲಸಬಿಟ್ಟು ಗುಡುಗುಡಿ ಸೇದಲು ಹೊರಟರೆ ಮತ್ತೆ ಕೆಲವರು ಹೆಂಡಸಾರಾಯಿಗಳನ್ನು ಹುಡುಕಿಕೊಂಡು ಹೋದರು.[೨೨]

ಟಿಪ್ಪು ಬೆಂಗಳೂರಿನ ತನ್ನ ಜನಾನದಲ್ಲಿ ಬ್ರಿಟಿಷರಿಂದ ಧನಹಾನಿ ಮತ್ತು ಮಾನಹಾನಿ ಯಾಗುವುದೆಂದು ಜನಾನದ ಮಹಿಳೆಯರು ಮತ್ತು ಸಂಪತ್ತನ್ನು ಶ್ರೀರಂಗಪಟ್ಟಣಕ್ಕೆ ಸಾಗಿಸಲು ಯೋಜನೆಯನ್ನು ರೂಪಿಸಿದನು. ಸಾಮಾನ್ಯ ಎತ್ತಿನಗಾಡಿಗಳಲ್ಲಿ ಅರ್ಥಮಂತ್ರಿಯಾದ ಮೀರ್‌ಸಾಧಿಕ್ ಮತ್ತು ತೋಷಿಖಾನೆಯ ಮುಖ್ಯಾಧಿಕಾರಿ ಕೃಷ್ಣರಾಯ ಈ ಇಬ್ಬರೂ ಕೂಡ ಸಂಪತ್ತು ಹಾಗೂ ಮಹಿಳೆಯರನ್ನು ಶ್ರೀರಂಗಪಟ್ಟಣಕ್ಕೆ ಸಾಗಿಸಿದರು. ಕ್ರಿ.ಶ.೧೭೯೯ರ ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಮದ್ರಾಸಿನ ಸೈನ್ಯ ಹಾಗೂ ಸುಲ್ತಾನನ ಸೈನ್ಯವು ಏಕಕಾಲದಲ್ಲಿಯೇ ಮಳವಳ್ಳಿಗೆ ಬಂದು ಸೇರಿದವು. ಈ ಕಾಳಗದಲ್ಲಿ ಆಂಗ್ಲರೇ ಮೇಲುಗೈ ಸಾಧಿಸಿ ಸುಲ್ತಾನನ ಕಡೆಯವರು ಸೋಲುತ್ತಾ ಬಂದರು. ಆಗ ಸುಲ್ತಾನನ್ನು ಅರಕೆರೆ ಮಾರ್ಗವಾಗಿ ಹೊರಟು ಮಾರ್ಗಮಧ್ಯದಲ್ಲಿದ್ದ ಹಳ್ಳಿಗಳಲ್ಲಿ ಧಾನ್ಯದ ಹುಲ್ಲು ಬಣವೆಗಳನ್ನು ಸುಟ್ಟು ಹಾಕಿ, ಗ್ರಾಮಸ್ಥರನ್ನು ಊರಿಂದಾಚೆಗೆ ಓಡಿಸಿ, ದನಕರುಗಳಿಗೆ ಮೇವಿಲ್ಲದಂತೆ ಮಾಡಿ, ಅವುಗಳನ್ನು ಕಾಡಿಗೆ ಅಟ್ಟಿದನು. ಜನರಂತೂ ಕಾಡುಗಳಲ್ಲಿ ಅವಿತುಕೊಂಡರು.[೨೩] ಶ್ರೀರಂಗಪಟ್ಟಣದಲ್ಲಿಯೇ ಬಹಳ ದಿನಗಳು ಖೈದಿಯಾಗಿದ್ದು, ಅಲ್ಲಿನ ಸಮಸ್ತ ವಿಧ್ಯಮಾನಗಳನ್ನೂ, ರಹಸ್ಯಗಳನ್ನೂ ಬಲ್ಲವನಾಗಿದ್ದ ಲೆಫ್ಟಿನೆಂಟ್ ಜನರಲ್ ಬೇರ್ಡ್ ಎಂಬಾತನನ್ನೇ ಈ ಮುತ್ತಿಗೆ ದಳದ ನಾಯಕನನ್ನಾಗಿ ನೇಮಿಸಲಾಯಿತು. ಈ ಯುದ್ಧದಲ್ಲಿ ಟಿಪ್ಪುವನ್ನು ಬ್ರಿಟಿಷರು ಕೊಲೆಮಾಡಿದರು.

ಯುದ್ಧನೀತಿಗಳ ಜೊತೆಗೆ ಮೈಸೂರು ರಾಜ್ಯದಲ್ಲಿ ರೈತರ ದಂಗೆಗಳು ಪ್ರಾರಂಭವಾಗಲು ಹಲವಾರು ಕಾರಣಗಳಿವೆ. ಅದರಲ್ಲಿ ಪ್ರಮುಖವಾಗಿ ಬ್ರಿಟಿಷರು ಟಿಪ್ಪುವನ್ನು ಕೊಲೆಮಾಡಿದ ನಂತರ ಮಂಗಳೂರಿನ ತೀರಪ್ರದೇಶದಲ್ಲಿ ಅಲ್ಲದೆ ರಾಜ್ಯದ ಇತರ ಕಡೆಗಳಲ್ಲೂ ಕೂಡ ಭೂಮಾಲೀಕರನ್ನು ಸೃಷ್ಟಿಸಿ ಭೂಮಾಲೀಕರನ್ನು ಸೃಷ್ಟಿಸಿ ಅವರನ್ನು ತಮ್ಮ ಏಜೆಂಟರನ್ನಾಗಿ ಮಾಡಿಕೊಂಡರು. ಮುಂದೆ ಕ್ರಿ.ಶ. ೧೮೩೦ರಲ್ಲಿ ನಗರದಂಗೆಯಾಗಲು ಜಮೀನ್ದಾರರ ಹೆಚ್ಚುವರಿ

ಕಂದಾಯ ವಿಧಿಸುವಿಕೆಯೇ ಕಾರಣವಾಯಿತು. ಅಲ್ಲದೆ ಸಾಗುವಳಿ ಭೂಮಿಯನ್ನು ಪಾಳುಬಿಡಕೂಡದೆಂಬ ರೈತರ ಮೇಲೆ ಹೇರಿದ ಒತ್ತಡಗಳು, ಕಂದಾಯ ನೀಡದ ರೈತರ ತಲೆಯ ಮೇಲೆ ಕಲ್ಲನ್ನು ಹೊರಿಸಿ ಬಿಸಿಲಿನಲ್ಲಿ ನಿಲ್ಲಿಸುವುದು, ವಿಚಾರಣೆ ನಡೆಸದೆ ಇವರ ಕುಟುಂಬದವರನ್ನು ಸೆರೆಮನೆಗೆ ತಳ್ಳುತ್ತಿದ್ದರು. ಸೆರೆಮನೆ ವಾಸದ ಬೆದರಿಕೆಯಿಂದ ರೈತರು ಮಾನಸಿಕ ರೋಗಿಗಳಾದರು. ಇವರ ಆಸ್ತಿಪಾಸ್ತಿಗಳನ್ನು ಸರ್ಕಾರ ಮುಟ್ಟುಗೋಲು ಹಾಕಿಕೊಳ್ಳುತ್ತಿತ್ತು. ಭೂಮಾಲೀಕರು ಪ್ರಶ್ನಾತೀತ ಪ್ರಭುಗಳಾಗಿ ಮಾರ್ಪಟ್ಟರು. ದಂಗೆಯನ್ನು ಹತ್ತಿಕ್ಕಲು ಬಂದ ಮೈಸೂರಿನ ಸೈನಿಕರಿಗೆ ಎಲ್ಲಾ ಮಾರ್ಗಗಳನ್ನು ಬಂದ್‌ಮಾಡಲಾಯಿತು. ಮೈಸೂರು ಸೈನಿಕರಿಗೆ ಆಹಾರ ಮತ್ತು ಇತರ ಸಾಮಾಗ್ರಿಗಳು ದೊರೆಯದಂತೆ ಮಾಡಿದರು.[೨೪] ಅವರಲ್ಲಿದ್ದ ಹಣ ಮತ್ತು ಆಹಾರ ಪದಾರ್ಥಗಳನ್ನು ವಶಪಡಿಸಿಕೊಂಡು ಅವರಿಗೆ ಯಾವುದೇ ಮಾರ್ಗದಿಂದಲೂ ಆಹಾರ ಪದಾರ್ಥಗಳು ತಲುಪದಂತೆ ಮಾಡಿದರು.

ವಿಜಯನಗರ ಸಾಮ್ರಾಜ್ಯದಂತೆ ಮೈಸೂರು ಅರಸರ ಕಾಲಘಟ್ಟದಲ್ಲಿ ನಡೆದ ಹಲವಾರು ಯುದ್ಧಗಳು ನಡೆದಿದ್ದರೂ: ಅವುಗಳಲ್ಲಿ ಬಹುಪಾಲು ಕೂಟ ಯುದ್ಧಗಳಾಗಿದ್ದವು. ಇದರಿಂದ ಮಧ್ಯಯುಗದ ಯುದ್ಧನೀತಿಗಳು ಸಂದರ್ಭ ಮತ್ತು ಭೂ ಪ್ರದೇಶಗಳಿಗೆ ಅನುಗುಣವಾಗಿ ಬದಲಾಗುತ್ತಾ ಹೋದವು. ಅತಿ ಹೆಚ್ಚು ಯುದ್ಧಗಳು ಮತ್ತು ಲೂಟಿಗಳು ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ನಡೆದಿರುವುದೇ ಹೆಚ್ಚು.

**೫.೨. ಯುದ್ಧದ ಪರಿಣಾಮಗಳು**

ಒಂದು ಸಾಮ್ರಾಜ್ಯದ ಅಳಿವು-ಉಳಿವಿನ ಪ್ರಶ್ನೆಗೆ ಯುದ್ಧಗಳು ಮತ್ತು ಆಕ್ರಮಣಗಳು ಕಾರಣವಾದಂತೆ ಫಲಿತಾಂಶಗಳು ಮತ್ತು ಪರಿಣಾಮಗಳು: ಯುದ್ಧದ ಜಯ, ಅಪಜಯಗಳಿಂದ ಉಂಟಾದ ಮೌಲ್ಯಗಳನ್ನು ತಿಳಿಸುತ್ತವೆ. ಇದರಿಂದ ಇತಿಹಾಸದಲ್ಲಿ ಪ್ರಮುಖ ಬದಲಾವಣೆಗಳನ್ನು ಉಂಟುಮಾಡಿದ ಉದಾಹರಣೆಗಳೂ ಉಂಟು. ರಾಜಒಡೆಯರು ಕ್ರಿ.ಶ.೧೫೮೪ರಿಂದ ೧೬೧೭ರವರೆಗೆ ಹಲವಾರು ಯುದ್ಧಗಳನ್ನು ಮಾಡಿ ಕೇವಲ ಹದಿನಾರು ಹಳ್ಳಿಗಳಿಗೆ ಮೀಸಲಾಗಿದ್ದ ಮೈಸೂರೆಂಬ ಚಿಕ್ಕ ಪಾಳೆಯಪಟ್ಟನ್ನು ವಿಸ್ತರಿಸುವ ಕಾರ್ಯಮಾಡಿದರು. ಅಲ್ಲದೆ ತಾವು ವಶಪಡಿಸಿಕೊಂಡ ಪ್ರದೇಶಗಳಿಂದ ಕಪ್ಪಕಾಣಿಕೆಯನ್ನು ಸ್ವೀಕರಿಸಿ ರಾಜ್ಯವನ್ನು ಸಂಪತ್ತಿನಿಂದ ಶ್ರೀಮಂತಗೊಳಿಸಲು ಪ್ರಯತ್ನಿಸಿದರು. ಇವರು ಸ್ವತಂತ್ರ ರಾಜ್ಯಭಾರವನ್ನು ವಹಿಸಿಕೊಳ್ಳಲು ಶ್ರೀರಂಗಪಟ್ಟಣದಲ್ಲಿ ಆಳ್ವಿಕೆಯನ್ನು ಮಾಡುತ್ತಿದ್ದ ವಿಜಯನಗರದ ಕೊನೆಯ ರಾಜಪ್ರತಿನಿಧಿಯಾದ ತಿರುಮಲರಾಯನನ್ನು ಸಿಂಹಾಸನದಿಂದ ಕೆಳಗಿಳಿಸಿ ತಲಕಾಡಿಗೆ ಓಡಿಸಿ ಸ್ವತಂತ್ರರಾಗಿ ಆಳ್ವಿಕೆ ಮಾಡಲು ಸಫಲರಾದರು. ಇದರಿಂದ ಸ್ವತಂತ್ರವಾದ ಮೈಸೂರು ರಾಜ್ಯದ ಉದಯವಾಯಿತು. ರಾಜ್ಯವು ವಿಸ್ತಾರವಾದಂತೆ ರಾಜ್ಯರಕ್ಷಣೆಕಗೆ ಅಗತ್ಯವಾದ ಅಧಿಕಾರಿಗಳಿಂದ ಠಾಣೆದಾರ, ಹೋಬಳಿದಾರ, ಓಲೆಕಾರ ಮುಂತಾದ ಅಧಿಕಾರಿಗಳನ್ನು ಗಡಿಗಳಲ್ಲಿ ಬಂದೋಬಸ್ತು ಮಾಡುವಂತೆ

ನೇಮಿಸಿದರು. ವಿವಿಧ ಕಾಲಾವಧಿಯಲ್ಲಿ ವಿವಿಧ ಗಡಿಸೀಮೆಗಳನ್ನು ವಶಪಡಿಸಿಕೊಂಡಿದ್ದರಿಂದ ಮೈಸೂರು ರಾಜ್ಯದ ವಿಸ್ತೀರ್ಣವು ವಿಸ್ತರಿಸುತ್ತಾ ಸಾಗಿತು. ಇದರಿಂದ ರಾಜ್ಯ ರಕ್ಷಣೆಗೆ ಅಗತ್ಯವಾದ ಸೈನ್ಯ ಮತ್ತು ಅದನ್ನು ನಿರ್ವಹಿಸಲು ಒಬ್ಬ ಸಮರ್ಥವಾದ ದಕ್ಷ ಅಧಿಕಾರಿಯು ಅವಶ್ಯಕವಾದ್ದರಿಂದ ಸೈನ್ಯವನ್ನು ಹೆಚ್ಚಿನ ಸಂಖ್ಯೆಯಲ್ಲಿ ನೇಮಿಸಿ ದಳವಾಯಿಗಳೆಂಬ ಪ್ರಧಾನ ಮಂತ್ರಿಯ ನೇಮಕ ಮಾಡಿದರು. ಚಾಮರಾಜ ಒಡೆಯರಲ್ಲಿ ಜಗದೇವರಾಯನು ತಮಗೆ ಚಿಕ್ಕನಾಯಕನಹಳ್ಳಿಯನ್ನು ಗೆಲ್ಲಲು ಸಹಾಯಮಾಡಲು ಹೇಳಿದಾಗ ಚಿಕ್ಕನಾಯಕನಹಳ್ಳಿಯನ್ನು ತಾವೇಗೆದ್ದು ನಾಗಮಂಗಲವನ್ನು ಕೂಡ ಅವನಿಂದ ಕಿತ್ತುಕೊಂಡರು. ಅಂದರೆ ಸಹಾಯ ಮಾಡುವ ನೆಪದಲ್ಲಿ ಅವರ ಮೇಲೆಯೇ ಯುದ್ಧಮಾಡುವುದನ್ನು ರೂಢಿಸಿಕೊಂಡಿದ್ದರು. ಇಲ್ಲಿ ಸಹಾಯಕ್ಕೆ ಯಾವುದೇ ಪ್ರತಿಫಲವಿಲ್ಲದೆ ಸಹಾಯವನ್ನು ನಿರಾಕರಿಸಲಾಯಿತು. ಕಟ್ಟೆಮಳಲವಾಡಿಯ ಗೋಪಾಲರಾಜಯ್ಯನನ್ನು ಸೋಲಿಸಿ ಅವನಿಂದ ಅರಮನೆಯ ಸೈನ್ಯಕ್ಕೆ ಬೇಕಾದ ಆನೆಗಳ ಕ್ರಯವನ್ನು ನಿಗಧಿ ಮಾಡಿಕೊಂಡರು. ಇದರಿಂದ ಆನೆಗಳು ಸುಲಭವಾದ ಬೆಲೆಗೆ ಮೈಸೂರಿನ ಸೈನ್ಯಕ್ಕೆ ದೊರಕಿದವು. ಮೈಸೂರಿನ ಇತಿಹಾಸದಲ್ಲಿ 'ರಣಧೀರ'ನೆಂಬ ಬಿರುದನ್ನು ಪಡೆದಿದ್ದ ಕಂಠೀರವ ನರಸರಾಜ ಒಡೆಯರು ಹೆಸರಿಗೆ ತಕ್ಕಂತೆ ಯುದ್ಧರಂಗದಲ್ಲಿ ವಿಜಯಿಗಳಾಗಿದ್ದರು. ತಿರುಚನಾಪಳ್ಳಿಯ ಜಗಜಟ್ಟಿಯೊಬ್ಬನನ್ನು ಮಾರುವೇಷದಲ್ಲಿ ಅಂದರೆ ಜಟ್ಟಿಯ ವೇಷದಲ್ಲಿ ಹೋಗಿ ಅವನನ್ನು ಮಲ್ಲಯುದ್ದದಲ್ಲಿ ಸೋಲಿಸಿ ಅರಸರೂ ಕೂಡ ಮಲ್ಲಯುದ್ಧ ಪ್ರವೀಣರು ಎಂಬುದನ್ನು ಸಾಭೀತುಪಡಿಸಿದ್ದರು. ಇವರು ತಮ್ಮ ಕಾಲದಲ್ಲಿ ಮೈಸೂರಿನ ಸೈನ್ಯ ರಾಜ್ಯವನ್ನು ಹೆಚ್ಚು ವಿಸ್ತರಿಸುವತ್ತ ಗಡಿಗಳನ್ನು ವಿಸ್ತರಿಸಿದರು. ಅಲ್ಲದೆ ಬಿಜಾಪುರದ ಸೈನ್ಯ 'ರಣದುಲ್ಲಾಖಾನ್' ಎಂಬ ಸೈನ್ಯಾಧಿಪತಿಯ ನೇತೃತ್ವದಲ್ಲಿ ದಕ್ಷಿಣ ಕರ್ನಾಟಕದ ಮೇಲೆ ದಾಳಿಮಾಡಿತು. ಇದಕ್ಕೆ ಕಾರಣ ಕ್ರಿ.ಶ.೧೭ನೆಯ ಶತಮಾನದಲ್ಲಿ ಕರ್ನಾಟಕದ ಪಾಳೆಯಗಾರರು ತಮ್ಮತಮ್ಮಲೇ ಹೊಂದಿದ್ದಂತಹ ಭಿನ್ನಾಭಿಪ್ರಾಯಗಳು ದ್ವೇಷದ ರಾಜಕಾರಣವೇ ಅಂದಿನ ಈ ದೊಡ್ಡಮೊತ್ತದ ದಾಳಿಯೆಸಗಲು ಸಾಧ್ಯವಾಯಿತು. ತರಿಕೆರೆಯ ಪಾಳೆಯಗಾರ ಹನುಮಪ್ಪನಾಯಕನು ಬಸವಾಪಟ್ಟಣದ ನಾಯಕನ ಮೇಲಿನ ದ್ವೇಷದಿಂದ ಬಿಜಾಪುರದ ಸುಲ್ತಾನನಿಗೆ ಬಸವಾಪಟ್ಟಣದ ಮೇಲೆ ದಾಳಿ ಮಾಡಲು ನೀಡಿದ ಆಹ್ವಾನವೇ ಈ ಸಮಸ್ಯೆಗೆಲ್ಲಾ ಕಾರಣವಾಯಿತು. ಸಾಮಾಜಿಕ, ಆರ್ಥಿಕ, ಮತ್ತು ರಾಜಕೀಯ ಶೋಷಣೆಗಳು ಈ ದಾಳಿಯಲ್ಲಾದವು. ಏಕೆಂದರೆ ಬಿಜಾಪುರದ ಸೈನಿಕರು ಯುದ್ಧದಲ್ಲಿ ವಿಜಯಿಗಳಾದ ನಂತರ ಅವರು ಮಹಿಳೆಯರು ಮತ್ತು ಮಕ್ಕಳ ಮೇಲೆ ನಡೆಸಿದ ದೌರ್ಜನ್ಯಗಳು ಅತ್ಯಂತ ಕ್ರೂರವಾಗಿದ್ದವು. ಇದನ್ನು ಕೆಳದಿಯ ಲಿಂಗಣ್ಣ ಕವಿ ಮತ್ತು ಗೋವಿಂದ ವೈದ್ಯನು ತಮ್ಮ ಕಾವ್ಯಗಳಲ್ಲಿ ವರ್ಣಿಸಿದ್ದಾರೆ. ಈ ಇಬ್ಬರು ಪಾಳೆಯಗಾರರ ವೈಷಮ್ಯ ಭಾವನೆಯು ಸಣ್ಣ ಪುಟ್ಟ ಪಾಳೆಯಪಟ್ಟುಗಳು ಅಲ್ಲದೆ ಮೈಸೂರನ್ನು ಕೂಡ ತನ್ನ ದಾಳಿಗಳಿಗೆ ಒಳಪಡಿಸಿತು. ಇದರಿಂದ ಅಪಾರ ಪ್ರಮಾಣದ ಸಾವುನೋವುಗಳು, ಸಂಪತ್ತುನಾಶ ಮತ್ತು ದೌರ್ಜನ್ಯಗಳು ಜರುಗಿದವು. ಮೈಸೂರು ಸೈನ್ಯವು ಈ ಯುದ್ಧದಲ್ಲಿ ಫಿರಂಗಿ, ತುಪಾಕಿ,

ಶತಘ್ನ, ಮದ್ದುಗುಂಡುಗಳಂತಹ ಸಿಡಿಮದ್ದಿನ ಉಪಕರಣಗಳನ್ನು ಬಳಕೆಮಾಡಿತು. ಮೈಸೂರಿನ ಇತಿಹಾಸದಲ್ಲಿಯೇ ಇದೊಂದು ಅತ್ಯಂತ ಮೋಸದ ಹಾಗೂ ಯುದ್ಧನೀತಿಗಳನ್ನು ಗಾಳಿಗೆ ತೂರಿದಂತಹ ಯುದ್ಧವಾಗಿದೆ. ರಾತ್ರಿವೇಳೆಯ ಯುದ್ಧವನ್ನು ಬಿಜಾಪುರದ ಸೈನಿಕರು ನಡೆಸಿದ್ದರಿಂದ ಕೂಟಯುದ್ಧಗಳು ನಡೆಯಲು ಪ್ರೇರಕವಾದವು. ಬಿಜಾಪುರದ ಸೈನಿಕರು ಸೋತು ಓಡಿ ಹೋಗಬೇಕಾದರೆ ಮೈಸೂರಿನ ಸೈನಿಕರಿಗೆ ಕಂಠೀರವ ನರಸರಾಜ ಒಡೆಯರು ಶತ್ರುಗಳ ಮೂಗರಿಯುವಂತೆ ಮಾಡಿದರು. ಇದೇ ನೀತಿಯನ್ನು ಪಿರಿಯಾಪಟ್ಟಣದ ಕಾಳಗದಲ್ಲೂ ಕೂಡ ಬಳಸಲಾಯಿತು.[೨೬] ಮರಾಠರ ಮೇಲೂ ಈನೀತಿಯನ್ನು ಪ್ರಯೋಗಿಸಲಾಯಿತು. ಏಕೆಂದರೆ ಮೂಗನ್ನು ಕತ್ತರಿಸುವುದರಿಂದ ವ್ಯಕ್ತಿಯು ಶ್ವಾಸಕೋಶದ ಸೋಂಕಿಗೆ ತುತ್ತಾಗಿ ಬೇಗ ಮರಣ ಹೊಂದುತ್ತಾನೆ. ಅಲ್ಲದೆ ಮೂಗು ವಿಕಾರವಾದಾಗ ಅವನನ್ನು ಎದುರಿಗಿದ್ದ ವ್ಯಕ್ತಿಯು ನೋಡುವುದರಿಂದ ಅಸಹ್ಯವನ್ನು ಹುಟ್ಟಿಸುತ್ತಿತ್ತು. ಬಿಜಾಪುರದ ಈ ದಾಳಿಯಂತೆ ಆಕ್ರಮಣವಾಗಬಾರದೆಂದು ಕೋಟೆಯ ಕೊತ್ತಲಗಳಲ್ಲಿ ಫಿರಂಗಿಗಳನ್ನಿಡಿಸಿದರೂ ಮರಾಠರು ಮೈಸೂರಿನ ಮೇಲೆ ಆಕ್ರಮಣ ಮಾಡಿದಾಗ ಮೈಸೂರಿನವರು ಫಿರಂಗಿ, ತುಪಾಕಿ, ಮದ್ದುಗುಂಡುಗಳನ್ನು ಬಳಸಿ ಯುದ್ಧ ಮಾಡಿದ್ದರಿಂದ ಮರಾಠರು ಹೆದರಿ ಹಿಮ್ಮೆಟ್ಟಿ ಓಡಿಹೋಗುವ ಸಮಯದಲ್ಲಿ ಇದು ಶ್ರೀರಂಗಪಟ್ಟಣವಲ್ಲ ಫಿರಂಗಿಪಟ್ಟಣ ಎಂದು ಹೇಳುತ್ತಾ ಓಡಿಹೋದರು. ಅಲ್ಲದೆ ಶ್ರೀರಂಗಪಟ್ಟಣದ ಕೋಟೆಗೆ ಶತ್ರುಗಳು ಲಗ್ಗೆಯೇರುವ ಸಮಯದಲ್ಲಿ ಕೊತ್ತಲಗಳ ಮೇಲಿಂದ ಬಿಸಿಮರಳು, ಅಂಬಲಿ, ಬಿಸಿಎಣ್ಣೆ, ಕಲ್ಲುಗುಂಡುಗಳನ್ನು ಶತ್ರುಗಳ ಮೇಲೆ ಬಿಡುತ್ತಿದ್ದರಿಂದ ಹೆಚ್ಚಿನ ಸೈನಿಕರು ಅವುಗಳಿಂದಾದ ಆಘಾತಗಳಿಗೆ ಕೈಕಾಲು, ಕಣ್ಣು, ಮೊದಲಾದ ದೇಹದ ಭಾಗಗಳನ್ನು ಕಳೆದುಕೊಂಡರಲ್ಲದೆ ಹಲವಾರು ಜನ ಗಾಯಗೊಂಡರು. ಇದರಿಂದ ಶ್ರೀರಂಗಪಟ್ಟಣದ ಕೋಟೆಯನ್ನು ಭಲಪಡಿಸಲಾಯಿತು. ಆಹಾರ ಸಾಮಾಗ್ರಿಗಳು ಮತ್ತು ಯುದ್ಧ ಸಾಮಾಗ್ರಿಗಳಾದ ಕತ್ತಿ, ಗುರಾಣಿ, ಕಠಾರಿ, ತುಪಾಕಿ, ಅಂಬು, ಸಿಂಗಾಡಿ, ಬಾಣ, ಬತ್ತಳಿಕೆ, ಮದ್ದುಗುಂಡು, ಚಾಕುಚೂರಿ, ಕತ್ತರಿ ಮೊದಲಾದವನ್ನು ಸಂಗ್ರಹಿಸಿ ಆನೆ, ಕುದುರೆ, ಒಂಟೆ, ಎತ್ತುಗಳಿಗೆ ಹುಲ್ಲು ಮೆದೆಗಳನ್ನು ಹಾಕಿಸಿದರು.

ಚಿಕ್ಕದೇವರಾಯ ಒಡೆಯರು ಬೆಂಗಳೂರನ್ನು ಮೊಗಲರಿಂದ ಕ್ರಯಮಾಡಿಕೊಂಡು ಅಗತ್ಯವಿರುವ ಬುದ್ಧಿವಂತ ಅಧಿಕಾರಿಗಳನ್ನು ನೇಮಿಸಿದರು. ಮಾಗಡಿ, ಐಗೂರು, ಕೊಡಗು, ಮಲಯಾಳ ಪ್ರದೇಶಗಳ ಪಾಳೆಯಗಾರರಿಂದ ಕಪ್ಪವನ್ನು ವಸೂಲಿ ಮಾಡಿದರು. ಸೈನ್ಯವನ್ನು ಹೆಚ್ಚಿಸಿ ಶ್ರೀರಂಗಪಟ್ಟಣದ ಕೋಟೆಯಲ್ಲಿ ಫಿರಂಗಿಗಳನ್ನಿಡಿಸಿದರು. ತಿರುಚನಾಪಳ್ಳಿಯನ್ನು ಗೆದ್ದು ಮರಾಠರ ಜಿಯಾಜಿಘಾಟ್ ಮತ್ತು ನಿಂಬಾಜಿಘಾಟರನ್ನು ಸೋಲಿಸಲು ಅವರ ಸೈನ್ಯದ ಮೇಲೆ ೩,೦೦೦ ಆವಿನದನಗಳ ಕೊಂಬಿಗೆ ಪಂಜುಗಳನ್ನು ಕಟ್ಟಿ ಅವರು ಭಯಭೀತರಾಗುವಂತೆ ಯುದ್ಧಮಾಡಿ ರಾತ್ರಿವೇಳೆ ಯುದ್ಧದಲ್ಲಿ ವಿಜಯಗಳಿಸಿದರು. ವಿವಿಧ ಸೀಮೆಗಳನ್ನು ಗೆದ್ದು ಕಪ್ಪಕಾಣಿಕೆ

ಸ್ವೀಕರಿಸಿದರು. ಆದರೆ ಕಳಲೆಯ ಪಾಳೆಯಗಾರ ಕಾಂತರಾಜಯ್ಯನ ಮಗನನ್ನು ತಮ್ಮ ಸೈನ್ಯದಲ್ಲಿ ಉನ್ನತ ಹುದ್ದೆಗೆ ನೇಮಿಸಿದರು. ಅಲ್ಲದೆ ರಾಜ್ಯದಲ್ಲಿ ೮೪ ಗಡಿಗಳನ್ನು ಗುರ್ತಿಸಿ ಸುಬೇದಾರ, ಪಾರುಪತ್ಯಗಾರ ಗುಮಾಸ್ತರು, ರಾಯಪದವರು, ಅಂಚೆಹರಿಕಾರ, ಕೋಲುಕಾರ, ದಫೇದಾರ ಕಂದಾಚಾರ ಮೊದಲಾದವರನ್ನು ನೇಮಿಸಿ ರಾಜ್ಯದ ರಕ್ಷಣೆಗೆ ಹೆಚ್ಚು ಒತ್ತುನೀಡಿದರು.

ಕಂಠೀರವ ಮಹಾರಾಜ ಒಡೆಯರು ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ, ಸಿರಾಗಳ ಪಾಳೆಯಗಾರರನ್ನು ಸೋಲಿಸಿ ಕಪ್ಪಕಾಣಿಕೆಗಳನ್ನು ನೀಡುವಂತೆ ಅವರಲ್ಲಿ ಒಪ್ಪಂದಗಳನ್ನು ಮಾಡಿಕೊಂಡರು. ದೊಡ್ಡ ಕೃಷ್ಣರಾಜ ಒಡೆಯರ ಆಳ್ವಿಕೆಯ ಕಾಲಾವಧಿಯಲ್ಲಿ ಆರ್ಕಾಟಿನ ಸಾದುಲ್ಲಾ ಖಾನ್ ಮತ್ತು ಮರಾಠರ ಸಿದ್ಧೋಜಿ ಘೋರ್ಪಡೆಯವರ ಒಕ್ಕೂಟ ಸೈನ್ಯದೊಂದಿಗಿನ ಯುದ್ಧದಲ್ಲೂ ಕೂಡ ಕಿವಿಮೂಗುಗಳನ್ನು ಕತ್ತರಿಸಿ ಓಡಿಸಲಾಯಿತು.[೨] ಸೋತು ಓಡಿಹೋಗುತ್ತಿದ್ದ ಮರಾಠರನ್ನು ಮತ್ತೆ ಬೆನ್ನಟ್ಟಿ ಅವರನ್ನು ಸುಲಿಗೆ ಮಾಡಲಾಯಿತು. ಮರಾಠರೊಂದಿಗಿನ ಯುದ್ಧದಲ್ಲಿ ಕೋವಿ, ಫಿರಂಗಿ, ಗುಂಡು, ಜಂಜಾಲು, ತುಪಾಕಿ, ಮಕರಡಿಬ್ಬಿ, ಓಬರಜಂಗಿಗಳಂತಹ ಸಿಡಿಮದ್ದಿನ ಉಪಕರಣಗಳನ್ನು ಬಳಸಲಾಯಿತು. ಮಾಗಡಿ, ಶಾಲ್ಯ, ರತ್ನಗಿರಿ ಮೊದಲಾದ ಪಾಳೆಯಗಾರರನ್ನು ಸೋಲಿಸಿ ಅವರ ಪಾಳೆಯಪಟ್ಟುಗಳನ್ನು ತಮ್ಮ ವಶಮಾಡಿಕೊಂಡರು. ಬೆಂಗಳೂರಿನಲ್ಲಿ ಅಧಿಕಾರ ವಹಿಸಿಕೊಂಡಿದ್ದ ಕತ್ತಿಗೋಪಾಲರಾಜೇ ಅರಸರು ದೇವನಹಳ್ಳಿಯ ಮೇಲೆ ದಾಳಿಯನ್ನು ಕೈಗೊಂಡಿದ್ದರಿಂದ ಹೈದರನಂತಹ ಒಬ್ಬ ಹೋರಾಟಗಾರ ಹಾಗೂ ಸಮರ್ಥ ಆಡಳಿತಾಧಿಕಾರಿ ಮತ್ತು ನಿಪುಣ, ಚತುರ ದಳವಾಯಿಯು ದೊರೆತದ್ದು, ಇದರಿಂದ ಮೈಸೂರು ರಾಜ್ಯದ ಕೀರ್ತಿಯು ಇಂದಿಗೂ ದೇಶವಿದೇಶಗಳಲ್ಲಿ ಹರಡಲು ಸಹಕಾರಿಯಾಗಿದೆ.

ಹೈದರ್ ಅಲಿಯು ಮೈಸೂರಿನ ದಳವಾಯಿಯಾಗುವುದಕ್ಕಿಂತ ಮುಂಚೆ ತಿರುಚನಾಪಳ್ಳಿ, ಆರ್ಕಾಟ್ ಮತ್ತು ಇತರೆ ಭಾಗಗಳಲ್ಲಿ ಯುದ್ಧಗಳಲ್ಲಿ ಪಾಲ್ಗೊಂಡು ಯುದ್ಧದ ಅನುಭವವನ್ನು ಪಡೆದುಕೊಂಡನು. ಕರ್ನಾಟಿಕ್ ಯುದ್ಧದಲ್ಲಿ ಅವನು ನಾಸಿರ್‌ಜಂಗನ ಕೊಲೆಯಾದಾಗ ಅದರ ಲಾಭವನ್ನು ಪಡೆದು ಅಪಾರ ಸಂಪತ್ತಿನ ಕೊಳ್ಳೆ ಹೊಡೆದನು. ಎರಡು ಒಂಟೆಹೇರು ಚಿನ್ನದನಾಣ್ಯಗಳು ಮತ್ತು ಮುನ್ನೂರು ಕುದುರೆಗಳು, ಐದುನೂರು ಬಂದೂಕುಗಳನ್ನು ವಶಪಡಿಸಿಕೊಂಡು ದೇವನಹಳ್ಳಿಯತ್ತ ಸಾಗಿಸಿದನು. ಪಾಂಡಿಚೇರಿಗೆ ಭೇಟಿನೀಡಿ ಫ್ರೆಂಚ್ ಸೇನೆಯ ಶಿಸ್ತು ಹಾಗೂ ಎಂಜನಿಯರ್ ಅಧಿಕಾರಿಗಳ ದಕ್ಷತೆಯನ್ನು ನೋಡಿ ಅದೇ ಮಾದರಿಯ ಸೇನೆಯನ್ನು ಕಟ್ಟಲು ಪ್ರಯತ್ನಿಸಿದನು. ಇದರಿಂದ ಮೈಸೂರಿನ ಸೈನ್ಯದಲ್ಲಿ ಪಾಶ್ಚಾತ್ಯ ಯುದ್ಧತಂತ್ರದ ಪರಿಚಯವಾಯಿತು. ಫ್ರೆಂಚ್ ಸೇನೆಯನ್ನು ಬಿಟ್ಟು ಅಲ್ಲಲ್ಲಿ ಚೆದುರಿದ್ದ ಫ್ರೆಂಚ್ ಸಿಪಾಯಿಗಳ ನೆರವಿನಿಂದ ತನ್ನ ಯೋಧರಿಗೆ ಶಿಸ್ತಿನ ಕವಾಯತನ್ನು ಕೊಡಿಸಿದನು. ಅಲ್ಲದೇ ಸೈನ್ಯದಲ್ಲಿ ಯೂರೋಪಿಯನ್ ಮಾದರಿಯ ಬಂದೂಕುಗಳ ಬಳಕೆಯನ್ನು ಮಾಡಿದನು. ಇದರಿಂದ ಫ್ರೆಂಚರೊಂದಿಗಿನ ಮೈತ್ರಿಯು ಕ್ರಿ.ಶ.೧೭೭೯ರವರೆಗೆ ಮುಂದುವರೆಯಿತು. ತಿರುಚನಾಪಳ್ಳಿಯ ಯುದ್ಧದಲ್ಲಿ ಬ್ರಿಟಿಷರೊಂದಿಗಿನ ಯುದ್ಧದ ನೇರವಾದ ಪರಿಚಯವಾಯಿತು. ಹೈದರನು ರಾತ್ರಿಯ ವೇಳೆಯಲ್ಲಿ ಬ್ರಿಟೀಷರ ಮೇಲೆ

ದಾಳಿಗಳನ್ನು ನಡೆಸುತ್ತಿದ್ದನು. ಈ ಸಂದರ್ಭದಲ್ಲಿ ಸಬಲತ್ ಜಂಗ್ ಮತ್ತು ಮರಾಠರು ದಾಳಿಮಾಡಿದ್ದರಿಂದ ಮೈಸೂರಿನ ಮೇಲೆ ಅಪಾರವಾದ ಕಪ್ಪಕಾಣಿಕೆಯನ್ನು ಹೇರಲಾಯಿತು. ಏಕೆಂದರೆ ಅದೆಲ್ಲವೂ ಯುದ್ಧನಷ್ಟದ ಮೊತ್ತವಾಗಿತ್ತು. ಇದರಿಂದ ದೇವಾಲಯದ ಚಿನ್ನ, ಬೆಳ್ಳಿಯ ಒಡವೆಗಳನ್ನು ಕೂಡ ಮಾರಾಟ ಮಾಡಲಾಯಿತಾದರೂ ಅಷ್ಟೋಂದು ಹಣವನ್ನು ಹೊಂದಿಸಲಾಗದೆ ಬಾಕಿ ಹಣವನ್ನು ಹಾಗೆಯೇ ಉಳಿಸಿಕೊಂಡರು. ಆದರೂ ನಂಜರಾಜಯ್ಯನು ದುರಾಸೆಯಿಂದ  ಸಾಮ್ರಾಜ್ಯವನ್ನು ಕನ್ಯಾಕುಮಾರಿಯವರೆಗೆ ವಿಸ್ತರಿಸುವ ಕಾರಣದಿಂದ ನಂಜರಾಜಯ್ಯನು ಅದರಲ್ಲಿ ವಿಫಲವಾಗಿ ಸಮಸ್ತವನ್ನೂ ಕಳೆದುಕೊಂಡು ಬರಿಕೈಯಾದನು. ಸೈನಿಕರೆಲ್ಲರೂ ಬಂಡೆದ್ದರು. ಆದರೆ ಹೈದರನು ತನ್ನ ಸಂಪತ್ತೆಲ್ಲವನ್ನು ವಿನಿಯೋಗಿಸಿ ಅವರನ್ನು ಸಮಾಧಾನಗೊಳಸಿದನು. ಆದರೆ ಹೈದರನು ಈ ಯುದ್ಧದಲ್ಲಿ ಅಪಾರವಾದ ಲಾಭವನ್ನು ಪಡೆದನು. ಅಪಾರ ಸಂಪತ್ತು, ಶಸ್ತ್ರಾಸ್ತ್ರಗಳು, ಮದ್ದುಗುಂಡುಗಳು, ಬಂದೂಕುಗಳನ್ನು ತನ್ನ ವಶಮಾಡಿಕೊಂಡನು. ಆದರೆ ನಂಜರಾಜಯ್ಯನು ತಾನು ಪಡೆದಸಾಲಕ್ಕೆ ಪ್ರತಿಯಾಗಿ ತಾಲೂಕುಗಳ ಕಂದಾಯ ವಸೂಲಿ ಹಕ್ಕನ್ನು ಸಾಲನೀಡಿದ ವ್ಯಕ್ತಿಗಳಿಗೆ ಬಿಟ್ಟುಕೊಟ್ಟಿದ್ದು ಸಂಪತ್ತು ಬರಿದಾಗಲು ಕಾರಣವಾಯಿತು. ಹೈದರನು ಭಾರತೀಯ ಹಾಗೂ ಯೂರೋಪಿಯನ್ ಯುದ್ಧನೀತಿಗಳ ವ್ಯತ್ಯಾಸವನ್ನು ಬಹುಬೇಗ ಗುರ್ತಿಸಿ ತನ್ನ ಸೈನ್ಯದಲ್ಲಿ ಅಳವಡಿಸಿಕೊಂಡನು.

ದಿಂಡಿಗಲ್ಲಿನ ಆಕ್ರಮಣದ ನಂತರ ಹೈದರನು ತನ್ನ ಸೈನ್ಯದಲ್ಲಿ ಯೂರೋಪಿಯನ್ ಎಂಜನಿಯರ್‌ಗಳಾದ ಫ್ರೆಂಚರನ್ನು ತನ್ನ ಸೈನ್ಯದ ತರಬೇತಿಗಾಗಿ ಬಳಸಿಕೊಂಡನು. ಅಲ್ಲದೆ ಹೈದರನಿಗೆ ಅಧಿಕಾರದ ಬಾಗಿಲು ತೆಗೆದದ್ದು ಇದೇ ದಿಂಡಿಗಲ್ಲಿನ ಪೌಜುದಾರಿಕೆಯ ಕೆಲಸ. ಕ್ರಿ.ಶ. ೧೭೫೭ರ ಅರಮನೆ ಬಂಡಾಯದಲ್ಲಿ ಪಿತೂರಿ ಮತ್ತು ಸಂಚುಗಳು ಉಗ್ರರೂಪವನ್ನು ಪಡೆದುಕೊಂಡವು. ನಂಜರಾಜಯ್ಯನು ತನ್ನ ಅಧಿಕಾರದ ಆಸೆಯಿಂದ ಅರಮನೆಗೆ ಸೈನ್ಯವನ್ನು ನುಗ್ಗಿಸಿದಾಗ ಮರಾಠರು ಕೂಡ ಈ ವೇಳೆಗಾಗಲೇ ಮೈಸೂರಿನ ಮೇಲೆ ಆಕ್ರಮಣ ಮಾಡಿದ್ದರಿಂದ ಕೂಡಲೇ ಹೈದರನು ಹಿಂದಿರುಗಿ ಯುದ್ಧಗಳಲ್ಲಿ ಪಾಲ್ಗೊಳ್ಳುವಂತಾಯಿತು. ಮಲಬಾರ್ ದಂಡಯಾತ್ರೆಯ ಸಮಯದಲ್ಲಿ ಕ್ರಿ.ಶ. ೧೭೫೮ರಲ್ಲಿ ವೇತನ ಕೊಡದೆ ಇದ್ದುದಕ್ಕೆ ಸೈನಿಕರು ದಂಗೆಯೆದ್ದರು. ಸೈನಿಕರು ನಂಜರಾಜಯ್ಯನಿಗೆ ಆಹಾರ ಮತ್ತು ನೀರು ಕೂಡ ಸಂಭರಾಜಾಗದಂತೆ ತಡೆದು ಧರಣಿಕುಳಿತರು. ಖಂಡೇರಾಯನು ತನ್ನ ಅಧಿಕಾರದ ಬಲದಿಂದ ಮೈಸೂರಿನ ದಳವಾಯಿಯಾಗುವಾಗ ಮರಾಠರು ಆಕ್ರಮಣ ಮಾಡಿದ್ದರಿಂದ ಮರಾಠರ ಷರತ್ತುಗಳಿಗೆ ಒಪ್ಪಿಕೊಂಡು ಸಂಧಿಯನ್ನು ಮಾಡಿಕೊಂಡನು. ನಿಜಾಮ್ ಉಲ್ಕ್ ಮುಲ್ಕನ ಮರಣ, ನಾಸಿಕ್‌ಜಂಗ್ ಮತ್ತು ಮುಜಾಫರ್ ಜಂಗನ ನಡುವಿನ ದ್ವೇಷದಲ್ಲಿ ಅನ್ವರುದ್ದೀನನ ಕೊಲೆ, ಚಂದಾಸಾಹೇಬನ ಕೊಲೆ, ನಂಜಯ್ಯರಾಜ ಮತ್ತು ಮಜಮದ್ ಅಲಿ ಇವರ ದುರಾಸೆಗಳು, ಪ್ರಮುಖವಾದ ಕಾರಣಗಳಾಗಿವೆ. ಅಲ್ಲದೆ ಹೈದರಾಬಾದು ಮತ್ತು ಕರ್ನಾಟಿಕ್ ಪ್ರದೇಶಗಳಲ್ಲಿ ಗೊಂದಲ ಹಾಗೂ ಅನಾಯಕತ್ವ, ಮರಾಠರು ಪದೇ ಪದೇ ಆಕ್ರಮಣ ಮಾಡುತ್ತಿದ್ದುದು; ಡೂಪ್ಲೆ ಮತ್ತು ಕ್ಲೈವ್

ಇವರು ನಿರ್ವಹಿಸಿದ ಪಾತ್ರ ಇವೆಲ್ಲವೂ ಹೈದರನ ಪಾಲಿಗೆ ಒದಗಿಬಂದ ಅಪೂರ್ವ ಅವಕಾಶಗಳಾಗಿದ್ದವು. ಸಿರಾ, ದೊಡ್ಡಬಳ್ಳಾಪುರಗಳ ಅಲ್ಲದೆ ಚಿಕ್ಕಬಳ್ಳಾಪುರ ಪೆನುಗೊಂಡ, ಮಡಕಶಿರಾ, ರಾಯದುರ್ಗ ಹರಪನಹಳ್ಳಿ ಪ್ರದೇಶಗಳ ವಿಜಯವು ಹೈದರನನ್ನು ಯುದ್ಧ ತಂತ್ರಗಳಲ್ಲಿ ಅಜೇಯನನ್ನಾಗಿಸಿದವು.

ಬಿದನೂರಿನ ಮೇಲೆ ಹೈದರನ ವಿಜಯದಿಂದ ಹೆದರಿದ ರಾಣಿ ಅರಮನೆಗೆ ತಾನೇ ಬೆಂಕಿ ಹಾಕಿದಳು. ಅಪಾರವಾದ ಸಂಪತ್ತು ಹೈದರನ ಕೈವಶವಾಗುವುದನ್ನು ತಡೆಗಟ್ಟಲು ಅವಳು ಹೀಗೆ ಮಾಡಿದಳು. ಕೆಲವೇ ಸಹಾಯಕರೊಂದಿಗೆ ರಾಣಿ ಕವಲೆದುರ್ಗದ ಮಾರ್ಗವಾಗಿ ಬಲ್ಲಾಳರಾಯನದುರ್ಗಕ್ಕೆ ಹೊರಟಾಗ ಹಿಂಬಾಲಿಸಿ ಸೆರೆಹಿಡಿದು, ಮಧುಗಿರಿ ಕೋಟೆಯಲ್ಲಿ ಬಂಧಿಸಲು ಕರೆತರುವಾಗ ಮಾರ್ಗಮಧ್ಯವೇ ಆಕೆ ಅಸುನೀಗಿದಳು. ಬಿದನೂರಿಗೆ ಹೈದರ್‌ನಗರವೆಂದು ನಾಮಕರಣ ಮಾಡಿ ಅಲ್ಲಿಂದ ಅಪಾರ ಸಂಪತ್ತನ್ನು ಕೊಳ್ಳೆ ಹೊಡೆಯಲಾಯಿತು. ಮಲಬಾರ್‌ನ ಮೇಲಿನ ವಿಜಯದಲ್ಲಿ ಮಲಬಾರಿನ ಪ್ರದೇಶದಲ್ಲಿ ಮಳೆಗಾಲವಾದ್ದರಿಂದ ಯೋಧರು ಹೊದೆಯುವ ಕಂಬಳಿ ಹೊರತು ಬೇರೇನನ್ನೂ ಹೊತ್ತೊಯ್ಯದ ಹಾಗೆ ನಿಯಮವನ್ನು ವಿಧಿಸಲಾಯಿತು. ಮಾಪಿಳ್ಳೆಗಳ ಜನರಲ್ಲಿ ಭೀತಿಯ ಅಲೆ ಹಾಯುವಂತೆ ಮಾಡಿ ಇನ್ನೊಮ್ಮೆ ತಾನಿಲ್ಲದಾಗ ಯಾರೂ ತನ್ನ ವಿರುದ್ಧ ದಂಗೆಯೇಳದಂತೆ ಮಾಡಿದನು. ಇದಕ್ಕೆ ಮಾಪಿಳ್ಳೆ ಜನರ ಸ್ಥಳವಾಗಿದ್ದ ಮಂಜೇರಿಯನ್ನು ಕೇಂದ್ರವಾಗಿ ಮಾಡಿಕೊಂಡನು. ಮಾದಣ್ಣ ಮತ್ತು ರಾಜಾಸಾಹೇಬನನ್ನೂ ಎದುರು ಮಾತನಾಡಿದವರ ತಲೆಕಡಿಯುವಂತೆ ಆಜ್ಞಾಪಿಸಿ ಜನರು ಭಯಬೀಳುವಂತೆ ಮಾಡಿದನು.

ಬ್ರಿಟಿಷರೊಂದಿಗೆ ನಡೆದ ಒಂದನೆಯ ಆಂಗ್ಲೋ-ಮೈಸೂರು ಯುದ್ಧ (ಕ್ರಿ.ಶ.೧೭೬೭-೬೯)ವು ಮದ್ರಾಸ್ ಒಪ್ಪಂದದೊಂದಿಗೆ ಕೊನೆಯಾಯಿತು. ಇದೊಂದು ಅನುಚ್ಛೇದಗಳು ದಾಖಲೆಯಾಗಿತ್ತು. ಈ ಯುದ್ಧದ ಪರಿಣಾಮದಿಂದ ಆಂಗ್ಲರಲ್ಲಿ ಹಣಕಾಸಿನ ಮುಗ್ಗಟ್ಟು ಎದುರಾಯಿತು. ಮರಾಠರ ಸಮಸ್ಯೆ ಮತ್ತು ಹೈದರಾಬಾದ್‌ನ ಸಮಸ್ಯೆಗಳಿಂದಾಗಿ ಬಂಗಾಳದ ನೆರವು ಅನಿಶ್ಚಿತವಾಗಿತ್ತು. ಮದ್ರಾಸು ಸರ್ಕಾರವು ಶೇಕಡಾ ೮ರಷ್ಟು ಬಡ್ಡಿಯ ಮೇಲೆ ಸಾಲವನ್ನು ಪಡೆದು ಸಾಲದ ಸುಳಿಯಲ್ಲಿ ಸಿಲುಕಿಕೊಂಡಿತು. ಮದ್ರಾಸಿನ ಸೈನ್ಯದ ಪರಿಸ್ಥಿತಿಯು ತೃಪ್ತಿಕರವಾಗಿರಲಿಲ್ಲ. ಅಶ್ವದಳದಲ್ಲಿ ಇದು ಹಿಂದುಳಿದಿತ್ತು. ಇದರಿಂದ ಮರಾಠರ ೩,೦೦೦ ಅಶ್ವದಳವನ್ನು ಬಾಡಿಗೆ ಪಡೆದುಕೊಂಡಿತ್ತು. ಅನಾರೋಗ್ಯ, ಬಳಲಿಕೆ, ಪಕ್ಷಾಂತರಗಳಿಂದ ಪದಾತಿ ದಳವು ಅತ್ಯಂತ ದುರ್ಬಲವಾಯಿತು. ಆಹಾರ ಸಾಮಗ್ರಿಗಳ ಕೊರತೆ ಉಂಟಾಯಿತು. ಹೈದರನಿಗೆ ಎದುರಾಗಿ ನಿಂತು ಇಂಗ್ಲಿಷರು ಸಾಧಿಸಿದ್ದಕ್ಕಿಂತ ಕಳೆದುಕೊಂಡದ್ದೇ ಹೆಚ್ಚು. ಭಾರತೀಯ ಶಕ್ತಿಯು ಯೂರೋಪಿಯನ್ ಶಕ್ತಿಗೆ ಷರತ್ತುಗಳನ್ನು ವಿಧಿಸುವ ದಯನೀಯ ಸ್ಥಿತಿಗೆ ಇಳಿಯಿತು. ಹಣಕಾಸು ಬರಿದಾಗಿ, ಆಗಾಧ ಯೋಜನೆಗಳು ಕುಸಿದು ಬಿದ್ದು, ನೈತಿಕ ಸ್ಥೈರ್ಯವನ್ನು ಕಳೆದುಕೊಂಡಿತು. ಯುದ್ಧ ಮುಗಿಯುವ ವೇಳೆಗೆ ಮದರಾಸು ಹತಾಶ ಸ್ಥಿತಿಯನ್ನು ತಲುಪಿತು. ಮಾರ್ಟಿನ್

ಗುಡ್‌ಲ್ಯಾಂಡ್ ಹೇಳುವಂತೆ ಮೈಸೂರು ರಾಜ್ಯವನ್ನು ಬಾಗಿಲಲ್ಲಿ ಶಾಂತಿಸಮಾಧಾನ ಮಾಡಿಕೊಳ್ಳುವ ದುಸ್ಥಿತಿ ಬರುತ್ತದೆಂದು ಯಾರು ಎಣಿಸಿದ್ದರು? ಸಮೃದ್ಧ ಬಂಡವಾಳ ಹೂಡಿಕೆ, ತುಂಬಿರುವ ಖಜಾನೆಗಳ ಬದಲಾಗಿ ಈಗ ನಾವು ನಮ್ಮ ಸೈನ್ಯವನ್ನು ಸಾಕವುದೂ ಕೂಡ ದುಸ್ತರವಾಗಿದೆ. ಕೊರಳುದ್ದುದ ಸಾಲದಲ್ಲಿ ನಾವು ಮುಳುಗಿದ್ದೇವೆ[೨೮] ಎಂದು ಬ್ರಿಟಿಷ್ ಅಧಿಕಾರಿಯು ಪಾಕ್ ಎಂಬಾತನಿಗೆ ಬರೆದ ಪತ್ರದ ಸಾರಾಂಶವಾಗಿದೆ.

ಎರಡನೇ ಆಂಗ್ಲೋ-ಮೈಸೂರು ಯುದ್ಧ (ಕ್ರಿ.ಶ.೧೭೮೩-೧೭೮೪)ದಲ್ಲಿ ಹೈದರನು ಯುದ್ಧ ಬೆನ್ನು ಪಣಿ ರೋಗದಿಂದ ಮರಣಹೊಂದಿದನು. ಯುದ್ಧಕಾಲ ಪೂರ್ತಿಯಾಗಿ ಮದ್ರಾಸಿನ ಆಂಗ್ಲ ಸರ್ಕಾರವು ಭಿನ್ನಮತದ ಗೊಂದಲದಲ್ಲೇ ಇದ್ದಿತು. ಆದರೂ ಯುದ್ಧವು ೧೫ ತಿಂಗಳುಗಳ ಕಾಲ ಮುಂದುವರೆಯಿತು. ಟಿಪ್ಪುವು ದೂರದ ಪಶ್ಚಿಮ ಕರಾವಳಿಯಲ್ಲಿರುವಾಗ ಬ್ರಿಟಿಷರು ಮೈಸೂರಿನ ಸೈನ್ಯದ ಮೇಲೆ ದಿಢೀರನೆ ದಾಳಿಮಾಡುವ ಅವಕಾಶವನ್ನು ಕಳೆದುಕೊಂಡರು. ಮೆಕಾರ್ಟ್ನೆ ವೇಗದ ಕಾರ್ಯಾಚರಣೆಗೆ ಒತ್ತಾಯಿಸಿದರೆ ಸ್ಟುಯರ್ಟ್ ಅದನ್ನು ವಿರೋಧಿಸಿದನು. ಭಾರತೀಯ ಅರಸನೊಬ್ಬ ಸತ್ತರೆ ವಾರಸುದಾರಿಕೆಗಾಗಿ ಕಲಹವು ಉದ್ಭವಿಸುತ್ತದೆ. ಆದರೆ ಟಿಪ್ಪು ಮೈಸೂರಿನ ವಾರಸುದಾರಿಕೆಯನ್ನು ವಹಿಸಿಕೊಂಡನು. ಫ್ರೆಂಚರೊಂದಿಗೆ ಸಂಬಂಧಗಳನ್ನು ಉತ್ತಮಪಡಿಸಿಕೊಂಡನು. ಕ್ರಿ.ಶ.೧೭೮೩ರಲ್ಲಿ ಬುಸ್ಸಿ ಭಾರತಕ್ಕೆ ಬಂದುದರ ಸಂಪೂರ್ಣ ಲಾಭವನ್ನು ಟಿಪ್ಪು ಉಪಯೋಗಿಸಿಕೊಂಡನು. ಆದರೆ ಆಂಗ್ಲರು ತಮ್ಮ ಸಾರಿಗೆ ಸಾಮಾಗ್ರಿಗಳ ಪೂರೈಕೆಯ ಅಡ್ಡಿಗಳನ್ನು ನಿವಾರಿಸಿಕೊಳ್ಳಲಿಲ್ಲ. ಮದ್ರಾಸ್‌ನ ಗೊಂದಲದ ಪರಿಸ್ಥಿತಿಯನ್ನು ಟಿಪ್ಪು ಸಂಪೂರ್ಣವಾಗಿ ಬಳಸಿಕೊಂಡನು. ಕ್ರಿ.ಶ. ೧೭೮೩ರಲ್ಲಿ ಟಿಪ್ಪುವಿನ ವಿರುದ್ದ ಮರಾಠರೊಂದಿಗೆ ಬ್ರಿಟಿಷರು ಒಪ್ಪಂದವನ್ನು ಮಾಡಿಕೊಂಡರು. ಇದು ಗಂಭೀರವಾದ ಪರಿಣಾಮವಾಗಿತ್ತು. ಮುಂದೆ ಎದುರಾಗುವ ಅಪಾಯವನ್ನು ಟಿಪ್ಪು ಮೊದಲೇ ಗ್ರಹಿಸಿದ್ದನು. ಇದರಿಂದ ಮಂಗಳೂರು ಒಪ್ಪಂದವಾಗಿ ಪರಸ್ಪರರು ಸೆರೆಯಾಳುಗಳನ್ನು ಬಿಡುಗಡೆ ಮಾಡಲು ಅವಕಾಶ ಕಲ್ಪಿಸಲಾಯಿತು.

ಮೂರನೆಯ ಆಂಗ್ಲೋ-ಮೈಸೂರು ಯುದ್ಧ (ಕ್ರಿ.ಶ.೧೭೯೦-೧೭೯೨)ದಲ್ಲಿನ ಯುದ್ಧದ ಪರಿಣಾಮಗಳ ಟಿಪ್ಪುವಿನ ವಿರುದ್ಧವಾಗಿದ್ದವು. ಬೆಂಗಳೂರು ಇಂಗ್ಲಿಷರ ವಶವಾದ ಮೇಲೆ ಶ್ರೀರಂಗಪಟ್ಟಣದ ಮೇಲೆ ದಾಳಿಮಾಡಿದಾಗ ಟಿಪ್ಪುವಿಗೆ ಕೇವಲ ಎರಡುದಾರಿಗಳಿದ್ದವು. ಒಂದು ಶಾಂತಿ ಒಪ್ಪಂದ ಮತ್ತೊಂದು ಕೊಯಮತ್ತೂರಿನಲ್ಲಿ ಸೆರೆಹಿಡಿದಿದ್ದ ಯುದ್ಧಕೈದಿಗಳನ್ನು ಬಿಡುಗಡೆ ಮಾಡುವುದು. ಆದರೆ ಟಿಪ್ಪು ಶಾಂತಿಯನ್ನು ಬಯಸಿದನು. ಶಾಂತಿಯಿಂದ ತನಗಾದ ನಷ್ಟವನ್ನು ತುಂಬಿಕೊಳ್ಳಬಹುದೆಂಬ ಆಲೋಚನೆಯು ಟಿಪ್ಪುವಿಗೆ ಹೊಳೆದದ್ದು ಕಾರಣವಾಗಿರಬೇಕು. ಟಿಪ್ಪುವಿನ ಇಬ್ಬರು ರಾಯಭಾರಿಗಳಾಗಿದ್ದ ಗುಲಾಂ ಅಲಿಖಾನ್ ಮತ್ತು ಅಲಿರೇಜ ಎಂಬುವ ವಕೀಲರನ್ನು ಆಹ್ವಾನಿಸಿದನು. ಕಾರನ್ ವಾಲೀಸ್‌ನ ಷರತ್ತುಗಳು ಅತ್ಯಂತ ಕಠಿಣವಾಗಿದ್ದವು. ಮೂರುಕೋಟಿ ಆದಾಯ ಬರುವ ಪ್ರದೇಶವನ್ನು ಬಿಟ್ಟುಕೊಡಬೇಕು ಎಂಟುಕೋಟಿ ರೂ.ಗಳ ಯುದ್ಧನಷ್ಟವನ್ನು ತುಂಬಿಕೊಡಬೇಕು. ಅಲ್ಲದೆ ಹಣ ತಮ್ಮ ಕೈಸೇರುವವರೆಗೆ ಟಿಪ್ಪುವಿನ ಇಬ್ಬರು ಮಕ್ಕಳನ್ನು ತನ್ನ

ಬಳಿ ಒತ್ತೆಯಾಳುಗಳಾಗಿಡಬೇಕೆಂಬ ಷರತ್ತುಗಳನ್ನು ಕಾರ್ನ್‌ವಾಲೀಸನು ಮಂಡಿಸಿದನು. ಆದರೆ ಅಲ್ಲಿ ಚೌಕಾಸಿ ಪ್ರಾರಂಭವಾಗಿ ಆರುಕೋಟಿ ಯುದ್ಧನಷ್ಟದ ಪರಿಹಾರ ನೀಡಬೇಕೆಂದು ಬಿಗಿಪಟ್ಟು ಹಿಡಿದ ಆದರೆ ಅದು ಅಂತ್ಯದಲ್ಲಿ ಮೂರುಕೋಟಿಗಳಿಗೆ ಇಳಿಯಿತು. ಅರ್ಧರಾಜ್ಯವನ್ನು ಬಿಟ್ಟು ಕೊಡಬೇಕಾಯಿತು. ಇದು ಟಿಪ್ಪುವನ್ನು ಯುದ್ಧರಂಗಕ್ಕೆ ಆಹ್ವಾನಿಸುವಂತಿತ್ತು. ಅಲ್ಲದೆ ಮಿತ್ರ ಕೂಟದ ಅಧಿಕಾರಿಗಳ ದರ್ಬಾರಿನ ಖರ್ಚಾಗಿ ಮುವ್ವತ್ತು ಲಕ್ಷರೂಗಳನ್ನು ಕೊಡಬೇಕೆಂಬ ಷರತ್ತುಗಳಿಗೆ ಒಪ್ಪಲಾಯಿತು. ಇದರೊಂದಿಗೆ ತಾತ್ಕಾಲಿಕ ಶಾಂತಿಒಪ್ಪಂದಕ್ಕೆ ಸಹಿಹಾಕಲಾಯಿತು. ಇದರಿಂದ ತೊಂದರೆಗಳು ಉದ್ಭವಿಸಿದವು. ಟಿಪ್ಪು ತನ್ನ ಆಯವ್ಯಯದ ಪಟ್ಟಿಯನ್ನು ಇಂಗ್ಲಿಷರ ಮುಂದಿಟ್ಟಾಗ ಅರ್ಧರಾಜ್ಯದ ಯಾವ ಭಾಗವನ್ನು ತೆಗೆದುಕೊಳ್ಳಬೇಕೆಂಬುದರ ಬಗ್ಗೆ ಇಂಗ್ಲಿಷರು ಅತೃಪ್ತರಾದರು. ಟಿಪ್ಪುವಿನ ಲೆಕ್ಕಾಚಾರಗಳನ್ನು ತಿರಸ್ಕರಿಸಿ ಬಾರಾಮಹಲ್, ಸೇಲಂ, ದಿಂಡಿಗಲ್, ಕಲ್ಲಿಕೋಟೆ, ಕರೂರು, ಧಾರಾಪುರಂ, ಕೊಡಗುಗಳು ಆಂಗ್ಲರಿಗೂ; ಬಸವಾಪಟ್ಟಣ, ಚಿತ್ರದುರ್ಗ, ರಾಯದುರ್ಗ, ಹರಪನಹಳ್ಳಿಗಳು ಮರಾಠರಿಗೂ ಸೇರಬೇಕೆಂದು ತೀರ್ಮಾನಿಸಲಾಯಿತು. ಕೊಡಗು ಸೇರಿದ್ದರಿಂದ ಟಿಪ್ಪುವಿಗೆ ಅಸಮಾಧಾನವಾಯಿತು. ಟಿಪ್ಪುವಿಗೆ ಈ ಒಪ್ಪಂದವು ಅಪಾರ ನಷ್ಟವನ್ನು ಉಂಟುಮಾಡಿತು.[೨೯] ಏಕೆಂದರೆ ಯುದ್ಧದಿಂದ ಅವನ ಆರ್ಥಿಕ, ಪ್ರಾದೇಶಿಕ ಮತ್ತು ಮಿಲಿಟರಿ ಸಮತೋಲನದಲ್ಲಿ ಏರುಪೇರುಂಟಾಯಿತು. ಹೈದರನು ಪ್ರಾಬಲ್ಯಕ್ಕೆ ಬಂದ ಕಾಲದಿಂದ ಮೈಸೂರು ಹಿಂದೆಂದೂ ಇಂತಹ ತೀವ್ರ ಆಘಾತವನ್ನು ಅನುಭವಿಸಿರಲಿಲ್ಲ.

ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧ (ಕ್ರಿ.ಶ.೧೭೯೨-೧೭೯೯)ವು ಟಿಪ್ಪುವಿನ ಮರಣದೊಂದಿಗೆ ಕ್ರಿ.ಶ.೧೭೯೯ರಲ್ಲಿ ಅಂತ್ಯವಾಯಿತು. ಟಿಪ್ಪು ಮಡಿದ ಮೇಲೆ ಮಿತ್ರಪಕ್ಷಕ್ಕೆ ಅನೇಕ ಸಮಸ್ಯೆಗಳು ಎದುರಾದವು. ಒಂದು ಕಡೆ ಸಮೃದ್ಧ ಹಾಗೂ ವಿಸ್ತಾರವಾದ ರಾಜ್ಯವನ್ನು ಕಬಳಿಸಬೇಕೆಂಬ ರಾಜ್ಯದಾಹ ಹುಟ್ಟಿಕೊಂಡಿತು. ಆದರೆ ಮತ್ತೊಂದೆಡೆ ಅಂತಹ ಧೋರಣೆಯಿಂದ ಉಳಿದ ಭಾರತೀಯ ಅರಸರಲ್ಲಿ ಉಂಟಾಗಬಹುದಾದ ಅಸೂಯೆಯ ಬಗ್ಗೆಯೂ ಆಂಗ್ಲರ ಗಮನ ಹೋಯಿತು. ಆದ್ದರಿಂದ ರಾಜ್ಯವನ್ನು ಹಂಚಿಕೊಳ್ಳುವುದೇ ಸಮಸ್ಯೆಗೆ ಸೂಕ್ತವಾದ ಪರಿಹಾರವೆಂದು ಆಂಗ್ಲರು ಮನಗಂಡರು. ಮೈಸೂರಿನ ರಾಜವಂಶವನ್ನು ಪುನಃ ಸ್ಥಾಪಿಸಬೇಕಾದದ್ದು ಪ್ರಮುಖ ಕರ್ತವ್ಯವಾಗಿತ್ತು. ನಿಜಾಮನಿಗೆ ಸಮಪಾಲು ನೀಡಲು ಇಂಗ್ಲಿಷರು ತಯಾರಿರಲಿಲ್ಲ. ಏಕೆಂದರೆ ಅವನು ಮಿತಿಮೀರಿ ಬಲಿಷ್ಠನಾಗುವ ಸಂಭವವಿದ್ದಿತು. ತಮ್ಮ ತಂದೆಯ ಕ್ರೂರ ಮರಣ ಮತ್ತು ವಿದೇಶಿಯರಿಗೆ ರಾಜಕೀಯವಾಗಿ ಅಧೀನರಾಗಿರುವುದು ಟಿಪ್ಪುವಿನ ಮಕ್ಕಳಿಗೆ ಇಷ್ಟವಿರಲಿಲ್ಲ.[೩೦] ಆದ್ದರಿಂದ ಮೈಸೂರಿನ ಅರಸು ಕುಡಿಗಳನ್ನು ಪುನಃ ಅಧಿಕಾರಕ್ಕೆ ತರುವುದರಿಂದ ಬ್ರಿಟಿಷರಿಗೆ ರಾಜಕೀಯವಾಗಿ ಅನೇಕ ಆರ್ಥಿಕ ಲಾಭಗಳಿದ್ದವು. ಆದ್ದರಿಂದ ಮೈಸೂರಿನ ವ್ಯವಹಾರಗಳನ್ನು ನೋಡಿಕೊಳ್ಳಲು ಒಂದು ಸಮಿತಿಯನ್ನು ರಚಿಸಲಾಯಿತು. ಜನರಲ್ ಹ್ಯಾರಿಸ್, ಕರ್ನಲ್ ವೆಲ್ಲಸ್ಲಿ, ಹೆನ್ರಿವೆಲ್ಲೆಸ್ಲಿ, ಲೆಫ್ಟಿನೆಂಟ್ ಕರ್ನಲ್ ವಿಲಿಯಂ ಕರ್ಕ್ ಪ್ಯಾಟ್ರಿಕ್ ಮತ್ತು ಕರ್ನಲ್ ಬ್ಯಾರಿಕ್ಲೋಸ್ ಈ ಸಮಿತಿಯ ಸದಸ್ಯರಾಗಿದ್ದರು. ಎರಡು ಒಪ್ಪಂದಗಳು ಏರ್ಪಟ್ಟವು

ಒಂದು ಕಂಪನಿ ಮತ್ತು ನಿಜಾಮನ ನಡುವೆ ಎರಡು ಮೈಸೂರು ಕಂಪನಿಯ ನಡುವೆ ಒಟ್ಟು ಮುವ್ವತ್ತು ಒಂಬತ್ತುವರೆ ಲಕ್ಷ ಆದಾಯವಿದ್ದ ಪ್ರಮೇಯದಲ್ಲಿ ಕಂಪನಿಗೆ ೬೦.೯ಲಕ್ಷ ಪಗೋಡಗಳ ಆದಾಯವಿರುವ ೧/೬ ಭಾಗದ ಪಾಲು ದೊರೆಯಿತು. ನಿಜಾಮನಿಗೆ ಇದಕ್ಕಿಂತ ಕಡಿಮೆ ಆದಾಯ ದೊರಕಿತು. ಮೈಸೂರು ಅರಸನಿಗೆ ೧೩.೫ಲಕ್ಷ ರೂಪಾಯಿಗಳ ಉತ್ಪನ್ನದ ಪ್ರದೇಶವೂ ಮರಾಠರಿಗೆ ೨.೫ಲಕ್ಷ ರೂ.ಗಳ ಉತ್ಪನ್ನದ ಪ್ರದೇಶ ಕೈಸೇರಿತು. ಮೈಸೂರು ರಾಜ್ಯದ ಮೇಲೆ ಕಂಪನಿ ಮಾತ್ರ ಸಾರ್ವಭೌಮಾಧಿಕಾರವನ್ನು ಹೊಂದಿದ್ದು ಸಹಾಯಕ ಸೈನ್ಯಪದ್ಧತಿಗೆ ಸಹಿಯನ್ನು ಹಾಕಿತು. ಈ ಒಪ್ಪಂದದ ಪ್ರಕಾರ ಆಕಸ್ಮಿಕವಾಗಿ ರಾಜ್ಯದಲ್ಲಿ ಸಿಂಹಾಸನಕ್ಕಾಗಿ ದಂಗೆಗಳು, ಆಂತರಿಕ ಕಲಹಗಳು ಏರ್ಪಟ್ಟರೆ ಸಂಸ್ಥಾನವು ಬ್ರಿಟಿಷರ ನೇರ ಆಳ್ವಿಕೆಗೆ ಒಳಪಡುವುದು ಎಂಬ ಷರತ್ತುಗಳ ಮೇರೆಗೆ ಮೈಸೂರನ್ನು ರಾಜಮನೆತನದವರೆಗೆ ಹಿಂದಿರುಗಿಸಲಾಯಿತು.

ಟಿಪ್ಪುವಿನ ಮರಣಾನಂತರ ಮುಮ್ಮಡಿಕೃಷ್ಣರಾಜ ಒಡೆಯರ ಕ್ರಿ.ಶ.೧೮೩೦-೧೮೩೪ರವರೆಗೆ ಸುಮಾರು ಐದು ವರ್ಷಗಳಕಾಲ ನಡೆದ ನಗರ ಪ್ರಾಂತ್ಯದ ರೈತ ಹೋರಾಟವು ಒಂದು ಇತಿಹಾಸವನ್ನೇ ಸೃಷ್ಟಿಸಿತು. ಇಂತಹ ಸುಧೀರ್ಘ ಚಳುವಳಿಯು ಅಂದಿನ ವರ್ಷಗಳಲ್ಲಿ ಇನ್ನೆಲ್ಲಿಯೂ ನಡೆದಿರುವಂತಹ ಆಧಾರಗಳಿಲ್ಲ. ಬೂದಿಬಸಪ್ಪ ನಾಯಕನು ರೈತರನ್ನು ಸಂಘಟಿಸಿ ಹೋರಾಟಕ್ಕೆ ಸಜ್ಜುಗೊಳಿಸಿದನು. ಬಂಡಾಯವು ಕೇವಲ ಮೈಸೂರಿಗೆ ಮಾತ್ರ ಸೀಮಿತವಾಗಿರದೆ ಮದ್ರಾಸ್ ಮತ್ತು ಬೊಂಬಾಯಿ ಪ್ರಾಂತ್ಯಗಳಿಗೂ ಹರಡಿದ ರೀತಿ ಅಪೂರ್ವವಾಗಿತ್ತು. ಇದರಿಂದ ಮೈಸೂರು ಆಡಳಿತವು ಶಿಥಿಲಾವಸ್ಥೆಗೆ ತಲುಪಿತ್ತು. ರೈತರು ಕೆಳದಿಯ ಅರಸ ಬೂದಿಬಸಪ್ಪನೆಂದು ಆತನೇ ನಮಗೆ ಅರಸನೆಂದು ಸಹಾಯ ಮಾಡಿದರು. ಸೈನ್ಯಕ್ಕೆ ಬೇಕಾದ ಶಸ್ತ್ರಾಸ್ತ್ರಗಳನ್ನೆಲ್ಲಾ ಪೂರೈಸಿದರು. ಆದರೆ ರೈತರ ಸಂಘಟನೆಯಲ್ಲಿ ಯಶಸ್ವಿಯಾದ ಬಸಪ್ಪನಾಯಕನು ರಾಜ್ಯವಾರ ಸ್ಥಾಪನೆಯ ಯತ್ನದಲ್ಲಿ ವಿಫಲನಾದರೂ ಅವನ ಸಂಘಟನೆಯ ಶಕ್ತಿಯನ್ನು ಮೆಚ್ಚಲೇಬೇಕು. ಬ್ರಿಟೀಷರ ಪ್ರಬಲ ಶಕ್ತಿಯ ವಿರುದ್ಧವಾಗಿ ಹೋರಾಡುವುದು ಅಸಾಧ್ಯವೆಂದು ತಿಳಿದಿದ್ದರೂ ಇಂತಹ ವಿಫಲ ಸಾಹಸಕ್ಕೆ ಸಕ್ರೀಯವಾಗಿ ಭಾಗವಹಿಸಲಿಲ್ಲ. ನಗರ ಪ್ರಾಂತ್ಯವನ್ನು ಬಿಟ್ಟು ದೂರದ ರಾಣಿಬೆನ್ನೂರಿನಿಂದ ನೀಡುತ್ತಿದ್ದ ಆದೇಶಗಳು ಸಫಲವಾಗಲಿಲ್ಲ. ರೈತ ಚಳುವಳಿಯ ಬಗ್ಗೆ ಸರಿಯಾದ ಮಾಹಿತಿಯು ದೊರೆಯುತ್ತಿರಲಿಲ್ಲ. ಕೇವಲ ಒಂದು ಬಾರಿ ಮಾತ್ರ ಸೈನ್ಯದೊಂದಿಗೆ ಕಾಣಿಸಿಕೊಂಡಿದ್ದ ನಾಯಕನು ಯುದ್ಧ ಮಾಡದೇ ಇದ್ದಕ್ಕಿದ್ದಂತೆ ಹಿಂತಿರುಗಿದ ಕಾರಣವು ತಿಳಿಯಲಿಲ್ಲ. ಮತ್ತೆ ಅವನನ್ನು ನೋಡುವುದು ದುರ್ಬಲವಾಗಿತ್ತು. ಚಳುವಳಿಯು ಶಾಂತವಾದರೂ ಅವನ ಸುಳಿವು ಸಿಗಲಿಲ್ಲ. ಆದರೂ ರೈತರು ಧೈರ್ಯದಿಂದ ಮುನ್ನುಗ್ಗಿ ಸಾವು ಬದುಕಿನ ಹೋರಾಟ ನಡೆಸಿದರು. ತಮ್ಮ ಸಮಸ್ಯೆಗಳು ಪರಿಹಾರವಾದೀತೆಂದು ನಂಬಿದ್ದರು. ತರಿಕೆರೆಯ ಪಾಳೆಯಗಾರನಿಂದ ಈ ಚಳುವಳಿಗೆ ಮತ್ತಷ್ಟು ಶಕ್ತಿತುಂಬಿತ್ತು. ರೈತರು ಉತ್ಸಾಹ ಶಾಲಿಗಳಾಗಿದ್ದರು. ಕೆಳದಿ ಸಂಸ್ಥಾನದ ಅರಸುವಂಶದ ನರಗುಂದದ ನಾಯಕನು ಈಸ್ಟ್ ಇಂಡಿಯಾ ಕಂಪನಿಯವರಿಂದ ಏನನ್ನೂ ಪಡೆಯಲು ಸಾಧ್ಯವಾಗದೆ ಪರಿತಪಿಸುವಂತಾಯಿತು.

ಇದೇ ಕಾಲದಲ್ಲಿ ದರೋಡೆಕೋರರು ಹೆಚ್ಚುತ್ತಿದ್ದರು. ಇವರನ್ನು ತಮ್ಮ ಕೂಟದಿಂದ ಬೇರ್ಪಡಿಸಲು ರೈತರಿಂದ ಸಾಧ್ಯವಾಗಲಿಲ್ಲ. ದೀರ್ಘಕಾಲದ ಚಳುವಳಿಯಿಂದ ಬೇಸಾಯಕ್ಕೆ ದಕ್ಕೆಯಾಯಿತು. ರೈತರು ಹಸಿವಿನಿಂದ ಬಳಲುತ್ತಿದ್ದರು. ಇವರ ಕುಟುಂಬದವರು ನಿರ್ಗತಿಕರಾದರು. ತಮ್ಮ ನಾಯಕನನ್ನು ಕಳೆದುಕೊಂಡು ಅನಾಥರಾದ ರೈತರು ಬಂಡಾಯವನ್ನು ನಿಲ್ಲಿಸಿದರು. ಪೌಜುದಾರರೂ ಬಂಡಾಯಗಾರರ ವಿರುದ್ಧ ಬಿಗಿಯಾದ ಕ್ರಮಕೈಗೊಳ್ಳಲಿಲ್ಲ. ಅಮಲ್ದಾರರೂ, ಪಟೇಲರೂ, ಶಾನುಭೋಗರೂ ಮತ್ತು ಇತರೆ ಸರ್ಕಾರಿ ಅಧಿಕಾರಿಗಳು ಈ ಚಳುವಳಿಗೆ ಬೆಂಬಲನೀಡಿದರು. ಸರ್ಕಾರವು ರೈತರಿಗೆ ನೀಡಿದ್ದ ಆಶ್ವಾಸನೆಗಳನ್ನು ಕಾರ್ಯರೂಪಕ್ಕೆ ತರಲಿಲ್ಲ. ಗೇಣಿದಾರರ ಮತ್ತು ಭೂಮಾಲೀಕರ ನಡುವೆ ಮತ್ತೆ ಘರ್ಷಣೆ ನಡೆಯುತ್ತಿತ್ತು. ಇವರ ವಿರುದ್ಧವಾಗಿ ನಡೆದರೆ ಒಕ್ಕಲೆಬ್ಬಿಸಿ ಎಲ್ಲಿಯಾ ಕೆಲಸ ಸಿಗದಂತೆ ಮಾಡುತ್ತಿದ್ದರು. ಉಳುವವನಿಗೆ ಸ್ವಂತ ಭೂಮಿಯು ಸಿಗಲಿಲ್ಲ. ರೈತರು ಮತ್ತೆ ನರಕಯಾತನೆಯನ್ನು ಅನುಭವಿಸುತ್ತಾ ನೋವನ್ನು ನುಂಗುತ್ತಿದ್ದರು. ಆದರೆ ದಂಗೆಯ ಪರಿಣಾಮವಾಗಿ ಇವರಲ್ಲಿ ಜಾಗೃತಿ ಮೂಡಿತ್ತು.[೩೧] ಮೈಸೂರು ಸರ್ಕಾರವು ಯಾವುದೇ ಸುಧಾರಣೆಯನ್ನು ಕೈಗೊಳ್ಳಲಿಲ್ಲ. ಖಜಾನಕೆಯು ಬರಿದಾಗಿತ್ತು. ಇದರಿಂದ ಅಭಿವೃದ್ಧಿ ಕಾರ್ಯಗಳು ನಡೆಸಲಾಗಲಿಲ್ಲ. ಕಂಪನಿಗೆ ತಲುಪಬೇಕಾಗಿದ್ದ ಪೊಗದಿಯೂ ಸರಿಯಾದ ಸಮಯಕ್ಕೆ ತಲುಪದೆ ಲಕ್ಷಾಂತರ ರೂಪಾಯಿಗಳು ಬಾಕಿಯಿದ್ದಿತು. ಇದನ್ನು ಮನಗಂಡ ಬ್ರಿಟೀಷ್ ರೆಸಿಡೆಂಟನು ಮದ್ರಾಸ್ ಪ್ರಾಂತ್ಯದಲ್ಲಿ ವಿಲೀನಗೊಳಿಸುವುದು ಸೂಕ್ತವೆಂದು ಗವರ್ನರ್ ಜನರಲ್‌ಗೆ ಸಲಹೆ ನೀಡಿದ್ದನು. ಆದರೆ ಸಹಾಯಕ ಸೈನ್ಯ ಪದ್ಧತಿಯ ನಿಯಮಗಳಂತೆ ಈಸ್ಟ್ ಇಂಡಿಯಾ ಕಂಪನಿಯು ಅರಸರಿಗೆ ಆಡಳಿತವನ್ನು ವಹಿಸಿಕೊಟ್ಟಿದೆ. ಇದನ್ನು ರದ್ದುಪಡಿಸಿ ಇನ್ನೊಂದು ಪ್ರಾಂತ್ಯದಲ್ಲಿ ಇದನ್ನು ವಿಲೀನಗೊಳಿಸಿದರೆ ನಿಯಮ ಬಾಹಿರವಾಗುತ್ತದೆ. ಸಂಪದ್ಭರಿತವಾದ ಈ ಸಂಸ್ಥಾನವನ್ನು ಹಾಗೆಯೇ ಉಳಿಸಿಕೊಳ್ಳಬೇಕು ಎಂದು ಮುಮ್ಮಡಿ ಕೃಷ್ಣರಾಜ ಒಡೆಯರು ಮನವಿಗಳನ್ನು ಸಲ್ಲಿಸುತ್ತಿದ್ದರು. ಗವರ್ನರ್ ಜನರಲ್ ವಿಲಿಯಂ ಬೆಂಟಿಂಕನು ಮಹಾರಾಜರ ಮನವಿಯನ್ನು ಮನ್ನಿಸಿದನು.

ಹೀಗೆ ಮೈಸೂರು ಒಡೆಯರ ಕಾಲದಲ್ಲಿ ಯುದ್ಧಗಳು ನೀಡಿದ ಫಲಿತಾಂಶಗಳು ಮೈಸೂರು ಸಾಮ್ರಾಜ್ಯವು ಬ್ರಿಟೀಷರ ಕಾಲದಲ್ಲಿ ವಸಾಹತು ಸಂಸ್ಥಾನವಾಗಿ ಹೋರಾಡಿದ ಮತ್ತು ಅದು ಉಂಟು ಮಾಡಿದ ಪರಿಣಾಮಗಳನ್ನು ಆಯಾಯ ಕಾಲಘಟ್ಟದಲ್ಲಾದ ಯುದ್ಧಗಳಿಂದ ತಿಳಿದುಬರುತ್ತದೆ.

**ಅಡಿ ಟಿಪ್ಪಣಿಗಳು**

೧. ಸೋಮಶೇಖರ್ ಎಸ್.ವೈ., ೨೦೦೯, ವಿಜಯನಗರ ಕಾಲದ ಸೈನಿಕ ವ್ಯವಸ್ಥೆ ಮತ್ತು ಯುದ್ಧ ನೀತಿ, ಪು.ಸಂ.೧೭೦
೨. ಅದೇ, ಪು.ಸಂ.೧೭೦-೧೭೧
೩. ಅದೇ, ಪು.ಸಂ.೧೭೩
೪. ಅದೇ, ಪು.ಸಂ. ೧೭೩
೫. ಅದೇ, ಪು.ಸಂ.೧೭೪
೬. ಸುರೇಂದ್ರನಾಥ ಸೇನ್ (ಮೂಲ) ಅನಂತರಾಮಯ್ಯ ಅಖು.ಎಲ್.(ಅನು)., ೨೦೧೨, ಮರಾಠರ ಆಡಳಿತ ವ್ಯವಸ್ಥೆ ಸಂಪುಟ-೧, ಪು.ಸಂ. ೧೦೦-೧೦೧
೭. ರಾಮೇಗೌಡ, ೨೦೧೦, ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು, ಪು.ಸಂ.೨೭೬
೮. ರಾಮಕೃಷ್ಣರಾವ್ ಬಿ., ೧೯೧೬, ಶ್ರೀಮನ್ಮಹಾರಾಜರ ವಂಶಾವಳಿ ಭಾಗ-೧, ಪು.ಸಂ.೭೩-೭೪
೯. ಷೇಕ್ ಅಲಿ ಬಿ., ೨೦೧೮, ಕರ್ನಾಟಕ ಚರಿತ್ರೆ, ಸಂ-೪, ಪು.ಸಂ.೧೬೨
೧೦. ರಾಮೇಗೌಡ, ೨೦೧೦, ಪೂರ್ವೋಕ್ತ, ೨೭೭
೧೧. ಅದೇ, ಪು.ಸಂ.೨೭೯
೧೨. ಅದೇ, ಪು.ಸಂ.೨೮೦-೨೮೧
೧೩. ಅದೇ, ಪು.ಸಂ.೨೮೪-೨೮೫
೧೪. ಯೋಗೀಶ್ವರಪ್ಪ ಡಿ.ಎನ್., ೨೦೧೬, ಕನ್ನಡ ಕಾವ್ಯಗಳಲ್ಲಿ ಚಾರಿತ್ರಿಕ ಅಂಶಗಳು, ಪು.ಸಂ.೧೯೨-೧೯೩
೧೫. ಪರಮಶಿವಯ್ಯ ಜೀ.ಶಂ., ೨೦೧೨, ಪಿರಿಯಾ ಪಟ್ಟಣದ ಕಾಳಗ ಮತ್ತು ಇತರ ಕಥನ ಕಾವ್ಯಗಳು, ಪು.ಸಂ.೨೮೬
೧೬. ರಾಮಕೃಷ್ಣರಾವ್ ಬಿ., ೧೯೧೬, ಪೂರ್ವೋಕ್ತ, ಪು.ಸಂ.೯೮
೧೭. ಅದೇ, ಪು.ಸಂ.೧೧೦
೧೮. ಅದೇ, ಪು.ಸಂ.೧೧೪-೧೧೫
೧೯. ಮುದ್ದಾಚಾರಿ ಬಿ., ೨೦೦೧, ಮರಾಠರ ಅತಿಕ್ರಮಣ ಮೈಸೂರಿನ ಪ್ರತಿಭಟನೆ, ಪು.ಸಂ.೨೪
೨೦. ರಾಮಕೃಷ್ಣ ರಾವ್ ಬಿ., ಪೂರ್ವೋಕ್ತ, ಪು.ಸಂ.೧೬೦
೨೧. ಮುದ್ದಾಚಾರಿ ಬಿ., ೨೦೦೧, ಪೂರ್ವೋಕ್ತ, ಪು.ಸಂ.೩೯
೨೨. ಕೆಳದಿ ಗುಂಡಾಜೋಯಿಸ್, ಲಿಂಗಣ್ಣಕವಿಯ ಕೆಳದಿ ನೃಪವಿಜಯ, ಪು.ಸಂ.೨೦೩-೨೦೪
೨೩. ಕರ್ನಾಟಕ ಪರಂಪರೆ ಭಾಗ-೨, ಪು.ಸಂ.

೨೪. ಸುಂದರರಾವ್ ಬ.ನ., ೨೦೧೧, ಬೆಂಗಳೂರಿನ ಇತಿಹಾಸ, ಪು.ಸಂ.೧೮೮

೨೫. ಷೇಕ್ ಅಲಿ ಬಿ., ೨೦೧೮(ಮಮು) ಕರ್ನಾಟಕ ಚರಿತ್ರೆ, ಸಂ-೫, ಪು.ಸಂ. ೧೬೩-೧೬೫

೨೬. ಅದೇ, ಪು.ಸಂ.೧೭೧

೨೭. ಅದೇ, ಪು.ಸಂ.೨೩೧

೨೮. ರಾಮಕೃಷ್ಣರಾವ್, ೧೯೧೬, ಪೂರ್ವೋಕ್ತ, ಪು.ಸಂ.೨೦೯

೨೯. ಲಲಿತ ಕೆ.ಪಿ., ೨೦೧೫, ವಿವಕ್ಷಾ ಕೊಡಗು ಕುರಿತ ಸಂಶೋಧನ ಲೇಖನಗಳು, ಪು.ಸಂ.೬೫

೩೦. ಸುಂದರರಾವ್ ಬ.ನ., ೨೦೧೧, ಪೂರ್ವೋಕ್ತ, ಪು.ಸಂ.೨೨೩

೩೧. ಪರಮಶಿವಯ್ಯ ಜಿ.ಶಂ., ೨೦೧೨, ಪುರ್ವೋಕ್ತ, ಪು.ಸಂ.೨೮೬

## ಅಧ್ಯಾಯ : ಆರು

# ಸಮಾರೋಪ

ಸೈನ್ಯ ಮತ್ತು ಯುದ್ಧದ ಪರಿಕಲ್ಪನೆಗಳು ಪ್ರಾಚೀನ ಕಾಲದಿಂದ ಪ್ರಸ್ತುತದವರೆಗೂ ಮುಂದುವರಿದುಕೊಂಡು ಬಂದಿವೆ. ರಾಜ್ಯದ ಸ್ಥಾಪನೆ ಮತ್ತು ಅದರ ವಿಸ್ತರಣೆಯಿಂದ ಸೈನ್ಯದ ಅಗತ್ಯತೆಯನ್ನು ಮನಗಂಡು ಯುದ್ಧ ಮತ್ತು ಶಾಂತಿಯ ಸಮಯದಲ್ಲಿ ರಾಜ್ಯರಕ್ಷಣೆಯನ್ನು ಮಾಡುವಂತೆ ನೀತಿನಿಯಮಗಳನ್ನು ರೂಪಿಸಬೇಕು. ಸೈನ್ಯವು ವಿವಿಧ ಕಾಲಘಟ್ಟಗಳಲ್ಲಿ ಆಯಾಯ ಪ್ರಭುತ್ವಗಳ ಅಧೀನದಲ್ಲಿ ತಮ್ಮ ಅನುಕೂಲಕ್ಕೆ ಸರಿಹೊಂದುವಂತೆ ಬಳಕೆ ಮಾಡಿಕೊಳ್ಳುವ ಅವಕಾಶವನ್ನು ಹೊಂದಿದೆ. ರಾಜ್ಯವನ್ನು ಪ್ರಭುತ್ವವಲ್ಲದೆ ಜನಸಾಮಾನ್ಯರು ಕೂಡ ಕಾಪಾಡಲು ಪಣತೊಡುತ್ತಾರೆ. ಪ್ರಜೆಗಳು ರಾಜನ ರಕ್ಷಣೆಗೆ ಮತ್ತು ರಾಜನು ಪ್ರಜೆಗಳ ರಕ್ಷಣೆಗೆ ಎಂಬಂತೆ ಇದ್ದ ಪ್ರಾಚೀನ ಕಾಲದ ನೀತಿನಿಯಮಗಳು ಮಧ್ಯಯುಗ ಮತ್ತು ತರುವಾಯದ ದಿನಗಳಲ್ಲಿ ಬದಲಾಗಿ ಅಧಿಕಾರವನ್ನು ತಮ್ಮ ಸ್ವಾರ್ಥಸಾಧನೆಗಾಗಿ ದುರ್ಬಳಕೆ ಮಾಡಿಕೊಳ್ಳುವ ಮಟ್ಟಿಗೆ ಅಧಿಕಾರ ದಾಹವು ಬೆಳೆಯಿತು. ವಿಜಯನಗರದ ತರುವಾಯ ಮತ್ತಷ್ಟು ಹೆಚ್ಚಾಯಿತು.

ವಿಜಯನಗರ ಸಾಮ್ರಾಜ್ಯದಂತೆಯೇ ಮೈಸೂರು ರಾಜ್ಯವು ಕರ್ನಾಟಕ ಇತಿಹಾಸದ ಪುಟಗಳಲ್ಲಿ ಧಾರ್ಮಿಕ, ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಸುಧಾರಣೆಗಳು ಹಾಗೂ ಅವುಗಳು ನಡೆದುಬಂದ ಪರಂಪರೆಯಿಂದ ಮಹತ್ವದ ಸ್ಥಾನವನ್ನು ಪಡೆದಿದೆ. ಈ ಕಾರಣದಿಂದಲೇ ಇಂದಿಗೂ ಕರ್ನಾಟಕದ ಇತಿಹಾಸದಲ್ಲಿ ಸಂಶೋಧಕರ ಆಸಕ್ತಿಯನ್ನು ಕಾಂತಸೂಚಿಯಂತೆ ತನ್ನೆಡೆಗೆ ಆಕರ್ಷಿಸುತ್ತಿದೆ. ಕ್ರಿ.ಶ. ೧೩೯೯ರಲ್ಲಿ ಯದುರಾಯನಿಂದ ಸ್ಥಾಪನೆಯಾದ ಮೈಸೂರು ರಾಜ್ಯವು ವಿಜಯನಗರದ ಅವನತಿಯೊಂದಿಗೆ ತನ್ನ ಬೆಳವಣಿಗೆಯ ವೇಗವನ್ನು ಹೆಚ್ಚಿಸಿಕೊಂಡಿತು. ಆದರೆ ಈ ಸಂದರ್ಭದಲ್ಲಿ ಕೆಲವೊಂದು ರಾಜಮನೆತನಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪರದಾಡಿ ಅವನತಿಯನ್ನು ಹೊಂದಿದವು. ಆದರೆ ಮೈಸೂರು ರಾಜ್ಯವು ಈ ಅಡೆತಡೆಗಳನ್ನು ಮೀರಿ ಬೆಳೆಯಿತು.

ಮೈಸೂರು ರಾಜ್ಯವನ್ನು ಸುಮಾರು ೨೫ ಜನ ಅರಸರು ಆಳ್ವಿಕೆ ಮಾಡಿದ್ದಾರೆ. ಅವರಲ್ಲಿ ಕೆಲವು ಅರಸರು ಅದಕ್ಷರಾಗಿದ್ದರೆ ಮತ್ತೆ ಕೆಲವು ಅರಸರು ತಮ್ಮ ದಕ್ಷತೆಯಿಂದ ರಾಜ್ಯದ ಗಡಿಗಳನ್ನು

ವಿಸ್ತರಿಸಿದ್ದಾರೆ. ರಾಜಒಡೆಯರು ಮೈಸೂರು ರಾಜ್ಯಕ್ಕೆ ಭದ್ರವಾದ ಅಡಿಪಾಯವನ್ನು ಹಾಕಿದರು. ಆದರೆ ಅದನ್ನು ರಕ್ಷಿಸಿ ಮತ್ತಷ್ಟು ವಿಸ್ತರಿಸಿದ ಕೀರ್ತಿ ಕಂಠೀರವ ನರಸರಾಜ ಒಡೆಯ, ಆರನೆಯ ಚಾಮರಾಜ ಒಡೆಯ, ಇಮ್ಮಡಿ ಕೃಷ್ಣರಾಜ ಒಡೆಯ ಮತ್ತು ದಳವಾಯಿಗಳಾದ ದೇವರಾಜಯ್ಯ, ಕರಾಚೂರಿ ನಂಜರಾಜಯ್ಯ, ಮತ್ತು ಹೈದರ್ ಅಲಿಯವರಿಗೆ ಸಲ್ಲುತ್ತದೆ. ಅಲ್ಲದೆ ಹೈದರನ ಕಾಲದಲ್ಲಿ ಮೈಸೂರು ರಾಜ್ಯವು ಕರ್ನಾಟಕವಲ್ಲದೆ ಆಂಧ್ರಪ್ರದೇಶ, ತಮಿಳುನಾಡು ಮತ್ತು ಕೇರಳದ ಮಲಬಾರ್ ತೀರ ಪ್ರದೇಶಗಳಿಗೆ ವಿಸ್ತರಿಸಲ್ಪಟ್ಟಿತು. ಆದರೆ ಟಿಪ್ಪುವಿನ ಕಾಲದಲ್ಲಿ ಕೆಲವೊಂದು ಪ್ರದೇಶಗಳನ್ನು ಕಳೆದುಕೊಳ್ಳಲಾಯಿತಾದರು ಆತನ ಮರಣದ ತರುವಾಯ ಮೈಸೂರು ರಾಜ್ಯವು ಬ್ರಿಟಿಷರ ಸಹಾಯಕ ಸೈನ್ಯಪದ್ಧತಿಗೆ ಒಳಪಟ್ಟಿತು.

ಮೈಸೂರು ರಾಜ್ಯವು ವಿಜಯನಗರದಂತೆಯೇ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಭಾರತೀಯ ಸಾಮ್ರಾಜ್ಯ ಮತ್ತು ಸಂಸ್ಥಾನಗಳ ಮಾದರಿಯಲ್ಲಿ ಆಡಳಿತವನ್ನು ನಿರ್ವಹಿಸಿ ತನ್ನದೇ ಆದ ಛಾಪನ್ನು ಮೂಡಿಸಿದೆ. ಅದಕ್ಕೆ ಅಗತ್ಯವಾದ ಪ್ರೋತ್ಸಾಹವನ್ನು ನೀಡಿದ್ದು ಮೈಸೂರಿನ ಸೈನ್ಯವ್ಯವಸ್ಥೆ. ಆದ್ದರಿಂದ ಪ್ರಸ್ತುತ ಸಂಶೋಧನೆಯಲ್ಲಿ ಮೈಸೂರು ಒಡೆಯರ ಕಾಲದಲ್ಲಿ ಸೈನಿಕ ವ್ಯವಸ್ಥೆಯಲ್ಲಾದ ಹಲವಾರು ಬದಲಾವಣೆಗಳನ್ನಿಟ್ಟುಕೊಂಡು ಸಂಶೋಧನೆ ಮಾಡಲಾಗಿದೆ. ಮುಖ್ಯವಾಗಿ ಸೇನಾ ವಿಭಾಗಗಳು, ಸೈನಿಕ ಆಡಳಿತ, ಸೈನ್ಯಾಡಳಿತದ ಇಲಾಖೆಗಳು ಯುದ್ಧ ವ್ಯವಸ್ಥೆ, ರಕ್ಷಣಾ ವಾಸ್ತುಶಿಲ್ಪ ಯುದ್ಧೋಪಕರಣಗಳು, ಯುದ್ಧನೀತಿ ಮತ್ತು ಅದರ ಪರಿಣಾಮಗಳು ಪ್ರಮುಖವಾಗಿವೆ.

ಕ್ರಿ.ಶ.೧೩೯೯ರಲ್ಲಿ ಯದುರಾಯನಿಂದ ಮೈಸೂರು ರಾಜ್ಯವು ಸ್ಥಾಪನೆಯಾದರೂ ರಾಜಒಡೆಯರ ಕಾಲಾವಧಿಯಲ್ಲಿ ರಾಜ್ಯದ ಗಡಿ ವಿಸ್ತರಣೆಗೊಂಡಿದ್ದನ್ನು ಕಾಣಬಹುದು. ಅಲ್ಲಿಯವರೆಗೆ ಮೈಸೂರಿನ ಯಾವುದೇ ಅರಸರು ರಾಜ್ಯವಿಸ್ತರಣೆಗೆ ಮುಂದಾಗಲಿಲ್ಲ. ಕಾರಣ ಅವರು ವಿಜಯನಗರ ಸಾಮ್ರಾಜ್ಯದ ಸಾಮಂತರಾಗಿದ್ದರು. ಆಯಾಯ ಕಾಲಕ್ಕನುಗುಣವಾಗಿ ಒಡೆಯರು ತಮ್ಮ ಸೈನ್ಯವನ್ನು ಹೆಚ್ಚಿಸಿ ಆಡಳಿತವನ್ನು ವಿಸ್ತರಣೆಗೊಳಿಸಿದ್ದನ್ನು ಕಾಣಬಹುದು. ಇವರ ೫೩೧ ವರ್ಷಗಳ ಸುದೀರ್ಘವಾದ ಆಳ್ವಿಕೆಯಲ್ಲಿ ೨೨೧ ವರ್ಷಗಳನ್ನು ದಾಳಿ, ಆಕ್ರಮಣ ಮತ್ತು ಯುದ್ಧಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದುದು ನೈಜನೀಯ ಸಂಗತಿ.

ಮೈಸೂರು ಒಡೆಯರ ಸೈನಿಕ ವ್ಯವಸ್ಥೆಯು ಪ್ರಾರಂಭದ ಅರಸರ ಕಾಲದಲ್ಲಿ ಅಷ್ಟೇನು ಪ್ರಾಮುಖ್ಯತೆಯನ್ನು ಪಡೆದಿರಲಿಲ್ಲ. ಕಾಲಕ್ರಮೇಣ ರಾಜ್ಯದ ಗಡಿಗಳ ವಿಸ್ತರಣೆಯಾದ ನಂತರವಷ್ಟೇ ಶಿಸ್ತುಬದ್ಧವಾದ ತರಬೇತಿ ಮತ್ತು ಯುದ್ಧನೀತಿಗಳನ್ನು ಹೊಂದಿದ ರಾಜ್ಯ ವಿಸ್ತರಣೆಯಾಗಲು ಸಾಧ್ಯವಾಯಿತು. ವಿವಿಧ ಅರಸರು ತಮ್ಮ ಆಳ್ವಿಕೆಯ ಸಂದರ್ಭದಲ್ಲಿ ರಾಜ್ಯರಕ್ಷಣೆಗೆ ಅಗತ್ಯವಾಗಿದ್ದ ಸೇನಾಬಲವನ್ನು ರಾಜ್ಯದ ಗಡಿಗಳ ಅವಶ್ಯಕತೆಗೆ ಅನುಗುಣವಾಗಿ ಹೆಚ್ಚಿಸಿಕೊಂಡರು. ಇದು ಮೈಸೂರಿನ ಮೇಲೆ ಅನ್ಯರ ಹಠಾತ್ ದಾಳಿಗಳು ಮತ್ತು ಆಕ್ರಮಣಗಳನ್ನು ತಡೆದು ರಾಜ್ಯವನ್ನು ರಕ್ಷಿಸಲು ಸಹಕರಿಸಿತು.

